ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೧೫

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣಂ

(ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ)

## ಪ್ರಥಮಖಂಡ—ಐದನೆಯ ಭಾಗ

ಅನುವಾದಕ:
**ಚಾಮರಾಜನಗರದ ವೆಂಕಟರಮಣಶಾಸ್ತ್ರೀ.**

ಮೈಸೂರು
ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್
೧೯೪೫

# ಪ್ರಸ್ತಾವನೆ.

---

ಚತುರ್ದಶಭುವನಾಧೀಶ್ವರನಾದ ಪರಮಪುರುಷೋತ್ತಮನ ಪರಮಾನುಗ್ರಹ ದಿಂದಲೂ ಕರ್ಣಾಟಕ ಸಿಂಹಾಸನಾಧೀಶ್ವರರಾದ **ಶ್ರೀಜಯಚಾಮರಾಜೇಂದ್ರ ವಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ.** ಮಹಾಪ್ರಭುಗಳ ಉದಾರಾಶ್ರಯ ದಿಂದಲೂ ಈ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡವು ಐದು ಸಂಪುಟ ಗಳಾಗಿ ಈಗ ಕನ್ನಡನಾಡಿನಲ್ಲಿ ಪ್ರಕಟವಾಗಿರುವುದು. ಈ ಮಹಾಪುರಾಣದಲ್ಲಿ ರಾಮಾಯಣ, ಭಾರತ, ದೇವೀಭಾಗವತ, ಪದ್ಮಪುರಾಣ, ಹರಿವಂಶವೇ ಮುಂತಾದ ಸಕಲ ಪುರಾಣಗಳಲ್ಲಿರುವ ವಿಷಯಗಳಲ್ಲದೆ ಬೇರೆ ಬೇರೆ ಇನ್ನೂ ಅನೇಕ ಮಹದ್ವಿಷಯ ಗಳು ಬಂದಿರುವುವು.

ಈ ಪ್ರಸಕ್ತಸಂಪುಟದಲ್ಲಿ ಕುಮಾರಸ್ವಾಮಿಯ ಉತ್ಪತ್ತಿಯೂ, ರಾವಣ ದಿಗ್ವಿ ಜಯವೂ ವಿಶೇಷವಾಗಿ ಬಂದಿರುವುದನ್ನು ವಿಷಯಾನುಕ್ರಮಣಿಕೆಯಿಂದ ತಿಳಿಯ ಬಹುದು. ಮುಖ್ಯವಾಗಿ ಶ್ರೀಮದ್ರಾಮಾಯಣದ ಉತ್ತರಕಾಂಡದ ಕಥೆಯು ವಿಶೇಷ ರೀತಿಯಿಂದ ಈ ಪುರಾಣದಲ್ಲಿ ಹೇಳಲ್ಪಟ್ಟಿದೆ. ಶೈಲೂಷನೆಂಬ ಗಂಧರ್ವರಾಜನಿಗೂ ಭರತನಿಗೂ ನಡೆದ ಯುದ್ಧವೂ ಕಡೆಗೆ ಶೈಲೂಷನು ಭರತನಿಂದ ಸಂಹೃತನಾದ ವಿಷ ಯವೂ ಇದರಲ್ಲಿ ವಿಶೇಷವಾಗಿ ವರ್ಣಿತವಾಗಿದೆ. ಈ ಶೈಲೂಷನ ಮಗಳಾದ ಸರಮೆ ಯನ್ನು ರಾವಣನ ಕಿರೀ ತಮ್ಮನಾದ ವಿಭೀಷಣನಿಗೆ ಕೊಟ್ಟು ಲಗ್ನವಾಗಿದ್ದಿತೆಂಬ ಸಂಗತಿಯು ಉತ್ತರರಾಮಾಯಣದಲ್ಲಿ ಬಂದಿದೆ. ಶತ್ರುಘ್ನನು ಲವಣಾಸುರನನ್ನು ಕೊಂದು ಲೋಕೋದ್ಧಾರಮಾಡಿದ ಸಂಗತಿಯೂ, ಶ್ರೀರಾಮನು ಲಕ್ಷ್ಮಣನಿಗೆ ವಿವರಿ ಸಿದ ಷಡೃತುಗಳ ವರ್ಣನೆಗಳೂ ವಾಚಕರನ್ನು ವಿಸ್ಮಿತರನ್ನಾಗಿಮಾಡುತ್ತಲಿವೆ. ಆನೆ ಗಳ ಮತ್ತು ಕಪಿಗಳ, ಯಕ್ಷರಾಕ್ಷಸರ ಉತ್ಪತ್ತಿಯನ್ನೂ. ಗಜವಾನರ ಯುದ್ಧವನ್ನೂ ಇದರಲ್ಲಿ ನಾವು ಓದಬಹುದು.

ಮೃತ್ಯುವಶನಾಗಿದ್ದ ಶ್ವೇತಋಷಿಯು ಮೃತ್ಯುಂಜಯನ ವರಪ್ರಸಾದದಿಂದಲೂ ವಿಷ್ಣುಕವಚದಿಂದಲೂ ಬದುಕಿಕೊಂಡ ಕಥೆಯೂ, ರಾವಣನಿಗೆ ಬಲಿಚಕ್ರವರ್ತಿಯ ಮನೆಯ ಬಾಗಿಲಿನಲ್ಲೂ, ಪಾತಾಳಲೋಕದಲ್ಲೂ ಆದ ವಿಶ್ವರೂಪದರ್ಶನ ವೃತ್ತಾಂತವೂ ಓದುಗರ ಕಣ್ಣುಗಳಲ್ಲಿ ನೀರು ತರದೆ ಇರಲಾರದು.

ಇಂದ್ರಪಟ್ಟಾಭಿಷೇಕ ವೃತ್ತಾಂತವೂ, ವಿಷ್ಣುರಕ್ಷಾಕವಚ ಪಾರಾಯಣವೂ, ಜನರ ಸಕಲ ದುರಿತಗಳನ್ನೂ ಪರಿಹಾರಮಾಡಿ ಪರಿಶುದ್ಧರನ್ನಾಗಿಮಾಡುವ ಮಹಾ

ಮಹಿಮೆಯುಳ್ಳ ಅಧ್ಯಾಯಗಳಾದುದರಿಂದ ಆಸ್ತಿಕರೆಲ್ಲರೂ ಇವೆರಡು ಅಧ್ಯಾಯಗಳನ್ನು ನಿತ್ಯ ಪಾರಾಯಣದಲ್ಲಿಟ್ಟುಕೊಳ್ಳೋಣವರಿಂದ ಅವರ ಸಕಲ ಇಷ್ಟಾರ್ಥಗಳೂ ನೆರ ವೇರಲು ಅಡ್ಡಿಯಿಲ್ಲ. ಯಂತ್ರಮಂತ್ರಗಳನ್ನು ಮಾಡುವವರಿಗೂ, ಬಾಲಗ್ರಹ ಚಿಕಿತ್ಸೆಮಾಡುವವರಿಗೂ ಈ ಗ್ರಂಥದಿಂದ ಬಹಳ ಉಪಯೋಗವುಂಟು.

ಯಮುನಾತೀರವಾಸಿಗಳಾದ ಸಕಲ ಋಷಿಗಳೂ ಅಯೋಧ್ಯಾಪಟ್ಟಣಕ್ಕೆ ಬಂದು ಲವಣಾಸುರನಿಂದಾಗುತ್ತಿರುವ ಹಿಂಸೆಯನ್ನು ಶ್ರೀರಾಮನಿಗೆ ಹೇಳಿ ಅವನ ವಧೆಗಾಗಿ ಶತ್ರುಘ್ನನನ್ನು ಜತೆಯಲ್ಲಿ ಕರೆದುಕೊಂಡು ಹೋದ ಪ್ರಸಂಗದಲ್ಲಿ ಚ್ಯವನಋಷಿಗಳನ್ನು ಮುಂದೆಬಿಟ್ಟುಕೊಂಡು ಬಂದಿದ್ದರೆಂದು ಈ ಪುರಾಣವಲ್ಲಿ ಹೇಳಿರುವುದು ರಾಮಾಯಣದ ಉತ್ತರಕಾಂಡವು ಅಗಸ್ತ್ಯಋಷಿಗಳನ್ನು ಕರೆದುಕೊಂಡು ರಾಮನೊಡನೆ ಮಾತ ನಾಡಿದರೆಂದು ಹೇಳಿರುವುದರಿಂದ ಕೆಲಕೆಲವು ವ್ಯತ್ಯಾಸಗಳು ಬೇರೆ ಬೇರೆ ಪುರಾಣ ಗಳಲ್ಲಿ ಬೇರೆ ಬೇರೆ ರೂಪವಾಗಿ ಹೇಳಲ್ಪಟ್ಟಿವೆಯೆಂದು ಇವರಿಂದ ಗೊತ್ತಾಗುವುದು. ಒಬ್ಬರೇ ವ್ಯಾಸರು ಬರೆದಿರುವ ಅನೇಕ ಪುರಾಣಗಳಲ್ಲಿ ಬೇರೆ ಬೇರೆ ಭೇದಗಳನ್ನೇಕೆ ಬರೆದಿರುವರೆಂದು ಎಲ್ಲರೂ ಸಂದೇಹಪಡಬಹುದು. ಆದರೆ ಈರೀತಿ ಭಾವಿಸದೆ ವಿಷ್ಣುರೂಪಿಗಳಾದ ವ್ಯಾಸರು ಹೇಳಿರುವುದನ್ನೆಲ್ಲಾ ನಾವು ನಂಬಿ ಸಾರಾಂಶವನ್ನು ಮಾತ್ರ ಗ್ರಹಿಸಬೇಕೇ ಹೊರತು ಭಿನ್ನಬುದ್ಧಿಗೆ ಅವಕಾಶಕೊಡಬಾರದು. ಸೃಷ್ಟಿ ಯಲ್ಲಿ ನಡೆಯುತ್ತಿರುವ ಮತ್ತು ನಡೆದಿರುವ ಸಕಲ ವೃತ್ತಾಂತಗಳನ್ನೂ ಬಿಡದೆ ಅವರವರ ಅಭಿರುಚಿಗೆ ತಕ್ಕಂತೆ ಬರೆದಿರುವ ಪುರಾಣಗಳ ವಿಷಯದಲ್ಲಿ ನಾವು ಗೌರವ ವನ್ನು ಕೊಡಲೇ ಬೇಕು. ಪ್ರತಿಯೊಬ್ಬರಿಗೂ ಪರಮತ ಸಹನೆಯಿರಬೇಕು. ದೇವರು ಒಬ್ಬನೇ ಆದರೂ ನಾನಾ ಅವತಾರಗಳನ್ನು ಕಾಲಾನುಸಾರವಾಗಿ ಮಾಡಿ ಅಧರ್ಮ ವನ್ನು ನಿರ್ಮೂಲಮಾಡಿ ಧರ್ಮಸಂಸ್ಥಾಪನೆಮಾಡುವನೆಂಬುದನ್ನು ನಾವು ಗ್ರಹಿಸ ಬೇಕು. ಈ ಅಭಿಪ್ರಾಯವಿಟ್ಟುಕೊಂಡೇ ಸಕಲ ಪುರಾಣಗಳೂ ಲಿಖಿತವಾಗಿವೆ.

ಬಹುಕಾಲದಿಂದಲೂ ಎಲ್ಲಿಯೋ ಅಡಗಿಕೊಂಡಿದ್ದ ವೇದಶಾಸ್ತ್ರ ಪುರಾಣೇತಿ ಹಾಸಾದಿ ಪರಮಪವಿತ್ರವಾದ ಪೂಜ್ಯಗ್ರಂಥಗಳೆಲ್ಲವೂ ಬಹು ಕಠಿಣಭಾಷೆಯಾದ ಸಂಸ್ಕೃತಭಾಷೆಯಲ್ಲಿರುವುದನ್ನು ಕನ್ನಡಭಾಷೆಗೆ ಪರಿವರ್ತನಗೊಳಿಸಿ ಕನ್ನಡ ಸರಸ್ವತಿಯ ಸೇವೆಯನ್ನು ಗೈಯುತ್ತಿರುವ ನಮ್ಮ **ಶ್ರೀಮನ್ಮಹಾರಾಜರವರಾದ ಶ್ರೀ ಜಯ ಚಾಮರಾಜೇಂದ್ರ ವಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ.** ಮಹಾ ಪ್ರಭುಗಳನ್ನು ಭಗವಂತನು ಚಿರಕಾಲ ಕಾಪಾಡಲೆಂದು ಪ್ರಾರ್ಥಿಸುತ್ತೇನೆ.

ಅಧ್ಯಾತ್ಮರಾಮಾಶ್ರಮ, ಮೈಸೂರು. **ಚಾ. ವೆಂಕಟರಮಣಶಾಸ್ತ್ರೀ,**

೧೨-೬-೧೯೪೫ ಅನುವಾದಕ.

# ವಿಷಯಾನುಕ್ರಮಣಿಕೆ.

---

ಪ್ರಥಮಖಂಡ ಒಟ್ಟು ಅಧ್ಯಾಯಗಳು ೨೬೯ಕ್ಕೆ ಸಮನಾಗಿ ಆಗುವ ಶ್ಲೋಕಗಳ ಸಂಖ್ಯೆ ೮೧೭೦ಕ್ಕೆ ಮಂಗಳಮಸ್ತು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡವು ಮುಗಿಯಿತು.

---

॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತವಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ ॥

॥ ಶೈಲೂಷ ಉವಾಚ ॥

ಮಾತೃದೋಷಪ್ರಶಮನಾನ್ಮಹೇಶ್ವರಮುಖೋದ್ಗತಾನ್ ।
ಪ್ರಯೋಗಾಂಚ್ಛ್ರೋತುಮಿಚ್ಛಾಮಿ ವದತಸ್ತೇ ದ್ವಿಜೋತ್ತಮ ॥ ೧ ॥

॥ ನಾಡಾಯನ ಉವಾಚ ॥

ಚೋಚಕಂ ತು ವಚಾ ಕುಷ್ಠಂ ಬ್ರಹ್ಮಭೂತಜಟೀ ಶುಭೇ ।
ಕಾಲಮಂಜಾ ಹರಿದ್ರೇ ದ್ವೇ ಯವಚೂರ್ಣವಿಮಿಶ್ರಿತಂ ॥ ೨ ॥

---

### ಇನ್ನೂರ ಇಪ್ಪತ್ತೇಳನೆಯ ಅಧ್ಯಾಯವು.

೧. ಶೈಲೂಷನು ನಾಡಾಯನನನ್ನು ಕುರಿತು ಪುನಃ ಪ್ರಶ್ನೆಮಾಡುತ್ತಾನೆ:—

ಮೇಲೆ ಹೇಳಿದ ಮಾತೃಗ್ರಹಗಳು ಮನುಷ್ಯರನ್ನು ಹಿಡಿದಾಗ ಅವುಗಳು ಆ ಮನುಷ್ಯನನ್ನು ಬಿಟ್ಟು ಹೋಗುವುದಕ್ಕಾಗಿ ಯಾವ ಪ್ರಯೋಗವನ್ನು ಈಶ್ವರನು ಹೇಳಿರುವನೋ, ಆ ಪ್ರಯೋಗ ಕ್ರಮವನ್ನು ಸ್ವಲ್ಪ ಹೇಳಿ, ಸ್ವಾಮಿ ನಾಡಾಯನರೇ !

೨-೩. ನಾಡಾಯನರು ಮಾತೃಗ್ರಹಬಾಧಾ ನಿವಾರಣೆಯಾಗಲು ಮಾಡಬೇಕಾದ ಒಂದು ಸ್ನಾನಕ್ರಮವನ್ನು ನಿರೂಪಿಸುತ್ತಾರೆ:—

ಅಯ್ಯಾ, ಶೈಲೂಷ! ಕೇಳು. ಲವಂಗ, ಚಂಗಲಕೋಷ್ಠ, ಬಜೆ (ಮಕ್ಕಳ ತಾಯಿ), ಜಟಾಮಾಂಸಿ, ಕಾಲಮಂಜೆ, ಅರಸಿನದ ಕೊನೆ ಇವುಗಳನ್ನು ತೆಯ್ದು ಒಟ್ಟಿಗೆ

**ಉದ್ವರ್ತನಮಿದಂ ಪ್ರೋಕ್ತಂ ಮಾತೃದೋಷವಿನಾಶನಂ ।**
**ಅರಿಷ್ಟಾರಿಷ್ಟಪತ್ರಾಣಿ ತಾಲಜೀವಕಯೋಸ್ತಥಾ ॥ ೩ ॥**

**ಶಿಂಶುಪಾಮಲಕೀಬಿಲ್ವಕಪಿತ್ಥಾನಾಂ ತಥೈವ ಚ ।**
**ಬಹುಕಾರತ್ವಚಂ ಪೂರ್ವಾಂ ತಥೈವ ಚ ಪುನರ್ನವಾಂ ॥ ೪ ॥**

**ಭಾಂಗೀರ್ಕ್ವಾಥಮಿದಂ ಸ್ನಾನಂ ಮಾತೃದೋಷವಿನಾಶನಂ ।**
**ಅರಿಷ್ಟಕಂ ತಥಾ ಬಿಲ್ವಂ ಪದ್ಮಾಕ್ಷಂ ಫಲಿನೀಫಲಂ ॥ ೫ ॥**

**ವಚಾ ಕುಷ್ಠಂ ಚ ಮುಸ್ತಂಚ ವಾಲಕಂ ರಜನೀದ್ವಯಂ ।**
**ಚಂದನಂ ಕುಂಕುಮಂ ಚೈವ ನಾಗದಾನಂ ಚ ರೋಚನಾ ॥ ೬ ॥**

---

ಬೆರಸಿ ಗರಿಕೆಸೊಪ್ಪಿನ ರಸದಲ್ಲರೆದು ನೀರಿಗೆ ಕದರಿ ಆ ನೀರಿನಿಂದ ಸ್ನಾನಮಾಡಿಸಿದರೆ ಮಾತೃಗ್ರಹ ದೋಷವು ನಿವಾರಣೆಯಾಗುವುದು. (ಮಕ್ಕಳ ಬಾಲಗ್ರಹದ ಔಷಧವಿದು.)

೪-೫. ಅಥವಾ ಬೇವಿನಸೊಪ್ಪು, ಅಂಟವಾಳ, ಹರಿದಳ, ಹೊನ್ನೇಸೊಪ್ಪುಗಳನ್ನೂ, ಶಿಂಶುಪಾ, ನೆಲ್ಲಿ, ಬಿಲ್ವಪತ್ರೆ, ಬೇಲದ ಸೊಪ್ಪುಗಳನ್ನು ಬೆರಸಿ, ಕೊಮ್ಮೆ ಚಿಗುರು, ಭಂಗೀಸೊಪ್ಪುಗಳೊಡನೆ ಬೆರಸಿ, ಅರೆದು ಅದನ್ನು ನೀರಿಗೆ ಕದರಿ ಸ್ನಾನ ಮಾಡಿ (ಸಿ) ದರೆ ಮಾತೃಗ್ರಹ ದೋಷವು ನಿವಾರಣೆಯಾಗುವುದು.

೬-೭. ತುಂಗಮುಸ್ತೆ ಅಥವಾ ಕೊನ್ನಾರೆಗೆಡ್ಡೆಯ ಎಳೇಬೇರು, ಗಂಧ, ಕುಂಕುಮ, ನಾಗದಾಳೀಸೊಪ್ಪು ಇವನ್ನೆಲ್ಲಾ ತಂದು, ಒಂದು ಬಿಂದಿಗೆ ನೀರಿಗೆ ಬೆರಸಿ ಸ್ನಾನಮಾಡಿಸಿದರೆ ಮಾತೃಗ್ರಹವು ಕೂಡಲೆ ಬಿಟ್ಟುಹೋಗುವುದು.

ಟಿಪ್ಪಣಿ :—ಗ್ರಹಹಿಡಿದವರಿಗೆ, ಹೆದರಿಕೊಂಡಿರುವವರಿಗೆ ಪೂಜೆ ಹಾಕುವುದೆಂಬ ಒಂದು ಕ್ರಮವು ಈಗಲೂ ರೂಢಿಯಲ್ಲಿದೆ. ಇದನ್ನು ಅಲ್ಲಲ್ಲಿಯೇ ನಾವು ನೋಡುತ್ತಿರುವೆವು. ಇದರ ಪ್ರಯೋಗವನ್ನು ಕಲಿತವರು ಅನೇಕರಿರುತ್ತಾರೆ. ಈ ಪೂಜೆಯನ್ನು ಅರ್ಧರಾತ್ರಿ ಅಥವಾ ಮುಚ್ಚಂದೆ (ಸಾಯಂಕಾಲ) ಸಮಯದಲ್ಲಿ ಹಾಕುತ್ತಾರೆ. ಇದಕ್ಕಾಗಿ ಯಾವ ವಿಧ ಸ್ನಾನಗಳನ್ನು ಮಾಡಿಸಬೇಕೋ ಯಾವ ಕ್ರಮದಲ್ಲಿ ಪೂಜೆಮಾಡಬೇಕೋ ಅದನ್ನೆಲ್ಲಾ ಈ ಮಹಾಗ್ರಂಥದಲ್ಲಿ ಬರೆದಿದ್ದಾರೆ. ಈ

ಏತಾನಿ ಸರ್ವಾಣ್ಯಾಹೃತ್ಯ ಪೂರ್ಣಕುಂಭೇ ವಿನಿಕ್ಷಿಪೇತ್ ।
ಸ್ನಾನಮೇತತ್ಪ್ರಯೋಕ್ತವ್ಯಂ ಮಾತೃದೋಷವಿನಾಶನಂ ॥ ೭ ॥

ಕುಸುಮೈಃ ಪಂಚವರ್ಣೈಸ್ತು ಧೂಪೈರ್ನಿರ್ಯಾಸಜೈಸ್ತಥಾ ।
ಕುಂಕುಮಾಗುರುಕರ್ಪೂರಚಂದನೈಶ್ಚ ಮನೋರಮೈಃ ॥ ೮ ॥

ದೀಪೈರ್ಭಕ್ಷ್ಯೈಸ್ತಥಾ ಕ್ಷೀರೈಃ ಕುಲ್ಮಾಷೋಲ್ಲೋಪಿಕಾಗುಡೈಃ ।
ಪಾಯಸೈರ್ಮಧುಸಂಮಿಶ್ರೈಃ ಪಲಲೇನೋದನೇನ ಚ ॥ ೯ ॥

ಬಲಿಃ ಸುವಿಹಿತೋ ರಾಜನ್ಮಾತೃದೋಷವಿನಾಶನಂ ।
ದೂರ್ವಾಪ್ರವಾಲಮಂಜಿಷ್ಠಾ ನಾಗರಂ ನಾಗಕೇಶರಂ ॥ ೧೦ ॥

---

ಕ್ರಮದಿಂದ ಪೂಜೆ ಹಾಕಿದರೆ ನಿಜವಾಗಿಯೂ ಅಂಜಿಕೆ, ಬೆದರಿಕೆ, ಗ್ರಹಬಾಧೆಗಳೆಲ್ಲಾ ಬಿಟ್ಟುಹೋಗುವುದರಲ್ಲಿ ಸಂಶಯವಿಲ್ಲ. ಆ ಪ್ರಯೋಗವನ್ನು ಚೆನ್ನಾಗಿ ಕಲಿಯದೆ ಇದ್ದವರೂ ಸಹ ಈಗ ಬರೆದಿರುವ ಶಾಸ್ತ್ರಮರ್ಯಾದೆಯಂತೆ ಆಪ್ರಯೋಗವನ್ನು ಚೆನ್ನಾಗಿ ಅಭ್ಯಾಸಮಾಡಲಿ. ಈ ಗ್ರಹಗಳೂ, ಭೂತಗಳೂ, ಪಿಶಾಚಾದಿಗಳೂ ಸಹ ಪ್ರಪಂಚವನ್ನು ಕಾಪಾಡಬೇಕೆಂದು ಈಶ್ವರನ ಶಾಸನವು ಇದೆಯೇ ಹೊರ್ತು ಅವುಗಳಿಂದ ತೊಂದರೆಯಾಗುವುದಿಲ್ಲ. ಮಕ್ಕಳು ಮರಿಯುಳ್ಳವರು ಸಮಯದಲ್ಲಿ ಗಾಬರಿಪಡದೆ ಈ ವಿಧವಾದ ಕ್ರಮದಿಂದ ಚಿಕಿತ್ಸೆ ನಡೆಸಿ ಪ್ರಯೋಜನ ಹೊಂದಿದರೆ ಈ ಗ್ರಂಥವನ್ನು ಬರೆಯುವುದಕ್ಕಾಗಿ ಪಟ್ಟಿರುವ ಶ್ರಮವು ಸಾರ್ಥಕವಾಗುವುದು.

೮-೧೦ ಈ ರೀತಿ ಉದ್ವರ್ತನಾ (ಸ್ನಾನಾ) ನಂತರ ಐದು ಬಣ್ಣದ ಹೂವುಗಳನ್ನು ತಂದು, ಬಣ್ಣದ ರಂಗವಲ್ಲಿಯ ಮಂಡಲದ ಮೇಲೆ ಇಟ್ಟಿರುವ ಮಾತೃಗ್ರಹಕ್ಕೆ ಪೂಜೆಮಾಡಬೇಕು. ಬಳಿಕ ಸಾಂಬ್ರಾಣಿ ಧೂಪದ ಹೊಗೆಯನ್ನು ಹಾಕಬೇಕು. ಮತ್ತು ಕೆಂಪಿನ ಅಗುರುಚಕ್ಕೆಹುಡಿ, ಕರ್ಪೂರದ ಹುಡಿ, ಗಂಧದ ಹುಡಿಗಳ ಧೂಪಗಳನ್ನು ಹಾಕಬೇಕು. ಮಂಡಲದ ಸುತ್ತಲೂ ದೀಪಗಳನ್ನು ಹತ್ತಿಸಬೇಕು. ವಿವಿಧ ಭಕ್ಷ್ಯಗಳನ್ನೂ, ಹಾಲು, ಹಲಸಂದೆ ಹಿಟ್ಟಿನ ತಂಬಿಟ್ಟು, ಜೇನುತುಪ್ಪಬೆರಸಿದ ಪಾಯಸ, ಕುಂಕುಮ ಕಲಸಿದ ಅನ್ನ ಅಥವಾ ಮಾಂಸ ಬೆರಸಿದ ಅನ್ನ, ಇವುಗಳಿಂದ ಆ ಗ್ರಹಗಳಿಗೆ ಬಲಿಯನ್ನು ಹಾಕಬೇಕು. ಇಂತು ಮಾಡಿದ ಬಲಿದಾನದಿಂದ ತೃಪ್ತರಾಗಿ ಮಾತೃಗ್ರಹಗಳು ಬಿಟ್ಟು ಹೊರಟು ಹೋಗುವರು.

ರೋಚನಾಕುಂಕುಮಂ ಚೈವ ಚಂದನಂ ಚ ತಥಾ ವಚಾ ।
ವಿಲೇಪನಮಿದಂ ಶ್ರೇಷ್ಠಂ ಮಾತೃದೋಷವಿನಾಶನಂ ॥ ೧೧ ॥

ಗಜಾಶ್ವಕಪಿವಾರಾಹನಖಾನಿ ಚ ಘೃತಂ ತಥಾ ।
ಶ್ರೇಷ್ಠೋಽಯಂ ಕಥಿತೋ ಧೂಪೋ ಮಾತೃದೋಷವಿನಾಶನಃ ॥ ೧೨ ॥

ಸಿದ್ಧಂ ಘೃತಂ ಚಾಪ್ಯಥ ಪಂಚಗವ್ಯಂ
ಪುರಾಣಮಶ್ನಂತಿ ಹಿ ಯೇ ನರೇಂದ್ರ ।
ತೇಷಾಂ ಭಯಂ ನೈವ ಹಿ ಮಾತೃಜಾತಂ
ಭಾವ್ಯಂ ಕದಾಚಿದ್ಗ್ರಹಸಂಭವಂ ವಾ ॥ ೧೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಮಾತೃಬಾಧಾಪ್ರತಿಷೇಧೋನಾಮ
ಸಪ್ತವಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ.

---

೧೧. ಹುಲ್ಲು, ಹವಳದ ಸೊಪ್ಪು, ನಾಗಕೇಸರಿ ಹೂವು, ಕುಂಕುಮ, ಗಂಧ, ಇವುಗಳ ಲೇಪನದಿಂದ ಮಾತೃಗ್ರಹದೋಷ ನಿವಾರಣೆಯಾಗುವುದು.

೧೨-೧೩. ಆನೆ, ಕುದುರೆ, ಕಪಿ, ಹಂದಿ ಇವುಗಳ ಉಗುರುಗಳನ್ನು ತಂದು ಗಂಧದ ಕಲ್ಲಿನ ಮೇಲೆ ತೆಯ್ದು ತುಪ್ಪದಲ್ಲಿ ಬೆರಸಿ, ಆ ತುಪ್ಪದ ಧೂಪವನ್ನು ಹಾಕಿದರೆ ಮಾತೃಗ್ರಹಗಳು ಓಡಿಹೋಗುವುವು. ಎಲ್ಲ ವಿಧವಾದ ಧೂಪಗಳಿಗಿಂತ ಈ ಧೂಪವೇ ಬಹು ಶ್ರೇಷ್ಠವಾದರೂ ಪಂಚಗವ್ಯಕ್ಕೆ ಹಳೇತುಪ್ಪವನ್ನು ಬೆರೆಸಿ, ಶಾಸ್ತ್ರಿಗಳಿಂದ ಸಂಕಲ್ಪ ಹೇಳಿಸಿ ತಿನ್ನಿಸಿದರೆ, ಅಂಥವರಿಗೆ ಬಂದ ಗ್ರಹಬಾಧೆಯು ಬಿಟ್ಟು ಹೋಗುವುದಲ್ಲದೆ ಮುಂದೆ ಎಂದೆಂದಿಗೂ ಅದು ಆ ಕಡೆ ಸುಳಿಯುವುದೇ ಇಲ್ಲ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಮಾತೃಬಾಧಾ ಪ್ರತಿಷೇಧವೆಂಬ
ಇನ್ನೂರ ಇಪ್ಪತ್ತೇಳನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಅಷ್ಟಾವಿಂಶತ್ಯುತ್ತರದ್ವಿಶತತಮೋಽಧ್ಯಾಯಃ ॥

॥ ನಾಡಾಯನ ಉವಾಚ ॥

ತಸ್ಯ ದೇವಾದಿದೇವಸ್ಯ ಪ್ರಭಾವಮಪರಂ ಶೃಣು ।
ಕಥ್ಯಮಾನಂ ಮಯಾ ರಾಜನ್ಸರ್ವಕಲ್ಮಷನಾಶನಂ ॥ ೧ ॥

ಶಂಕರಃ ಪಾರ್ವತೀ ಚೈವ ಸ್ಪರ್ಧಮಾನೌ ಪರಸ್ಪರಂ ।
ಚಕ್ರತುರ್ಮೈಥುನಂ ರಾಜನ್ಸಾಗ್ರಂ ವರ್ಷಶತಂ ಕಿಲ ॥ ೨ ॥

ತಯೋರನ್ಯತರಸ್ಯಾಸೀದ್ಯದಾ ನೈವ ಪರಾಜಯಃ ।
ತತಸ್ತು ದೇವತಾ ಖಿನ್ನಾಃ ಪರಸ್ಪರಮಥಾಬ್ರುವನ್ ॥ ೩ ॥

---

### ಇನ್ನೂರಿಪ್ಪತ್ತೆಂಟನೆಯ ಅಧ್ಯಾಯವು.

೧-೨. ನಾಡಾಯನ ಮಹರ್ಷಿಗಳು ಶೈಲೂಷನನ್ನು ಕುರಿತು ಆ ತ್ರಿಪುರಾಂತಕನ ಮಹಿಮೆಯನ್ನು ಮತ್ತೂ ಹೇಳುವರದೆಂತೆನೆ :—

ಆ ಪರಮಪುರುಷನಾದ ಮಹಾದೇವನ ಇನ್ನೊಂದು ಮಹಿಮೆಯನ್ನು ಹೇಳುವೆನು, ಕೇಳು. ಈ ಕಥೆಯು ಪರಮಪಾವನವಾದುದು. ಪಾರ್ವತಿಯೂ ಪರಮೇಶ್ವರನೂ ಹಠಮಾಡಿಕೊಂಡು ಒಬ್ಬರೊಡನೊಬ್ಬರು ಸ್ಪರ್ಧೆಮಾಡುತ್ತಾ (ನಾನು ಹೆಚ್ಚು ತಾನು ಹೆಚ್ಚೆಂದು) ಒಂದು ನೂರು ವರ್ಷದವರೆಗೆ ಎಡೆಬಿಡದೆ ರತಿಕ್ರೀಡೆಯಲ್ಲಿ ನಿರತರಾಗಿದ್ದರು.

೩. ಈ ರೀತಿ ಮಾಡಿದ ಮದನನ ಕದನವಲ್ಲಿ ಯಾರೂ ಸೋಲದೆ ಮಾರಕೇಳಿಯನ್ನು ಮುಂಬರಿಸುತ್ತಲೇ ಇರಲು, ದೇವತೆಗಳು ಮಹಾಖಿನ್ನರಾಗಿ ಒಬ್ಬರಿಗೊಬ್ಬರು ಈರೀತಿ ಮಾತನಾಡಿಕೊಂಡರು.

ಅತ್ರೋತ್ಪತ್ಸ್ಯತಿ ಯೋ ಗರ್ಭಸ್ತ್ರೈಲೋಕ್ಯಂ ಸಚರಾಚರಂ ।
ತೇಜಸಾ ಮೋಹಿತಂ ತಸ್ಯ ಭವಿಷ್ಯತಿ ನ ಸಂಶಯಃ ॥ ೪ ॥

ತಸ್ಮಾತ್ತ್ವಮತ್ರ ಪ್ರವಿಶ ದೇವದೇವ ಹುತಾಶನ ।
ಏವಮುಕ್ತಸ್ತದಾ ವಹ್ನಿಃ ಪ್ರವಿವೇಶ ಸುರೋತ್ತಮಂ ॥ ೫ ॥

ತಂ ದೃಷ್ಟ್ವಾ ಸಂಭ್ರಮಾದೇವ ಸಮುತ್ತಸ್ಥೌ ತ್ರಿಲೋಚನಃ ।
ತೇಜೋಭಿಃ ಕ್ಷುಭಿತಂ ತತ್ರ ವಹ್ನೇರಾಸ್ಯಮಥಾವಿಶತ್ ॥ ೬ ॥

ಶಶಾಪ ಪಾರ್ವತೀ ದೇವೀ ಭಾರ್ಯಾಸು ಸ್ವಾಸು ದೇವತಾಃ ।
ನೈವಾಪ್ಸ್ಯಥ ಪುತ್ರಾನ್ಸ್ವೈ ಮತ್ಕ್ರೋಧಕಲುಷೀಕೃತಾಃ ॥ ೭ ॥

---

೪. ಈಗ ಈ ಸಂಭೋಗದಿಂದುಂಟಾಗುವ (ಗೌರೀ ಗರ್ಭದಲ್ಲಿ ಹುಟ್ಟುವ) ಮಗನು ತನ್ನ ತೇಜಸ್ಸಿನಿಂದ ಮೂರು ಲೋಕಗಳಲ್ಲಿಯೂ ಮೋಹವನ್ನುಂಟುಮಾಡುವುದರಲ್ಲಿ ಸಂದೇಹವಿಲ್ಲ. ಈ ರತಿಕೇಳಿಯು ಬೇಗನೆ ನಿಲ್ಲುವುದಿಲ್ಲವಾದುದರಿಂದ ಜಾಗ್ರತೆಯಾಗಿ ಸಂಭೋಗವು ಮುಗಿದು ಪಾರ್ವತಿಯು ಗರ್ಭ ಧರಿಸಬೇಕಾದರೆ ಯಾರಾದರೂ ಈ ರತಿಕ್ರೀಡೆಯನ್ನು ತಡೆಯಬೇಕಾಗಿರುವುದರಿಂದ ಅದನ್ನು ನಿಲ್ಲಿಸಲು ಯಜ್ಞೇಶ್ವರನನ್ನು ನಿಯಮಿಸಿದರು.

೫-೬. ದೇವತೆಗಳ ಮಾತಿಗೆ ಒಪ್ಪಿಕೊಂಡ ಯಜ್ಞೇಶ್ವರನು ಆ ಉಮಾಮಹೇಶ್ವರರು ಕ್ರೀಡಿಸುತ್ತಿದ್ದ ಮನೆಗೆ ಪ್ರವೇಶಮಾಡಿದನು. ಈರೀತಿ ಹಠಾತ್ತಾಗಿ ಒಳಕ್ಕೆ ಬಂದ ಯಜ್ಞೇಶ್ವರನನ್ನು ನೋಡಿ ದಿಗಂಬರನಾದ ಈಶ್ವರನು ನಾಚಿಕೊಂಡು ಗಾಬರಿಯಿಂದ ಮೇಲಕ್ಕೆದ್ದುಬಿಟ್ಟನು. ಆಗ ಪರಮೇಶ್ವರನ ವೀರ್ಯವು ಯಜ್ಞೇಶ್ವರನ ಮುಖವನ್ನು ಪ್ರವೇಶಿಸಿತು.

೭. ಈ ವಿಧವಾಗಿ ನಡೆದ ಆಭಾಸವನ್ನು ನೋಡಿ ಪಾರ್ವತಿಯು ದಿವ್ಯದೃಷ್ಟಿಯಿಂದ, ಇದು ದೇವತೆಗಳ ಚೇಷ್ಟೆಯೆಂದರಿತು—ನನ್ನ ಕೋಪಕ್ಕೆ ಅಧೀನರಾದ ನೀವೆಲ್ಲರೂ ನಿಮ್ಮ ನಿಮ್ಮ ಪತ್ನಿಯರಲ್ಲಿ ಎಂದೆಂದಿಗೂ ಪುತ್ರಸಂತಾನವನ್ನು ಪಡೆಯಬೇಡಿರೆಂದು ಸಕಲ ದೇವತೆಗಳಿಗೂ ಶಾಪವನ್ನು ಕೊಟ್ಟುಬಿಟ್ಟಳು.

ಹುತಾಶನೋಽಪಿ ಶರ್ವಸ್ಯ ದಹ್ಯಮಾನೋ ಹಿ ತೇಜಸಾ ।
ತತ್ಯಾಜ ಗರ್ಭಂ ಗಂಗಾಯಾಂ ಸಾಽಪಿ ಕಾಲೇನ ಕೇನಚಿತ್ ॥ ೮ ॥

ತತ್ಯಾಜ ಪರ್ವತೇ ಶ್ವೇತೇ ಗರ್ಭಂ ವಹ್ನಿಸಮಪ್ರಭಂ ।
ತೇನ ಜಾತೇನ ಸಂವೃತ್ತಂ ಸೌವರ್ಣಂ ಶ್ವೇತಪರ್ವತಂ ॥ ೯ ॥

ಸುವರ್ಣರೇತಸಸ್ತಸ್ಯ ಶಂಕರಸ್ಯ ತು ತೇಜಸಾ ।
ದದೃಶುಃ ಕೃತ್ತಿಕಾ ಬಾಲಂ ಸಂತ್ಯಕ್ತಂ ತತ್ರ ಗಂಗಯಾ ॥ ೧೦ ॥

ಸ್ತನಾನಿ ಪ್ರದದುಸ್ತಸ್ಯ ಕೃಪಯಾ ರಾಜಸತ್ತಮ ।
ಷಡಾನನಸ್ತದಾ ಭೂತ್ವಾ ಷಣ್ಣಾಮೇವ ಸ್ತನಂ ಪಪೌ ॥ ೧೧ ॥

---

೮. ಈಶ್ವರನ ವೀರ್ಯವು ಅಗ್ನಿಯ ಮುಖವನ್ನು ವ್ಯಾಪಿಸಿ ತನ್ನ ತೇಜಸ್ಸಿನಿಂದ ಆ ಅಗ್ನಿಯನ್ನೇ ದಹಿಸಲಾರಂಭಿಸಲು, ಆ ತೇಜಸ್ಸನ್ನು ಧರಿಸಲಾರದೆ ಯಜ್ಞೇಶ್ವರನು ಆ ವೀರ್ಯವನ್ನು ಗಂಗಾನದಿಯಲ್ಲಿ ಬಿಟ್ಟುಬಿಟ್ಟನು. ಆ ವೀರ್ಯವು ಗಂಗಾಸಂಯೋಗವಾದೊಡನೆ ಗರ್ಭರೂಪವಾಗಿ ಪರಿವರ್ತಿತವಾಯಿತು.

೯. ಅಗ್ನಿತೇಜಸ್ಸಿನಂತೆ ಸುಡುತ್ತಿದ್ದ ಆ ಗರ್ಭವನ್ನು ಗಂಗೆಯೂ ಸಹ ಧಾರಣಮಾಡಲಾರದೆ ಶ್ವೇತಪರ್ವತದಲ್ಲಿ ಇರಿಸಿದಳು. ಆ ಗರ್ಭವು ಅಲ್ಲಿಗೆ ಪ್ರವೇಶಿಸಿದೊಡನೆಯೇ ಆ ಪರ್ವತವೆಲ್ಲವೂ ಸುವರ್ಣವಿಕಾರವಾಗಿ ಪರಿಣಮಿಸಿತು.

೧೦. ಗಂಗೆಯಿಂದ ಶ್ವೇತಪರ್ವತದಲ್ಲಿ ವಿಸರ್ಜಿಸಲ್ಪಟ್ಟ ಆ ಈಶ್ವರನ ಸುವರ್ಣರೇತಸ್ಸನ್ನು ಅಲ್ಲಿದ್ದ ಕೃತ್ತಿಕಾದೇವಿಯು ಧರಿಸಿದೊಡನೆಯೇ ಆ ಹಿರಣ್ಯಗರ್ಭದಿಂದ ಕೃತ್ತಿಕೆಗೆ ಒಂದು ಗಂಡುಮಗುವಾಯಿತು.

೧೧. ಆ ಮಗುವಿಗೆ ಆರು ಮೊಗವಿತ್ತು. ಭಗವಂತನು ಆರು ಮುಖವುಳ್ಳ ಆ ಷಡಾನನನ ಆಹಾರಕ್ಕಾಗಿ ಕೃತ್ತಿಕಾದೇವಿಗೆ ಆರು ಸ್ತನಗಳನ್ನು ಅನುಗ್ರಹಿಸಿ ಕಾಪಾಡಿದನು. ಆ ಆರು ಮೊಲೆಗಳನ್ನೂ ಆ ಆರು ಮೊಗದ ಶಿಶುವು ಕುಡಿಯುತ್ತಾ ಬೆಳೆಯಿತು.

ತಾಸಾಂ ಕ್ಷೀರೇಣ ಧರ್ಮಾತ್ಮಾ ಸಂವೃದ್ಧೇನ ಚ ತೇಜಸಾ ।
ಕೃತ್ತಿಕಾನಾಂ ವರಂ ಪ್ರಾದಾದ್ಯತ್ತದ್ವಕ್ಷ್ಯಾಮಿ ತೇ ನೃಪ ॥ ೧೨ ॥

॥ ನಾಡಾಯನ ಉವಾಚ ॥

ಯದಾ ಚಂದ್ರಸಮಾಯೋಗಂ ಗಮಿಷ್ಯಥ ಶುಭಾನನಾಃ ।
ತದಾ ಪೂಜಾಂ ಕರಿಷ್ಯಂತಿ ಭವತೀನಾಂ ತು ಯೇ ನರಾಃ ॥ ೧೩ ॥

ವಹ್ನೇಶ್ಚಂದ್ರಮಸಶ್ಚೈವ ವರುಣಸ್ಯ ತಥಾ ಮಮ ।
ಗಂಧಮಾಲ್ಯೈಸ್ತಥಾ ಪುಷ್ಪೈರ್ಧೂಪೈರ್ದೀಪೈಸ್ತಥೈವ ಚ ॥ ೧೪ ॥

ಗಂಧೋದಕೇನ ಪುಣ್ಯೇನ ಲಾಜಾಭಿರ್ಮಧುನಾ ಸಹ ।
ಅಪೂಪೈಃ ಪರಮಾನ್ನೇನ ದಧ್ನಾ ಗವ್ಯೇನ ಚಾಪ್ಯಥ ॥ ೧೫ ॥

---

೧೨. ಆ ಆರು ಮೊಲೆಗಳ ಹಾಲಿನಿಂದ ಬೆಳೆದ ಆರ್ಮೋಗನು ತನ್ನನ್ನು ಸಾಕಿದ ಕೃತ್ತಿಕಾದಿ ದೇವತೆ (ನಕ್ಷತ್ರ) ಗಳಿಗೆ ಯಾವ ವಿಧವಾದ ವರವನ್ನನುಗ್ರಹಿಸಿದ ನೆಂಬುದನ್ನು ಹೇಳುವೆನು. ಕೇಳೈ ಶೈಲೂಷರಾಜ !

೧೩. ನಾಡಾಯನನು ಶೈಲೂಷನನ್ನು ಕುರಿತು ಹೇಳುತ್ತಾನೆ :—ಎಲೈ ಕೃತ್ತಿಕಾದಿ (೨೭ ನಕ್ಷತ್ರ) ಗಳಿರಾ ! ನೀವು ಯಾವ ಯಾವ ದಿವಸ ಚಂದ್ರನೊಡನೆ ಸಮಾಗಮವನ್ನು ಹೊಂದುವಿರೋ ಆಯಾ ದಿವಸ ನಿಮ್ಮನ್ನು ಯಾವ ಮನುಷ್ಯರು ಪೂಜಿಸುತ್ತಾ ಬರುವರೋ,

೧೪. ಹಾಗೂ ಆ ಪೂಜಾಕಾಲದಲ್ಲಿ ಅಗ್ನಿಯನ್ನೂ, ಚಂದ್ರನನ್ನೂ, ವರುಣನನ್ನೂ ಮತ್ತು ನನ್ನ (ಕುಮಾರಸ್ವಾಮಿಯ) ನ್ನೂ ಸಹ ಗಂಧ, ಪುಷ್ಪ, ಧೂಪ, ದೀಪ ನೈವೇದ್ಯ ತಾಂಬೂಲಾದಿ ಷೋಡಶೋಪಚಾರಗಳಿಂದ ಭಕ್ತಿಭರಿತರಾಗಿ ಯಾರು ಪೂಜೆಮಾಡುವರೋ,

೧೫. ಮತ್ತು ನಾನು ಹೇಳಿದ ಪೂರ್ವೋಕ್ತ ದೇವತೆಗಳನ್ನು ಪುಣ್ಯಕರವಾದ ಗಂಧೋದಕದಿಂದಲೂ ಅರಳು, ಜೇನುತುಪ್ಪ, ಒಡೆ, ಪರಮಾನ್ನ, ಮೊಸರು, ಹಾಲು ಗಳೇ ಮುಂತಾದ ನೈವೇದ್ಯಗಳಿಂದಲೂ,

ಕುಲ್ಮಾಷೈಃ ಸಫಲೈರ್ಭಕ್ಷ್ಯೈರ್ನೈವೇದ್ಯೈಃ ಪಾನಕೈಸ್ತಥಾ ।
ಪ್ರಾಪ್ನುವಂತ್ಯಭಿಮತಾನ್ಕಾಮಾನಿಹ ಲೋಕೇ ಪರತ್ರ ಚ ॥ ೧೬ ॥

ನಕ್ತಾಶನಸ್ತಥಾ ಭೂತ್ವಾ ಯುಷ್ಮತ್ಪೂಜಾಪರಾಯಣಃ ।
ಕ್ರೀಡಿತ್ವಾ ಸುಚಿರಂ ನಾಕೇ ಮಾನುಷ್ಯೇ ತು ಭವಿಷ್ಯತಿ ॥ ೧೭ ॥

ರೂಪಾನ್ವಿತಃ ಸತ್ಯಪರೋ ದಯಾವಾ-
ನ್ಧರ್ಮೇ ಸ್ಥಿತಃ ಸನ್ಬಹುಭೃತ್ಯಯುಕ್ತಃ ।

---

೧೬. ಹಲಸಂದೆ ಒಡೆ, ವಿವಿಧವಾದ ಹಣ್ಣುಗಳು, ಕಡುಬು, ಪಾನಕಗಳ ನಿವೇದನದಿಂದಲೂ ಯಾರು ತೃಪ್ತಿಪಡಿಸುವರೋ ಅವರು ತಮ್ಮ ಕೋರಿಕೆಗಳನ್ನು ಸಫಲಮಾಡಿಕೊಂಡು ಈ ಲೋಕದಲ್ಲಿ ಬೇಕುಬೇಕಾದ ಭೋಗಗಳನ್ನನುಭವಿಸಿ ಪರ ಲೋಕದಲ್ಲೂ ಅಪಾರಸುಖವನ್ನನುಭವಿಸುತ್ತಾರೆ.

೧೭. ನಿಮ್ಮನ್ನೆಲ್ಲಾ ಪೂಜೆಮಾಡಿದ ದಿವಸ ಯಾವನು ಹಗಲು ಉಪವಾಸ ವಾಗಿದ್ದು ರಾತ್ರಿ ಊಟಮಾಡುತ್ತಾನೋ ಅಂಥವನನ್ನು ಈ ಲೋಕ ಪರಲೋಕಗಳಲ್ಲಿ ಸುಖಪಡಿಸಿ ನಾನು ಕಾಪಾಡುತ್ತೇನೆ. ಸ್ವರ್ಗಸುಖ ತೀರಿದನಂತರ ಅವನು ಪುನಃ ಮನುಷ್ಯ ಜನ್ಮದಲ್ಲಿ ಜನ್ಮಿಸುವಾಗ ಹೇಗೆ ಹುಟ್ಟುವನೆಂಬುದನ್ನು ಹೇಳುವೆನು, ಕೇಳು.

೧೮. ಪರಮಸುಂದರನಾಗಿಯೂ, ಸತ್ಯವಂತನಾಗಿಯೂ, ದಯಾಶಾಲಿ ಯಾಗಿಯೂ ಅತ್ಯಂತ ಧರ್ಮನಿರತನಾಗಿಯೂ, ಬಹಳ ಭೃತ್ಯರಿಂದ ಸೇವಿಸಲ್ಪಡು ವವನಾಗಿಯೂ ಒಳ್ಳೇ ಕಾಲದಲ್ಲಿ ಹುಟ್ಟಿ, ಸೌಶೀಲ್ಯದಿಂದ ಕೂಡಿ ಅಷ್ಟೈಶ್ವರ್ಯ

**ಕುಲೀನ ಶೀಲೇನ ಸಮನ್ವಿತಶ್ಚ**
**ನಾರೀ ವಿಶೇಷಾತ್ಸುಭಗಾ ಭವಿತ್ರೀ ॥ ೧೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಕೃತ್ತಿಕಾಪೂಜಾವಿಧಿರ್ನಾಮಾಷ್ಟಾ**
**ವಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ.**

---

ವನ್ನನುಭವಿಸುತ್ತಾನೆ. ಅದರಂತೆ ಹೆಂಗಸಾದವಳೂ ಸಹ ಅದರಂತೆಯೇ ಹುಟ್ಟಿ ಸೌಭಾಗ್ಯವತಿಯಾಗಿ ಬದುಕುತ್ತಾಳೆ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಕೃತ್ತಿಕಾಪೂಜಾವಿಧಿಯೆಂಬ ಹೆಸರಿನ
ಇನ್ನೂರಿಪ್ಪತ್ತೆಂಟನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕೋನತ್ರಿಂಶತ್ಯುತ್ತರದ್ವಿಶತತಮೋಧ್ಯಾಯಃ ॥

॥ ನಾಡಾಯನ ಉವಾಚ ॥

**ತತಸ್ತು ಪ್ರಯಯೌ ಗಂಗಾ ಕುಮಾರೋ ಯತ್ರ ಪಾವಕಿಃ ।**
**ಮಯಾ ತ್ವಂ ಜನಿತಃ ಪುತ್ರ ತಮುವಾಚ ಸುರೇಶ್ವರಂ ॥ ೧ ॥**

**ಅಸಹಂತ್ಯಾ ಮಹಾತೇಜಸ್ತ್ವದೀಯಂ ಪರ್ವತೋತ್ತಮೇ ।**
**ಮಯಾ ಸ್ಕಂದ ಪರಿತ್ಯಕ್ತಂ ತದಾ ಗರ್ಭಗತಂ ಮಮ ॥ ೨ ॥**

---

### ಇನ್ನೂರಿಪ್ಪತ್ತೊಂಭತ್ತನೆಯ ಅಧ್ಯಾಯವು.

೧. ನಾಡಾಯನರು ಶೈಲೂಷನನ್ನು ಕುರಿತು ಮುಂದಿನ ವೃತ್ತಾಂತವನ್ನು ಹೇಳುತ್ತಾರೆ :—

ಗಂಗಾದೇವಿಗೆ ಈ ಕುಮಾರೋತ್ಪತ್ತಿ ವಿಚಾರವೂ ತಾಯಿಯಾದ ಕೃತ್ತಿಕಾದೇವಿಗೆ ವರಪ್ರದಾನಮಾಡಿದ ವಿಷಯವೂ ತಿಳಿದುಬರಲಾಗಿ ಆ ಕುಮಾರಸ್ವಾಮಿಯ ಬಳಿಗೆ ಬಂದವಳಾಗಿ ಇಂತು ಹೇಳಿದಳು :—

ಮಗು, ಕುಮಾರ! ನೀನು ನನ್ನ ಮಗನಪ್ಪಾ! ಅದೆಂತೆನ್ನುವಿಯೋ, ನಿನಗೆ ನಂಬಿಕೆ ಹುಟ್ಟುವಂತೆ ಆ ಪೂರ್ವವೃತ್ತಾಂತವನ್ನು ನಿನಗೆ ತಿಳಿಸುವೆನು.

೨. ನೀನು ನನ್ನ ಗರ್ಭದಲ್ಲಿದ್ದ ಕಾಲದಲ್ಲಿ ನಿನ್ನ ಮಹಾತೇಜಸ್ಸನ್ನು ತಡೆಯಲಾರದೆ ನಿನ್ನ ತೇಜಸ್ಸನ್ನು ಈ ಶ್ವೇತಪರ್ವತದಲ್ಲಿರಿಸಿದೆನು. ಆಗ ನನ್ನ ಗರ್ಭದಲ್ಲಿದ್ದ ವೀರ್ಯವು ಈ ಪರ್ವತದಲ್ಲಿ ಬಿತ್ತು. ಅದನ್ನು ಕೃತ್ತಿಕೆಯು ಧರಿಸಿ ನಿನ್ನನ್ನು ಪಡೆದಳು. ಈಗ ನಿನ್ನ ಮೊದಲತಾಯಿ ಯಾರೆಂದು ತಿಳಿದುಕೋ. ದಯವಿಟ್ಟು ನನ್ನ ಮನೆಗೆ ಬಂದು ನನ್ನ ಪೋಷಣೆಯಲ್ಲಿರು.

**ತಸ್ಯಾಸ್ತದ್ವಚನಂ ಶ್ರುತ್ವಾ ಪಾವಕಿರ್ವಾಕ್ಯಮಬ್ರವೀತ್ ।**
**॥ ಸ್ಕಂದ ಉವಾಚ ॥**
**ನಾಹಂ ಗೃಹಂ ತೇ ಯಾಸ್ಯಾಮಿ ಶಂಭುರ್ಮೇ ದೈವತಂ ಪಿತಾ** ॥ ೩ ॥

**ಅನುಗ್ರಹಂ ಕರಿಷ್ಯಾಮಿ ತವಾಹಂ ಸುರನಿಮ್ನಗೇ ।**
**ವೈಶಾಖಮಾಸಶುಕ್ಲಸ್ಯ ತೃತೀಯಾಯಾಂ ವರಾನನೇ** ॥ ೪ ॥

**ಮಾನುಷ್ಯಮವತೀರ್ಣಾऽಸಿ ತದಾ ಪೂಜಾಮವಾಪ್ಸ್ಯಸಿ ।**
**ತಸ್ಮಿನ್ನಹನಿ ಯಃ ಸ್ನಾನಮಾಚರಿಷ್ಯತಿ ತೇ ಶುಭೇ** ॥ ೫ ॥

**ರಾಜಸೂಯಾಶ್ವಮೇಧಾಭ್ಯಾಂ ಫಲೇನ ಸ ತು ಯೋಕ್ಷ್ಯತಿ ।**
**ತಸ್ಮಿನ್ನಹನಿ ಯಃ ಪೂಜಾಂ ಯತ್ರ ತತ್ರ ವ್ಯವಸ್ಥಿತಃ** ॥ ೬ ॥

---

೩. ಆಗ ಸ್ಕಂದನು ಗಂಗಾದೇವಿಯ ಮಾತನ್ನು ಕೇಳಿ ಹೇಳಿದುದೇನೆಂದರೆ : ಅಮ್ಮಾ! ನೀನು ಮಾತೃವಾತ್ಸಲ್ಯದಿಂದ ಹೇಳಿದ ಮಾತನ್ನು ಕೇಳಿ ಸಂತೋಷವಾಯಿತು. ಆದರೆ ಈಗ ನಾನು ನಿನ್ನ ಮನೆಗೆ ಬರಲು ಸಾಧ್ಯವಿಲ್ಲ. ನನ್ನ ಗುರುವೂ ತಂದೆಯೂ ಆದ ಈಶ್ವರನ ಮನೆಗೆ ಹೋಗುತ್ತೇನೆ. ಅವನೇ ನನಗೆ ಜನ್ಮ ಕೊಟ್ಟ ದೇವರು.

೪. ಆದರೆ ಕೃತ್ತಿಕೆಗೆ ಕೊಟ್ಟಂತೆ ನಿನಗೂ ಸಹ ಒಂದು ವರವನ್ನು ಮಾತ್ರ ಕೊಡುತ್ತೇನೆ. ಆ ವರವೇನೆನ್ನುವಿಯೋ—ನೀನು ವೈಶಾಖ ಶುದ್ಧ ತದಿಗೆಯ ದಿವಸ ಭೂಲೋಕಕ್ಕೆ ಹೋಗಿ ಜನರಿಂದ ಪೂಜೆಯನ್ನು ಸ್ವೀಕರಿಸು.

೫. ಆರೀತಿ ಮನುಷ್ಯರೂಪದಿಂದ ಮನುಷ್ಯಲೋಕಕ್ಕೆ ನೀನು ಹೋದ ದಿವಸ (ಅಕ್ಷತದಿಗೆ) ಯಾರು ನಿನ್ನ (ಗಂಗಾ) ನದಿಗೆ ಬಂದು ಸ್ನಾನಮಾಡುವರೋ ಅಂಥವರು ರಾಜಸೂಯಾಶ್ವಮೇಧಯಾಗಗಳನ್ನು ಮಾಡಿದ ಪುಣ್ಯವನ್ನು ಹೊಂದುವರು.

೬-೭. ಒಂದು ವೇಳೆ ಗಂಗಾಸ್ನಾನಕ್ಕೆ ಹೋಗಲು ಸಾಧ್ಯವಿಲ್ಲದೆ ಇದ್ದ ಜನರು ತಾವಿದ್ದಲ್ಲಿಯೇ ನಿನ್ನ (ಗಂಗೆ ಮತ್ತು ಗೌರಿ) ನ್ನು ಗಂಧಪುಷ್ಪಾಕ್ಷತೆಗಳಿಂದಲೂ

ಗಂಧಮಾಲ್ಯೋಪಹಾರಾದ್ಯೈರ್ಧೂಪದೀಪಾನ್ನಸಂಪದಾ ।
ಕರ್ತಾ ತವ ಮಹಾಭಾಗೇ ತ್ವತ್ತೋಯಸ್ನಾನಜಂ ಫಲಂ ॥ ೭ ॥

ಧ್ರುವಮಾಪ್ಸ್ಯತಿ ಧರ್ಮಜ್ಞೇ ನಾತ್ರ ಕಾರ್ಯಾ ವಿಚಾರಣಾ ।
ತಸ್ಮಿನ್ನಹನಿ ಯತ್ಕಿಂಚಿತ್ಪ್ರದದ್ಯಾಚ್ಛ್ರದ್ಧಯಾನ್ವಿತಃ ॥ ೮ ॥

ಅಕ್ಷಯಂ ತತ್ಫಲಂ ತಸ್ಯ ಭವಿಷ್ಯತಿ ನ ಸಂಶಯಃ ।
ಅಕ್ಷಯಾ ಸಾ ತಿಥಿರ್ಜ್ಞೇಯಾ ಕೃತ್ತಿಕಾಭಿರ್ಯುತಾ ಯದಿ ॥ ೯ ॥

ಭವಿಷ್ಯತಿ ಮಹಾಭಾಗೇ ವಿಶೇಷೇಣ ಫಲಪ್ರದಾ ॥ ೧೦ ॥

ತಸ್ಮಿನ್ದಿನೇ ಯೇ ತವ ಚಾರುಗಾತ್ರಿ
ಪೂಜಾಂ ಕರಿಷ್ಯಂತಿ ತಥೇರಿತಾಂ ಪ್ರಾಕ್ ।

---

ಧೂಪ ದೀಪ ನೈವೇದ್ಯ ತಾಂಬೂಲಗಳಿಂದಲೂ, ನೀರಾಜನ ಮಂತ್ರಪುಷ್ಪಾದಿಗಳಿಂದಲೂ ಭಕ್ತಿಯಿಂದ ಪೂಜೆಮಾಡಿದರೆ ಅಂಥವರು ಗಂಗಾಸ್ನಾನಮಾಡಿದ ಫಲವನ್ನು ಅನಾಯಾಸವಾಗಿ ಹೊಂದುತ್ತಾರೆ.

೮-೯. ಈಗ ನನ್ನ ಬಾಯಿಂದ ಹೊರಟ ಮಾತು ನಿಶ್ಚಯವಾಗಿಯೂ ಫಲಿಸುವುದು. ಈ ವಿಷಯದಲ್ಲಿ ಯಾರೂ ಸಂದೇಹಪಡಬೇಕಾಗಿಯೇ ಇಲ್ಲ. ಯಾರೇ ಆಗಲಿ ಗಂಡಸಾಗಲಿ ಹೆಂಗಸಾಗಲಿ ಆ ಅಕ್ಷಯ ತೃತೀಯಾ ದಿವಸ ಶ್ರದ್ಧಾ ಭಕ್ತಿಯಿಂದ ಕೂಡಿದವರಾಗಿ ಯಾವ ಸ್ವಲ್ಪ ದಾನವನ್ನೇ ಮಾಡಿದಾಗ್ಯೂ ಅದು ಅಕ್ಷಯವಾಗಿ ಬೆಳೆಯುವುದರಿಂದ ಅದಕ್ಕೆ ಅಕ್ಷಯ ತೃತೀಯಾ (ಅಕ್ಷ ತದಿಗೆ) ಎಂದು ಹೆಸರುಂಟಾಗಲಿ. ಆ ದಿವಸ ಕೃತ್ತಿಕಾನಕ್ಷತ್ರವು ಸೇರಿದರೆ ಆ ಫಲವು.

೧೦-೧೧. ಇನ್ನೂ ಅಧಿಕವಾಗಿ ಬೆಳೆದುಕೊಂಡು ಹೋಗುವುದೆಂದು ತಿಳಿದುಕೊಳ್ಳಿ ಅಮ್ಮಾ! ಗಂಗಾಮಾತೇ! ಈಗ ಮೊದಲಿನಿಂದ ಇಲ್ಲಿಯವರಿಗೆ ಹೇಳಿದ ಮಾತಿನಲ್ಲಿ ನಂಬಿಕೆಯಿಟ್ಟು ಪೂಜೆಯನ್ನು ಯಾರುಮಾಡುವರೋ, ಅವರು ಈ ಜನ್ಮವನ್ನು

**ತೇ ನಾಕಲೋಕೇ ಸುಚಿರಂ ನಿರುಷ್ಯ**
**ಲೋಕಾನ್ಗಮಿಷ್ಯಂತಿ ಜಲಾಧಿಪಸ್ಯ** ॥ ೧೧ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಶೈಲೂಷಂ ಪ್ರತಿ ನಾಡಾಯನವಚನೇ ಅಕ್ಷಯತೃತೀಯಾಮಾಹಾತ್ಮ್ಯಂ ನಾಮೈಕೋನ ತ್ರಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ.**

---

ಮುಗಿಸಿದ ಕಾಲದಲ್ಲಿ ಆ ಕೂಡಲೆ ಸ್ವರ್ಗಕ್ಕೆ ಪ್ರಯಾಣಮಾಡಿ ಅಲ್ಲಿ ಅನೇಕ ಕಾಲ ಯಥೇಚ್ಛವಾದ ಭೋಗಗಳನ್ನನುಭವಿಸಿ ಆ ಬಳಿಕ ವರುಣಲೋಕವನ್ನು ಪ್ರವೇಶಿಸುತ್ತಾರೆ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ ರೂಪವಾದ ಅಕ್ಷಯತೃತೀಯಾ ಮಾಹಾತ್ಮ್ಯೆಯೆಂಬ ಹೆಸರಿನ ಇನ್ನೂರಿಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ತ್ರಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ ॥

---

॥ ನಾರಾಯಣ ಉವಾಚ ॥

ತತಸ್ತು ಜಾತಕರ್ಮಾದ್ಯಾಃ ಕ್ರಿಯಾಸ್ತಸ್ಯ ಮಹಾತ್ಮನಃ ।
ವಿಶ್ವಾಮಿತ್ರಸ್ತು ಕೃತವಾನ್ಮಂಗಲಾನಿ ತಥೈವ ಚ ॥ ೧ ॥

ಏತಸ್ಮಿನ್ನೇವ ಕಾಲೇ ತು ದೇವನಾಥಾಯ ವಜ್ರಿಣೇ ।
ಶ್ವೇತಜಾತಮಥಾಚಖ್ಯುಃ ಕುಮಾರಂ ದೀಪ್ತತೇಜಸಂ ॥ ೨ ॥

ನಿಧನಾಯ ಮತಿಂ ಚಕ್ರೇ ತದಾ ತಸ್ಯ ಪುರಂದರಃ ।
ದೇವತೈಃ ಪಿತೃಭಿರ್ಯಕ್ಷೈಃ ಪ್ರಭುರ್ದಾನವರಾಕ್ಷಸೈಃ ॥ ೩ ॥

---

### ಇನ್ನೂರ ಮೂವತ್ತನೆಯ ಅಧ್ಯಾಯವು.

೧. ನಾರಾಯಣರು ಶೈಲೂಷನನ್ನು ಕುರಿತು ಆ ಕುಮಾರಸ್ವಾಮಿಯ ಚರಿತ್ರೆಯನ್ನು ಮುಂಬರಿಸಿ ಹೇಳಲಾರಂಭಿಸಿದರು. ಅದೆಂತೆಂದರೆ :—

ಶೈಲೂಷರಾಜ! ಕೇಳು. ಆ ಮಹಾತ್ಮನಾದ ಪಾರ್ವತೀನಂದನನಿಗೆ ವಿಶ್ವಾಮಿತ್ರ ಮಹರ್ಷಿಗಳು ಮಂಗಳಕರಗಳಾದ ಜಾತಕರ್ಮ ಸಂಸ್ಕಾರಗಳನ್ನು ಮಾಡಿದರು.

೨. ಈ ಸಮಯದಲ್ಲಿ ಸಕಲ ದೇವತೆಗಳೂ ಗುಂಪು ಕಟ್ಟಿಕೊಂಡು ಈ ಕುಮಾರ ಜನ್ಮ ವೃತ್ತಾಂತವನ್ನೂ, ಇವನು ಶ್ವೇತಪರ್ವತದಲ್ಲಿ ಮಹಾತೇಜಸ್ವಿಯಾಗಿ ಅವತರಿಸಿದ ವೃತ್ತಾಂತವನ್ನೂ ಇಂದ್ರನಿಗೆ ತಿಳಿಸಿದರು.

೩. ಈ ವೃತ್ತಾಂತವು ಕಿವಿಗೆ ಬಿದ್ದೊಡನೆಯೇ ಆ ಇಂದ್ರನು ದೇವತೆಗಳಿಂದಲೂ, ಪಿತೃಗಳಿಂದಲೂ, ಯಕ್ಷರುಗಳಿಂದಲೂ, ದಾನವರಿಂದಲೂ, ರಾಕ್ಷಸರಿಂದಲೂ ಕೂಡಿಕೊಂಡು ಹೋಗಿ ಆ ಕುಮಾರನನ್ನು ಕೊಂದುಹಾಕಬೇಕೆಂದಾಲೋಚಿಸಿದನು.

ಭೂತಾನಾಗಪಿಶಾಚೈಶ್ಚ ಪಿತೃಗಂಧರ್ವಮಾನುಷೈಃ ।
ಸಂಮಂತ್ರ್ಯ ನಿಧನೇ ತಸ್ಯ ಸೃಷ್ಟವಾನ್ಸ ಮಹಾಗ್ರಹಾನ್ ॥ ೪ ॥

ದೇವದೈತ್ಯಗ್ರಹಾನ್ಘೋರಾನ್ಪಿತೃದಾನವರಾಕ್ಷಸಾನ್ ।
ಯಕ್ಷಗಂಧರ್ವನಾಗಾನಾಂ ನೃಣಾಂ ಚ ಪಿಶಿತಾಶಿನಾಂ ॥ ೫ ॥

ತೇ ಗ್ರಹಾ ಬಹುಸಾಹಸ್ರಾ ನಾನಾಪ್ರಹರಣೋದ್ಯತಾಃ ।
ಅಭಿಜಗ್ಮುಃ ಶ್ವೇತಗಿರಿಂ ಕುಮಾರವಧಕಾಮ್ಯಯಾ ॥ ೬ ॥

ತೇ ಗ್ರಹಾ ಬಹುಸಾಹಸ್ರಾ ಗ್ರಹಾಂಶ್ಚ ಶತಶಃ ಶಿವಃ ।
ಸ್ಕಂದೋ ಗ್ರಹಾನ್ಸ್ವೈ ಸಸೃಜೇ ಪೂರ್ವಗ್ರಹನಿಶಾಚರಾನ್ ॥ ೭ ॥

---

೪. ಈ ರೀತಿ ಯೋಚನೆಯು ತಲೆದೋರಿದೊಡನೆಯೇ ಅವನು ಮೇಲೆ ಬರೆದವರೊಡನೆಯೂ, ಭೂತ ನಾಗಪಿಶಾಚಗಳೊಡದೆಯೂ, ಪಿತೃಗಂಧರ್ವ ಮಾನುಷ ಗಣಗೊಡನೆಯೂ ಮಂತ್ರಾಲೋಚನೆ ಮಾಡಿ ಕುಮಾರ ಸಂಹಾರಕ್ಕೋಸ್ಕರ ಕೆಲವು ಮಹಾಗ್ರಹಗಳನ್ನು ಸೃಷ್ಟಿಮಾಡಿದನು.

೫. ಆಗ ಇಂದ್ರನಿಂದ ನಿರ್ಮಿತವಾದ ಆ ಮಹಾಗ್ರಹಗಳು ದೇವದೈತ್ಯರೂಪವಾದ ಗ್ರಹಗಳನ್ನೂ, ಪಿತೃದಾನವ ರಾಕ್ಷಸಗ್ರಹಗಳನ್ನೂ, ಯಕ್ಷಗಂಧರ್ವ ನಾಗಾದಿ ಮನುಷ್ಯಗ್ರಹಗಳನ್ನೂ ಕೂಡಲೆ ಇಂದ್ರ ಸಹಾಯದಿಂದ ನಿರ್ಮಿಸಿದುವು.

೬. ಇಂತಹ ಮಹಾಗ್ರಹಗಳು ಎಷ್ಟೋ ಸಾವಿರ ಲೆಖ್ಖದಿಂದ ಹುಟ್ಟಿ ಕೈಯಲ್ಲಿ ನಾನಾವಿಧವಾದ ಆಯುಧಗಳನ್ನು ಹಿಡಿದುಕೊಂಡು ಯುದ್ಧಸನ್ನದ್ಧವಾಗಿ ನಿಂತವು. ಇಂತಹ ಅಗಣಿತ ಗ್ರಹಸೈನ್ಯಗಳು ಕುಮಾರಸ್ವಾಮಿಯನ್ನು ಕೊಲ್ಲಲುದ್ದೇಶದಿಂದ ಹೊರಟು ಆ ಕುಮಾರನಿದ್ದ ಶ್ವೇತಶೈಲದಲ್ಲಿ ಗುಂಪುಕೂಡಿ ನಿಂತವು.

೭-೯. ಈ ವಿಧವಾಗಿ ಬಂದು ಮಹತ್ತಾಗಿ ಗುಂಪು ಕೂಡಿದ್ದ ಗ್ರಹಸೈನ್ಯಗಳನ್ನು ನೋಡಿ ಈಶ್ವರನೂ, ಕುಮಾರಸ್ವಾಮಿಯೂ ಸಹ ಮಹಾಕೋಪ ಭರಿತರಾಗಿ ತಾವು ಕೂಡ ಅದಕ್ಕೆ ಪ್ರತಿಯಾಗಿ ಪೂರ್ವಗ್ರಹ ರಾಕ್ಷಸರನ್ನೂ, ಮಹಾಬಲಪರಾಕ್ರಮಗಳಿಂದೊಡಗೂಡಿದ ಕಾಮಚಾರಿಗಳಾದ, ಕಾಮರೂಪಿಗಳಾದ ನಾನಾವಿಧವಾದವೇಷಗಳುಳ್ಳಮನೋವೇಗವುಳ್ಳನೂರಾರುಸಾವಿರಾರುಗ್ರಹಗಳನ್ನು ಸಹಸೃಷ್ಟಿಮಾಡಿಎದುರಾಗಿ

ಮಹಾಬಲಾನ್ಮಹಾವೀರ್ಯಾನ್ಕಾಮಗಾನ್ಕಾಮರೂಪಿಣಃ ।
ಅನೇಕಶತಸಾಹಸ್ರಾನ್ ನಾನಾವೇಷಾನ್ಮನೋಜವಾನ್ ॥ ೮ ॥

ತೇಷಾಂ ಪ್ರಧಾನಾನ್ವಕ್ಷ್ಯಾಮಿ ತನ್ಮೇ ನಿಗದತಃ ಶೃಣು ।
ಸ್ಕಂದೋ ವಿಶಾಖಶ್ಚ ತಥಾನೈಗಮೇಯಸ್ತಥೈವ ಚ ।
ಭೀಮೋ ಭೀಮಕರಃ ಕ್ರವ್ಯೋ ನಿರತಃ ಕ್ರೋಶ ಏವ ಚ ॥ ೯ ॥

ಕ್ರವ್ಯಾದೋಽಥ ಹವಿರ್ಬುದ್ಧಿಃ ಕೋಟಿಮುದ್ಗರಿಕಃ ಪೃಥುಃ ।
ಕಾಲಶ್ಚಾಪ್ಯುಪಕಾಲಶ್ಚ ಸಿದ್ಧಾರ್ಥಃ ಪುಷ್ಪಕಸ್ತಥಾ ॥ ೧೦ ॥

ಪುಷ್ಪಮಿತ್ರಃ ಕೋಕಿಲಕಃ ಸಿದ್ಧೋ ಲಂಬೋದರಸ್ತಥಾ ।
ಖಲ್ಯಃ ಕಪೋತೋ ಲಂಬೋಷ್ಠಃ ತಥಾ ನಾಯಾಸ ಏವ ಚ ॥ ೧೧ ॥

ಯದಂಡೋ ಗೃಧ್ರನಾಸಾಶ್ಚ ಗೃಧ್ರವೃತ್ತಕ ಏವ ಚ ।
ಕ್ಷುದ್ರಕಃ ಕಾಲಕಾಲಶ್ಚ ಕಾಲಸ್ತತ್ಪುರುಷಸ್ತಥಾ ॥ ೧೨ ॥

ವಿದ್ಯುದ್ಭೂತೋಽಥ ಸಂವರ್ತೋ ವರ್ತಶ್ಚಾವರ್ತ ಏವ ಚ ।
ಶಿತಿಕಂಠಃ ಕಪರ್ದೀ ಚ ಕಚ್ಛಪಃ ಪರಿಕಂಟಕಃ ॥ ೧೩ ॥

ಪರಿಪ್ರಕಾಶೋಮತ್ತಶ್ಚ ಮಾತಂಗವಸನಸ್ತಥಾ ।
ಗದರಾಕ್ಷಃ ಪಿಶಾಚಶ್ಚ ವೀರನಾಶೋ ವಲೀಮುಖಃ ॥ ೧೪ ॥

---

ನಿಲ್ಲಿಸಿದರು. ಅವುಗಳಲ್ಲಿ ಕೆಲವು ಮುಖ್ಯ ಮುಖ್ಯವಾದ ಹೆಸರುಗಳನ್ನು ಮಾತ್ರ ಹೇಳುವೆನು, ಕೇಳು.

೧೦-೨೨. ಸ್ಕಂದ, ವಿಶಾಖ, ನೈಗಮೇಯ, ಭೀಮ, ಭೀಮಕರ, ಕ್ರವ್ಯ, ನಿರತ, ಕೋಶ, ಕ್ರವ್ಯಾದ, ಹವಿರ್ಬುದ್ಧಿ, ಕೋಟಿ, ಮುದ್ಗರಿಕ, ಪೃಥು, ಕಾಲ, ಉಪ ಕಾಲ, ಸಿದ್ಧಾರ್ಥ, ಪುಷ್ಪಕ, ಪುಷ್ಪಮಿತ್ರ, ಕೋಕಿಲಕ, ಸಿದ್ಧ, ಲಂಬೋದರ, ಖಲ್ಯ, ಕಪೋತ, ಲಂಬೋಷ್ಠ, ನಾಯಾಸ, ಯದಂಡ, ಗೃಧ್ರವೃತ್ತಕ, ಕ್ಷುದ್ರಕ, ಕಾಲ ಕಾಲ, ಕಾಲ, ತತ್ಪುರುಷ, ವಿದ್ಯುದ್ಭೂತ, ಸಂವರ್ತ, ವರ್ತ, ಆವರ್ತ, ಶಿತಿಕಂಠ, ಕಪರ್ದೀ, ಕಚ್ಛಪ, ಪರಿಕಂಟಕ, ಪರಿಪ್ರಕಾಶ, ಮತ್ತ, ಮಾತಂಗವಸನ, ಗದರಾಕ್ಷ, ಪಿಶಾಚ, ವೀರನಾಶ, ವಲೀಮುಖ, ಮಹಾಭೂತ, ನಂದ, ಸೋಮಾನಂದ, ಪ್ರಮೋ

ಮಹಾಭೂತಶ್ಚ ನಂದಶ್ಚ ಸೋಮಾನಂದಃ ಪ್ರಮೋದಕಃ ।
ಆನಂದೋವ್ಯವಸಾಯಶ್ಚ ನಿಶ್ಚಯೋಽಥ ಪರಾಕ್ರಮಃ ॥ ೧೫ ॥

ಜಯಶ್ಚ ವಿಜಯಶ್ಚೈವ ಸಂಜಯಃ ಕಲ್ಪ ಏವ ಚ ।
ಪುಷ್ಪದಂತೋ ದಂತವಕ್ತ್ರೋ ಹೇಗುಂಡಿರ್ಭೀಷಣಸ್ತಥಾ ॥ ೧೬ ॥

ವಸುಭೂತಿರ್ವಸುಸ್ತ್ರಾತೋ ಜೀವಕಸ್ತಾಪಸಸ್ತಥಾ ।
ವೀರಬಾಹುಃ ಸುಬಾಹುಶ್ಚ ಸುಂದರೋ ಗಂಡ ಏವ ಚ ॥ ೧೭ ॥

ತುಂಡಾ ವಿಜೇಲಾ ಗೋದಂತಃ ಕಲಶಃ ಕಲಶೋಚರಃ ।
ಶೀರ್ಷಗ್ರಾಹೋ ಲಲಾಟಸ್ಥೋ ಗ್ರೀವಾಗ್ರಾಭರತೋ ಗ್ರಹಃ ॥ ೧೮ ॥

ಪರಿಲೇಪಕಜಾತ್ಯಂಧೌ ಕರಾಲಃ ಕುಂಜನಾಮನೌ ।
ಅನ್ಯೇದ್ಯುಕಃ ಸತತಗಸ್ತ್ರೈತೀಯಕಚತುರ್ಥಕೌ ॥ ೧೯ ॥

ವ್ಯರೋಚಕೋ ನೇತ್ರರೋಗಃ ಕಾಸಶ್ವಾಸಾನುಗಸ್ತಥಾ ।
ಧೂತಪಾಪಃ ಪಾಪಹಿತಃ ಪಾಪಾಚಾರಸ್ತಥೈವ ಚ ॥ ೨೦ ॥

ಕಾಂಡೋ ಧನಂಜಯಶ್ಚೈವ ಶಠೋ ನೈಷ್ಕೃತಿಕಸ್ತಥಾ ।
ವಸುಧಾತಾ ವಸುಮನಾ ಗೌರಃ ಶೋಥೋ ಗಲಗ್ರಹಃ ॥ ೨೧ ॥

ಭ್ರಮಶ್ಚ ಚಿತ್ತಮೋಹಶ್ಚ ತಥಾ ಕಾರ್ಯವಿಘಾತಕಃ ।
ಸರ್ವಕಾರ್ಯಕರಶ್ಚೈವ ಜೃಂಭಕಶ್ಚಾರ್ಯಕಸ್ತಥಾ ॥ ೨೨ ॥

---

ದಕ, ಆನಂದ, ವ್ಯವಸಾಯ, ನಿಶ್ಚಯ, ಪರಾಕ್ರಮ, ಜಯ, ವಿಜಯ, ಸಂಜಯ, ಕಲ್ಪ, ಪುಷ್ಪದಂತ, ದಂತವಕ್ತ್ರ, ಹೇಗುಂಡಿ, ಭೀಷಣ, ವಸುಭೂತಿ, ವಸುಸ್ತ್ರಾತ, ಜೀವಕ, ತಾಪಸ, ವೀರಬಾಹು, ಸುಬಾಹು. ಸುಂದರ, ಗಂಡ, ತುಂಡಾ, ವಿಜೇಲಾ, ಗೋದಂತ, ಕಲಶ, ಕಲಶೋಚರ, ಶೀರ್ಷಗ್ರಾಹ, ಲಲಾಟಸ್ಥ, ಗ್ರೀವಾಗ್ರಾಭರತ, ಪರಿಲೇಪಕ, ಜಾತ್ಯಂಧ, ಕರಾಳ, ಕುಂಭನಾಮ, ಅನ್ಯೋದ್ಯುಕ, ಸತತಗ, ತ್ರೈತೀಯಕ, ಚತುರ್ಥಕ, ವ್ಯರೋಚಕ, ನೇತ್ರರೋಗ, ಖಾಸ, ಶ್ವಾಸ, ಕಾಮಶಾಸನ, ಧೂತಪಾಪ, ಪಾಪಹಿತ, ಪಾಪಾಚಾರ, ಕಾಂಡ, ಧನಂಜಯ, ಶಠ, ನೈಷ್ಕೃತಿಕ, ಬಹುಧಾತ, ವಸುಮನ, ಗೌರ, ಶೌಥ, ಗಳಗ್ರಹ, ಭ್ರಮ, ಚಿತ್ತಮೋಹ, ಕಾರ್ಯವಿಘಾತಕ, ಸರ್ವಕಾರ್ಯಕರ, ಜೃಂಭಕ, ಆರ್ಯಕ, ಮುಂತಾದ ನಾನಾಗ್ರಹಗಳು ಉತ್ಪತ್ತಿಯಾದುವು.

ಏತೇ ಚಾನ್ಯೇ ಚ ಬಲಿನಃ ಕಾಮರೂಪಾ ವಿಹಂಗಮಾಃ ।
ತ್ರೈಲೋಕ್ಯಸೃಷ್ಟಿಸಂಹಾರಸಮರ್ಥಾ ವಿವಿಧಾಯುಧಾಃ ॥ ೨೩ ॥

ನಾನಾರೂಪಧರಾ ವೀರಾ ನಾನಾವಿವಿಧವಾಸಸಃ ।
ಪ್ರಾದುದ್ರುವನ್ಗ್ರಹಾನ್ಘೋರಾನ್ಪೂರ್ವದೇವೈರ್ವಿಸರ್ಜಿತಾನ್ ॥ ೨೪ ॥

ಅವಿಷಹ್ಯತಮಾತ್ಮಾನೋ ಗ್ರಹಾಃ ಸ್ಕಂದಗ್ರಹಾಸ್ತಥಾ ।
ಸ್ಕಂದಂ ದೇವವರಂ ಸರ್ವೇ ತದಾ ಶರಣಮಾಗತಾಃ ॥ ೨೫ ॥

ತಾಂಸ್ತು ವೈ ಶರಣಂ ಪ್ರಾಪ್ತಾನ್ ಸ್ಕಂದೋ ವಚನಮಬ್ರವೀತ್ ।

॥ ಸ್ಕಂದ ಉವಾಚ ॥

ಶರಣಂ ವೈ ಪ್ರಪನ್ನಾನಾಂ ವರಂ ದಾಸ್ಯಾಮ್ಯಹಂ ಗ್ರಹಾಃ ॥ ೨೫ ॥

ವರಯಧ್ವಂ ಯಥಾ ಕಾಮಂ ಪೂಜ್ಯಾ ಮೇ ಶರಣಾರ್ಥಿನಃ ।

॥ ಗ್ರಹಾ ಊಚುಃ ॥

ಭಗವನ್ಭಕ್ಷಯಿಷ್ಯಾಮಸ್ತ್ವತ್ಪ್ರಸಾದೇನ ಮಾನುಷಾನ್ ॥ ೨೬ ॥

---

೨೩-೨೫. ಮೇಲೆ ಬರೆದಿರುವುವುಗಳು ಮಾತ್ರವೇ ಅಲ್ಲ. ಇನ್ನೂ ಇಂತಹ ಎಷ್ಟೆಷ್ಟೋ ಬಲಶಾಲಿಗಳೂ, ಕಾಮರೂಪಿಗಳೂ ಆದಗ್ರಹಗಳೂ, ಹಕ್ಕಿ ಪಕ್ಷಿಗಳ, ವೇಷಗಳನ್ನು ತಾಳಿದ್ದ ಗ್ರಹಗಳೂ ಅಲ್ಲಿ ಕುಮಾರನಿಂದ ಉತ್ಪತ್ತಿಮಾಡಲ್ಪಟ್ಟವು ಇವುಗಳಲ್ಲಿ ಒಂದೊಂದಕ್ಕೂ ತ್ರಿಲೋಕವನ್ನು ಸೃಷ್ಟಿಮಾಡುವ ಮತ್ತು ಉಪಸಂಹಾರ ಮಾಡುವ ಶಕ್ತಿ ಸಹ ಉಂಟಾಗಿತ್ತು. ಈಪ್ರಕಾರವಾಗಿ ಅಸಂಖ್ಯಾತವಾಗಿ ಉತ್ಪತ್ತಿಯಾದ ಆ ಗ್ರಹಗಳೆಲ್ಲವೂ, ನಾನಾವಿಧ ಆಯುಧಗಳನ್ನು ಧರಿಸಿ, ನಾನಾವಿಧ ವೇಷಗಳನ್ನು ಧರಿಸಿ, ನಾನಾವಿಧವಾದ ವಸ್ತ್ರಗಳಂ ಧರಿಸಿಕೊಂಡು, ಪೂರ್ವ ದೇವತೆಗಳಿಂದ ಕಳುಹಲ್ಪಟ್ಟು ಸ್ಕಂದನ ಮನೆಯ ಬಾಗಿಲಿನಲ್ಲಿ ನಿಂತಿದ್ದ ಗ್ರಹಗಳ ಗುಂಪನ್ನು ಹೆದರಿಸಿ ಅಟ್ಟಿಸಿಕೊಂಡು ಓಡಿಹೋದುವು. ಈಮೇರೆ ಸ್ಕಂದನಿಂದುತ್ಪನ್ನವಾದ ಗ್ರಹಗಳು ಸಹಿಸಲಶಕ್ಯವಾದ ರೂಪಗಳಂ ಧರಿಸಿ ಪೂರ್ವದೇವತಾ ಸೃಷ್ಟ ಗ್ರಹಗಳನ್ನು ಬೆದರಿಸಿ ಓಡಿಸಿ ಹಿಂಬಾಲಿಸಿದೊಡನೆಯೇ ಆ ಪೂರ್ವಗ್ರಹಗಳು ಕೈಕಾಲು ಕಟ್ಟು ಏನೂ ತೋರದೆ ಬಲಹೀನವಾಗಿ ಕುಮಾರಸ್ವಾಮಿಯನ್ನೇ ಶರಣುಹೊಂದಿದುವು.

೨೬. ಯಾವಾಗ ಡೆ ಪೂರ್ವಗ್ರಹಗಳು ತನ್ನನ್ನೇ ಶರಣಾಗತನನ್ನಾಗಿರುವಂತೆ ಬೇಡಿಕೊಂಡು ಮರೆಹೊಕ್ಕು, ಮಣಿದು ನಿಂತವೋ ಆ ಕೂಡಲೆ ಭಗವಾನ್ ಸ್ಕಂದನು

ಏತದ್ವರಮಭೀಷ್ಟಂ ನಃ ಸರ್ವೇಷಾಂ ದೀಪ್ತವಿಗ್ರಹ ।
॥ ಸ್ಕಂದ ಉವಾಚ ॥
ದುರಾಚಾರಾಂಸ್ತಥಾ ಲೋಕೇ ಗಂಧಮಾಲ್ಯಾನುಲೇಪನೇ ॥ ೨೮ ॥

ತೇಷಾಂ ಶರೀರೇ ರತ್ಯರ್ಥಂ ವಸಧ್ವಂ ನಾತ್ರ ಸಂಶಯಃ ।
ಯೇ ಭಕ್ತಾಸ್ತ್ರ್ಯಂಬಕೇ ದೇವೇ ತಥಾ ದೇವೇ ಜನಾರ್ದನೇ ॥ ೨೯ ॥

ಆಸ್ತಿಕಾಂಚ್ಛ್ರದ್ದಧಾನಾಂಶ್ಚ ವರ್ಜಯಧ್ವಂ ಪ್ರಯತ್ನತಃ ।
ವರಾರ್ಥಮಪಿ ಸಂಗೃಹ್ಯ ನ್ಯಸ್ತಾ ಕರ್ಮಾದಿಭಿಃ ಕ್ರಮ್ಯೈಃ ॥ ೩೦ ॥

---

ಆ ಗ್ರಹಗಳನ್ನು ಕುರಿತಿಂತೆಂದನು :—ಎಲೈ ಸಕಲ ದೇವಗ್ರಹಗಳಿರಾ! ನನ್ನನ್ನೇ ಶರಣುಹೊಕ್ಕ ನಿಮಗೆಲ್ಲರಿಗೂ ಈಗ ವರವನ್ನು ಕೊಡುತ್ತೇನೆ.

೨೭. ಯಾವಾಗ ನನ್ನನ್ನು ಪೂಜ್ಯನನ್ನಾಗಿ ತಿಳಿದು, ನನ್ನನ್ನು ನೀವು ಶರಣು ಹೊಂದಿದಿರೋ, ಆಗ ನೀವೆಲ್ಲರೂ ನನಗೆ ಪೂಜ್ಯರಾಗಿ ಪರಿಣಮಿಸಿದಿರಿ. ಈಗ ನಿಮಗೆ ಬೇಕಾದ ವರಗಳನ್ನು ಕೇಳಿಕೊಳ್ಳಿರಿ. ಆ ವರಗಳನ್ನು ಕೊಡುವುದಕ್ಕೆ ನಾನು ಸಿದ್ಧನಾಗಿದೇನೆಂದು ಹೇಳಲು, ಆ ಸಕಲ ಗ್ರಹಗಳೂ ಸ್ಕಂದನನ್ನು ಸ್ತುತಿಸಿ ಕೇಳಿಕೊಂಡ ವರವದೇನೆಂದರೆ :—ಸ್ವಾಮಿ ! ನೀವು ನಮಗೆ ಈಗ ಸ್ವಲ್ಪ ಅಪ್ಪಣೆಯನ್ನು ಕೊಟ್ಟು ಬಿಟ್ಟರೆ ಸಾಕು. ಮನುಷ್ಯಲೋಕಕ್ಕೆ ಹೋಗಿ ಅಲ್ಲಿರುವ ಮನುಷ್ಯರನ್ನೆಲ್ಲಾ ಹಿಡಿದು ತಿಂದುಬಿಡುತ್ತೇವೆ.

೨೮. ಇದೇ ನಮ್ಮೆಲ್ಲರಿಗೂ ಬೇಕಾದ ವರ, ಮಹಾಸ್ವಾಮಿ ! ಅಪ್ಪಣೆ ಯಾಗಲಿ, ಎಂದು ಬೇಡಿಕೊಳ್ಳಲು ಸರ್ವಜ್ಞನೂ, ಶಿಷ್ಟರಕ್ಷಕನೂ ಆದ ಆ ಸ್ಕಂದನು ಆ ದೇವಗ್ರಹಗಳಿಗೆ ಇಂತು ಅಪ್ಪಣೆಮಾಡಿದನು :—ಎಲೈ ಗ್ರಹಗಳಿರಾ ! ಯಾವ ಮನುಷ್ಯನು ಗಂಧ, ಹೂವುಗಳನ್ನು ವಿಶೇಷವಾಗಿ ಅನುಲೇಪಿಸಿಕೊಳ್ಳುತ್ತಾ, ಧರಿಸುತ್ತಾ, ದುರಾಚಾರಗತನಾಗಿರುವನೋ ಅಂಥವನ ಬಳಿಗೆ ಹೋಗಿ.

೨೯. ಅವರುಗಳ ದೇಹದಲ್ಲಿ ವಾಸಮಾಡಿಕೊಂಡು ಗಂಧಪುಷ್ಪೋಪಭೋಗ ಗಳನ್ನು ಆ ದೇಹಗಳಲ್ಲಿ ಅನುಭವಿಸುತ್ತಾ ತೃಪ್ತರಾಗಿ ಇದ್ದುಕೊಂಡಿರಿ. ಈಶ್ವರನಲ್ಲೂ ಮಹಾವಿಷ್ಣುವಿನಲ್ಲೂ ಯಾವನು ವಿಶೇಷ ಭಕ್ತಿಯನ್ನು ಇಟ್ಟು ಆ ಹರಿಹರರನ್ನಾ ರಾಧಿಸುತ್ತಿರುವನೋ,

೩೦. ಅಂತಹ ಆಸ್ತಿಕನನ್ನೂ ಶ್ರದ್ಧಾಭಕ್ತಿ ಸಮನ್ವಿತರಾದ ಭಕ್ತರನ್ನೂ ನೀವು ಬಿಟ್ಟುಬಿಡಿ. (ಅಂಥವರೆ ಭಗವದ್ಭಕ್ತರಿಗೆ ಎಂತಹ ಗ್ರಹಬಾಧೆಯೂ ಸಂಭವಿಸುವುದಿಲ್ಲ

ತ್ಯಕ್ಷಧ್ವಂ ಪುರುಷಾನ್ ಶೀಘ್ರಂ ಮಮ ವಿಜ್ಞಾಯ ಶಾಸನಂ ।
॥ ನಾಡಾಯನ ಉವಾಚ ॥
ಏವಮುಕ್ತಾ ಗ್ರಹಾಃ ಸರ್ವೇ ಸ್ವಾಮ್ಯೇ ಚಕ್ರುಸ್ತಥಾ ಶಿಶುಂ ॥ ೩೧ ॥

ಕುಮಾರಂ ಶರ್ವತನಯಂ ಮಹಾಬಲಪರಾಕ್ರಮಂ ।
ಸ್ಕಂದೇನೈವ ಯಥೋಕ್ತಂ ತು ಸ್ಕಂದಂ ಸ್ಕಂದಗ್ರಹಾಸ್ತದಾ ॥ ೩೨ ॥

ಸಮೇತ್ಯ ಸರ್ವೇ ವಚನಮಿದಮೂಚುರ್ನರಾಧಿಪ ।
ಅಸ್ಮಾಕಮಪಿ ದೇವೇಶ ಪ್ರಸಾದಂ ಕರ್ತುಮರ್ಹಸಿ ॥ ೩೩ ॥

ಏವಮುಕ್ತೋಽಥ ಧರ್ಮಾತ್ಮಾ ಗ್ರಹಾನ್ಸ್ಕಂದಸ್ತ್ವಭಾಷತ ।
ಯಾವತ್ಷೋಡಶವರ್ಷಾಣಿ ಮಾನವಾನಾಂ ಭವಂತ್ಯುತ ॥ ೩೪ ॥

---

ವೆಂದು ತಾತ್ಪರ್ಯ.) ಮತ್ತು ತಮ್ಮ ತಮ್ಮ ವರ್ಣಾಶ್ರಮ ಧರ್ಮಾನುಸಾರವಾದ ಕರ್ಮಗಳನ್ನು ಆರ್ಷೇಯಕ್ರಮಾನುಸಾರವಾಗಿಯಾಗಲಿ, ಪರಾರ್ಥವಾಗಿ ಯಾಗಲೀ ಯಾರು ಬಿಡದೆ ನಡೆಸಿಕೊಂಡು ಬರುತ್ತಿರುವರೋ,

೩೧. ಅಂತಹ ಕರ್ಮನಿಷ್ಠರನ್ನು ನನ್ನ ಅಪ್ಪಣೆಯೆಂದು ತಿಳಿದು ಅವರನ್ನು ಬಿಟ್ಟುಬಿಡಿ. ಅವರ ಸಮೀಪಕ್ಕೆ ಸುಳಿಯಬೇಡಿರಿ, ಹೀಗೆಂದು ಹೇಳಲು ಆ ಸಕಲ ಗ್ರಹಗಳೂ ಹಾಗೇ ಆಗಲೆಂದು ಹೇಳಿ, ಅವನ ಪ್ರತಿಜ್ಞಾಪಾಲನೆಗೋಸ್ಕರ ಆ ಸ್ಕಂದ ನನ್ನೇ ತಮ್ಮ ಅಧಿಪತಿ (ಸೇನಾನಾಯಕ) ಯನ್ನಾಗಿ ಮಾಡಿಕೊಂಡು, ಆ ಎಳೇ ಮಗು ವಾದ ಷಡಾನನನನ್ನು ತಮ್ಮೊಡೆಯನನ್ನಾಗಿಮಾಡಿಕೊಂಡುವು. ಕೇಳೈ ಶೈಲೂಷ ರಾಜನೇ! ಎಂಬುದಾಗಿ ನಾಡಾಯನರು ಕುಮಾರನ ಕಥೆಯನ್ನು ಹೇಳುತ್ತಾ, ಆ ಮಹಾನುಭಾವನ ಚರಿತ್ರೆಯನ್ನು ಇನ್ನೂ ಮುಂಬರಿಸಿ ಹೇಳಿದುದದೆಂತೆನೆ:—

೩೨-೩೩. ಈ ಮೇರೆ ತಮಗೆ ಶತ್ರುಭೂತರಾದ ಪೂರ್ವದೇವ ಗ್ರಹಗಳು ಸ್ಕಂದನಲ್ಲಿ ವರವನ್ನು ಪಡೆದುಕೊಂಡು ಅವನನ್ನು ತಮ್ಮ ಸ್ವಾಮಿಯನ್ನಾಗಿಮಾಡಿ ಕೊಂಡುದನ್ನು ನೋಡಿ, ಸ್ಕಂದನಿಂದುತ್ಪತ್ತಿಯಾದ ಸ್ಕಂದ ಗ್ರಹಗಳೂ ಸಹ ಸ್ಕಂದನ ಸಮೀಪಕ್ಕೆ ಓಡಿಬಂದು—ಸ್ವಾಮಿ! ಅವರ ಹೆಚ್ಚೇನು? ನಮ್ಮ ಕಡಿಮೆ ಏನು? ಅವರಿಗೆ ಕೊಟ್ಟಂತೆ ನಮಗೂ ಏನಾದರೂ ವರಪ್ರದಾನಮಾಡಿ ನಮ್ಮನ್ನು ಅನುಗ್ರಹಿಸ ಬೇಕು. ನಮ್ಮೊಡೆಯ! ಎಂದು ಬೇಡಿಕೊಂಡುವು.

೩೪. ಈ ರೀತಿಯಾಗಿ ಬೇಡಿಕೊಂಡ ತನ್ನಿಂದಲೇ ಉತ್ಪತ್ತಿಯಾದ ಗ್ರಹ ಗಳನ್ನು ಕುರಿತು ಆ ಕುಮಾರಸ್ವಾಮಿಯು ಇಂತೆಂದನು:—ಎಲೈ ನನ್ನ ಪ್ರೀತಿಪಾತ್ರ

ತಾವದ್ಭವಂತೋ ಬಾಧಂತು ಮನುಷ್ಯಾಣಾಂ ತಥಾ ಪ್ರಜಾಃ ।
ತತ್ರಾಪಿ ಬಲಿಕರ್ಮಾದ್ಯೈಃ ಕ್ಷೇಮಂ ತೇಷಾಂ ಕರಿಷ್ಯಥ ।
ತತಃ ಪೂರ್ವಂ ಗ್ರಹಾಣಾಂ ತು ಪೂಜ್ಯಾ ಲೋಕೇ ಭವಿಷ್ಯಥ ॥ ೩೫ ॥

ಏತಾವದುಕ್ತ್ವಾ ಭಗವಾನ್ಕುಮಾರೋ
ದದೌ ಗ್ರಹಾಣಾಮಪರಂ ಶರೀರಂ ।

---

ವಾದ ಗ್ರಹಗಳಿರಾ! ನೀವೂ ಮನುಷ್ಯಲೋಕದಲ್ಲಿ ಪರೋಕ್ಷವಾಗಿ (ಒಬ್ಬರ ಕಣ್ಣಿಗೂ ಕಾಣಿಸಿಕೊಳ್ಳದೆ) ಇದ್ದುಕೊಂಡು ಹದಿನಾರು ವರ್ಷ ವಯಸ್ಸಿನೊಳಗೆ ಇರುವ ಹುಡುಗರನ್ನು ಮಾತ್ರ ಹಿಡಿದುಕೊಳ್ಳಿರಿ.

೩೫. ಹದಿನಾರು ವರ್ಷ ಕಳೆದ ಮೇಲೆ ಪ್ರಾಯಸಮರ್ಥರಾದ ಪುರುಷರ ಮತ್ತು ಸ್ತ್ರೀಯರ ಬಳಿಗೆ ನೀವು ಹೋಗಬೇಡಿ. ನಿಮ್ಮ ಆಧಿಪತ್ಯವು ಹದಿನಾರು ವರ್ಷದ ಒಳಗಿನ ಮಕ್ಕಳ ಮತ್ತು ಬಾಲಕರ ಮೇಲೆ ಮಾತ್ರವೇ ಇರಲಿ. ನೀವು ಹಿಡಿದಾಗ (ಬಾಲಗ್ರಹ ಹಿಡಿದಾಗ) ಯಾರು ಆ ಮಕ್ಕಳ ಕ್ಷೇಮಕ್ಕೋಸ್ಕರ ನಿಮ್ಮನ್ನು ಪೂಜಿಸಿ ಬಣ್ಣ ಬಣ್ಣದ ಅನ್ನಗಳಿಂದ ನಿಮಗೆ ಬಲಿಯನ್ನು ಕೊಡುವರೋ ಅಂತಹ ಮಕ್ಕಳಿಗೆ ಕ್ಷೇಮವನ್ನುಂಟುಮಾಡಿ, ಅವರನ್ನು ಬಿಟ್ಟು ಹೊರಟು ಹೋಗಿ. ಆಗಲೀಗ ನೀವು ನಿಮ್ಮ ಪೂರ್ವದೇವತಾಗ್ರಹಗಳಿಗಿಂತ, ಹೆಚ್ಚು ಮನ್ನಣೆಯನ್ನು ಮನುಷ್ಯಲೋಕದಲ್ಲಿ ಪಡೆದು ಮಾನನೀಯರಾಗುತ್ತೀರೈ ಗ್ರಹಗಳಿರಾ!

೩೬. ಈ ರೀತಿಯಾಗಿ ಭಗವಾನ್ ಕುಮಾರಸ್ವಾಮಿಯು ಆ ಗ್ರಹಗಳನ್ನು ಕುರಿತು ಹೇಳಿ, ಅವುಗಳಿಗೆಲ್ಲಾ ಬೇರೆ ಬೇರೆ ಪರೋಕ್ಷದೇಹಗಳನ್ನುಂಟುಮಾಡಿದನು.

ದೇಹಾನ್ಸ್ವಕಾನ್ನಾಯಕ ಉಗ್ರಸತ್ತ್ವೇ
ಲೋಕಸ್ಯ ರಕ್ಷಾರ್ಥಮತೀವ ಹೃಷ್ಟಃ ॥ ೩೬ ।

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂ ಪ್ರತಿ ನಾಡಾಯನವಾಕ್ಯೇ
ತ್ರಿಂಶದುತ್ತರ ದ್ವಿಶತತಮೋಽಧ್ಯಾಯಃ

---

ಆಗ ಆ ಸಮಸ್ತ ಗ್ರಹಗಳೂ ತಮ್ಮ ಭಯಂಕರ ರೂಪವನ್ನು ತ್ಯಾಗಮಾಡಿ, ಸಂತೋಷವಾಗಿ, ಲೋಕರಕ್ಷಾರ್ಥವಾದ ಪರೋಕ್ಷದೇಹಗಳನ್ನು ಸಾಕ್ಷಿರೂಪದಿಂದ ಪರಿಗ್ರಹಿಸಿದರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ದೇವಗ್ರಹ, ಸ್ಕಂದಗ್ರಹ, ಬಾಲ
ಗ್ರಹಗಳ ವಿವರಣೆಯೆಂಬ ಹೆಸರಿನ ಇನ್ನೂರ
ಮೂವತ್ತನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಏಕತ್ರಿಂಶತ್ಯುತ್ತರ ದ್ವಿಶತತಮೋಽಧ್ಯಾಯಃ ॥

॥ ಶೈಲೂಷ ಉವಾಚ ॥

ನೃಣಾಂ ಗ್ರಹಗೃಹೀತಾನಾಂ ಲಕ್ಷಣಂ ಕಥಯಾಶು ಮೇ ।
ಪ್ರತಿಷೇಧಂ ಚ ಧರ್ಮಜ್ಞ ತತ್ರ ಮೇ ಸಂಶಯೋ ಮಹಾನ್ ॥ ೧ ॥

॥ ನಾಡಾಯನ ಉವಾಚ ॥

ದೇವರ್ಷಿಪಿತೃಭೂತಾನಾಂ ಸತತಂ ಚಾವಮಾನನಾತ್ ।
ಗುರುವೃದ್ಧದ್ವಿಜಾಚಾರ್ಯಸಿದ್ಧತಾಪಸಮರ್ದನಾತ್ ॥ ೨ ॥

---

### ಇನ್ನೂರ ಮೂವತ್ತೊಂದನೆಯ ಅಧ್ಯಾಯವು.

೧. ಶೈಲೂಷನು ಪುನಃ ಪ್ರಶ್ನೆ ಮಾಡುತ್ತಾನೆ:—ನಾಡಾಯನರೆ! ನೀವು ಹೇಳುತ್ತಿರುವ ಕಥೆಗಳನ್ನು ಕೇಳುತ್ತಾ ಕೇಳುತ್ತಾ ನನಗೆ ಪರಮಾಶ್ಚರ್ಯವುಂಟಾಗುತ್ತಲಿದೆ. ನೀವು ಹೇಳಿದ ಗ್ರಹಗಳುಂಟಲ್ಲಾ? ಅವು ಮನುಷ್ಯರನ್ನು ಹೇಗೆ ಹಿಡಿಯುವುವು? ಗ್ರಹ ಹಿಡಿದ ಕಾಲದಲ್ಲಿ ಆ ಮನುಷ್ಯನ ಲಕ್ಷಣವೆಂತಿರುವುದು? ಮತ್ತು ಆ ಗ್ರಹವು ಆ ಮನುಷ್ಯನನ್ನು ಬಿಟ್ಟುಹೋಗಬೇಕಾದರೆ ಏನು ಮಾಡಬೇಕೆಂಬುದನ್ನು ತಿಳಿಸಬೇಕು.

೨. ಅದಕ್ಕೆ ನಾಡಾಯನರು ಉತ್ತರ ಹೇಳುತ್ತಾರೆ:—ಯಾವಾಗಲೂ ದೇವತೆಗಳನ್ನೂ, ಋಷಿಗಳನ್ನೂ, ಪಿತೃಗಳನ್ನೂ, ಅವಮಾನಪಡಿಸೋಣದರಿಂದಲೂ, ಗುರುಗಳಾದವರನ್ನೂ, ತನಗಿಂತ ವೃದ್ಧರನ್ನೂ, ಆಚಾರ್ಯರನ್ನೂ, ಸಿದ್ಧಪುರುಷರನ್ನೂ, ತಪಸ್ವಿಗಳನ್ನೂ ಹಿಂಸೆ ಮಾಡೋಣದರಿಂದಲೂ,

ಬಲಿಮಂಗಳಹೋಮಾದಿನಿಯಮಾಚಾರಸರ್ಜನಾತ್ ।
ವ್ರತಾಧ್ಯಯನಧರ್ಮಾದಿಧ್ಯಾನಯೋಗವ್ಯತಿಕ್ರಮಾತ್ ॥ ೩ ॥

ಗುಡಾಮಿಷತಿಲಕ್ಷೌದ್ರಮೇಧ್ಯೈರುಚ್ಛೇಷಿತಸ್ಯ ವಾ ।
ಶ್ಮಶಾನಾಯತನಾಭ್ಯಾಸವಿಣ್ಮೂತ್ರೋತ್ಸರ್ಜನಾದಪಿ ॥ ೪ ॥

ರಾತ್ರೌ ಚತುಷ್ಪಥಾರಣ್ಯಶೂನ್ಯವೇಶ್ಮನಿವೇಶನಾತ್ ।
ಭೋಜನಾದ್ಭಿನ್ನಭಾಂಡೇಷು ತಥಾ ಮಂತ್ರಚ್ಛಲಾದಪಿ ॥ ೫ ॥

ಶ್ಮಶಾನಚೈತ್ಯವೃಕ್ಷಾದಿಮೈಥುನಾದಿನಿಷೇವಣಾತ್ ।
ಅವಮಾನಾದಭೀಘಾತಾನ್ಮಂಗಲಾನಾಮದರ್ಶನಾತ್ ॥ ೬ ॥

---

೩-೧೦. ವೈಶ್ವದೇವ, ಬಲಿಹರಣ, ಮಂಗಳಕರ್ಮ, ಹೋಮನಿಯಮಾದ್ಯಾಚಾರಗಳನ್ನು ವರ್ಜಿಸೋಣದರಿಂದಲೂ, ನಿಯಮ, ಅಧ್ಯಯನ, ಧರ್ಮ, ಧ್ಯಾನಯೋಗಾದಿಗಳನ್ನು ಅತಿಕ್ರಮಿಸೋಣದರಿಂದಲೂ, ಶ್ಮಶಾನಗಳಲ್ಲಿಯೂ, ಚೈತ್ಯಾಲಯಗಳಲ್ಲಿಯೂ, ಮಾರ್ಗಮಧ್ಯಗಳಲ್ಲಿಯೂ, ಮೂತ್ರವನ್ನೂ ಅಮೇಧ್ಯವನ್ನೂ ವಿಸರ್ಜಿಸೋಣದರಿಂದಲೂ, ರಾತ್ರಿ ಹೊತ್ತಿನಲ್ಲಿ ನಾಲ್ಕು ದಾರಿ ಕೂಡಿದ ಜಾಗಗಳಲ್ಲೂ, ಕಾಡುಗಳಲ್ಲಿಯೂ, ಹಾಳುಬಿದ್ದ ಮನೆಗಳಲ್ಲಿಯೂ ಸಹ ವಾಸಮಾಡೋಣದರಿದಲೂ ಒಡೆದ ಮಡಕೆಯ ಚೂರುಗಳಲ್ಲಿ ಅನ್ನವನ್ನು ತಿನ್ನೋಣದರಿಂದಲೂ, ವೇದಮಂತ್ರದೊಡನೆ ಹಠಮಾಡೋಣದರಿಂದಲೂ, ಶ್ಮಶಾನ, ಚೈತ್ಯಾಲಯ(ದೇವಸ್ಥಾನ), ಗಳಲ್ಲೂ ಮರಗಳ ಕೆಳಗೂಮಲಗಿಕೊಂಡು ಸ್ತ್ರೀಸಂಭೋಗ ಮಾಡುವುದರಿಂದಲೂ, ಶತ್ರುಗಳನ್ನು (ಅಭೀಘಾತಃ ಪರಾರಾತಿರಿತ್ಯಮರಃ) ಅವಮಾನಪಡಿಸೋಣದರಿಂದಲೂ, ಮಂಗಳವಸ್ತುಗಳನ್ನು ನೋಡದೆ ಇರೋಣದರಿಂದಲೂ, ಇನ್ನೊಬ್ಬರ ಮೇಲೆ (ಇತರರ ಸಂಪತ್ತನ್ನು ನೋಡಿ) ಕರುಬುವುದರಿಂದಲೂ, ಬಂಧುಗಳ ಶಾಪದಿಂದಲೂ, ಗಾಡಿಯ ಚೌಕಗಳಲ್ಲಿ ವಾಸಮಾಡೋಣದರಿಂದಲೂ, ತೀರಾ ಬಡತನದ ಬೇಗೆಯಿಂದಲೂ, ಅತಿ ದುಃಖದಿಂದಲೂ, ಅತಿ ದರ್ಪ (ದುರಹಂಕಾರ)ದಿಂದಲೂ, ಮಿತಿ ಮೀರಿದ ಸಂತೋಷದಿಂದಲೂ, ಕೇವಲ ನಾಚಿಕೆಯಿಂದಲೂ, ನಾಸ್ತಿಕ್ಯದಿಂದಲೂ, ಅತಿಯಾಗಿ ಹೆದರೋಣದರಿಂದಲೂ, ಗುರುಗಳನ್ನು ತ್ಯಾಗಮಾಡೋಣದರಿಂದಲೂ, ಕೃತಘ್ನತೆಯಿಂದಲೂ,

ಈಷ್ಯರ್ಯಯಾ ಬಂಧುಶಾಪಾಚ್ಚ ರಥಾವಸ್ಕಂಧಸೇವನಾತ್ ।
ಐಶ್ವರ್ಯನಾಶಾಚ್ಛೋಕಾಚ್ಚ ದರ್ಪೋತ್ಸೇಕಾತಿಹರ್ಷಣಾತ್ ॥ ೭ ॥

ನಿರ್ಲಜ್ಜನಾಸ್ತಿಕಾನಾಂ ಹಿ ತ್ರಾಸಿತಾನಾಂ ವಿಶೇಷತಃ ।
ಗುರುಭಿಃ ಸಂಪರಿತ್ಯಾಗಾತ್ಕಾರ್ತ್ಯಘ್ನ್ಯಾತ್ಸಾಧುನಿಂದನಾತ್ ॥ ೮ ॥

ದುಃಖಾತ್ಪ್ರಜನನಾತ್ಸ್ತ್ರೀಣಾಂ ಮಿಥ್ಯಾ ಚೈವ ಪ್ರಭಾಷಣಾತ್ ।
ತುಷಕೇಶಕಪಾಲಾಸ್ಥಿಕಾರ್ಪಾಸಾದಿಷ್ವಧಿಷ್ಠಿತಾತ್ ॥ ೯ ॥

ಪ್ರಾಣಿನಾಂ ಸುಖದುಃಖೇಷು ತಥಾ ಮೃತಕಸೂತಕೇ ।
ಅರ್ಧರ್ನಕ್ತಸ್ನಾತೇಷು ಗ್ರಹಾ ಗೃಹ್ಣಂತಿ ಮಾನವಾನ್ ॥ ೧೦ ॥

ಬಲೈಶ್ವರ್ಯವಿಸಂಯೋಗಾದ್ದೇಹಮಾವಿಶತಿ ಗ್ರಹಃ ।
ಜೀವಃ ಕುಕ್ಷಿಂ ಯಥಾ ದೃಶ್ಯಃ ಪ್ರವಿಶನ್ನೇವ ದೃಶ್ಯತೇ ॥ ೧೧ ॥

---

ಸಾಧುಸಜ್ಜನರನ್ನು ನಿಂದಿಸೋಣದರಿಂದಲೂ, ಹೆಂಗಸರನ್ನು ದುಃಖಪಡಿಸೋಣದರಿಂದಲೂ' ಯಾವಾಗಲೂ ಸುಳ್ಳುಮಾತುಗಳನ್ನೇ ಆಡುತ್ತಿರೋಣದರಿಂದಲೂ, ಹೊಟ್ಟು ಕೂದಲು, ಬಕ್ಕರೆ, ಮೂಳೆ, ಹತ್ತಿಗಳನ್ನು ತುಳಿಯೋಣದರಿಂದಲೂ, ಪ್ರಾಣಿಗಳ ಸುಖದುಃಖಸಮಯಗಳಲ್ಲಿಯೂ, ಸತ್ತ ಸೂತಕ ಸಮಯಗಳಲ್ಲಿಯೂ, ಅರ್ಧರಾತ್ರಿ ಸ್ನಾನ, ಅತಿಸ್ನಾನ ಸಮಯಗಳಲ್ಲಿಯೂ, ಗ್ರಹಗಳು ಕಾದಿದ್ದು ಅಂತಹ ಮನುಷ್ಯರನ್ನು ಹಿಡಿದುಕೊಳ್ಳುವುವು.

೧೧. ಬಲೈಶ್ವರ್ಯಗಳಿಂದ ವಿಯುಕ್ತನಾದ ಮನುಷ್ಯನನ್ನು ಗ್ರಹವು ಹಿಡಿದೊಡನೆಯೇ ಅವನ ಹೊಕ್ಕಳನ್ನು ಆ ಜೀವಗ್ರಹವು ಪ್ರವೇಶಿಸುತ್ತದೆ. ನಾವು ಆಗ ಅವನ ಚೇಷ್ಟೆಗಳಿಂದಲೇ ಇವನಿಗೆ ಗ್ರಹವು ಹಿಡಿದಿದೆಯೆಂದು ತಿಳಿದುಕೊಳ್ಳಬಹುದು. ಅದು ಹೇಗೆಂದರೆ;—ಆಯಾಯ ಋತುಗಳು ಪ್ರಾಪ್ತವಾದೊಡನೆಯೇ ಋತುಧರ್ಮಾನುಸಾರವಾಗಿ ಆಯಾಯ ವನಸ್ಪತಿಗಳು ಪುಷ್ಪಫಲಗಳಿಂದ ತುಂಬಿತುಳುಕಾಡುವುದನ್ನು ನೋಡುತ್ತಲೇ ಇರುವವಷ್ಟೆ ? ಅದೇಮೇರೆ ದೇಹದ ನಡುಕ ಮುಂತಾದ ಅಂಗಚೇಷ್ಟೆಗಳು ಪ್ರಾರಂಭವಾದೊಡನೆಯೇ ಯಾವುದೋ ಗ್ರಹವು ಹಿಡಿದುಕೊಂಡಿದೆಯೆಂದು ಗೊತ್ತುಮಾಡಿಕೊಳ್ಳಬೇಕು.

ವನಸ್ಪತೀನಾಂ ಋತವೋ ವಿಜ್ಞೇಯಾಶ್ಚ ತಥಾ ಗ್ರಹಾಃ ।
ಕಾರಣೈರ್ನವಭಿರ್ದೇಹಂ ಗ್ರಹೋ ಗೃಹ್ಣಾತಿ ದೇಹಿನಾಂ ॥ ೧೨ ॥

ರೌದ್ರಸ್ವಭಾವಾದ್ಧಿಂಸಾರ್ಥೀ ರತ್ಯರ್ಥೀ ಬಲಿಕಾಮುಕಃ ।
ವಿತ್ರಾಸಾರ್ಥೀ ಬಲೋದ್ರೇಕಾದ್ರೌದ್ರಾತ್ಪ್ರಾಗ್ದ್ರೈಹಿಕಾದ್ಭಯಾತ್ ॥ ೧೩ ॥

ಪ್ರಯುಕ್ತೋಽನ್ಯೇನ ಮಂತ್ರೈಶ್ಚ ಗ್ರಹೋ ಗೃಹ್ಣಾತಿ ಮಾನವಾನ್ ।
ಕಾರಣಾನಿ ತವೋಕ್ತಾನಿ ಯದ್ಯಪ್ಯೇತಾನಿ ಪಾರ್ಥಿವ ॥ ೧೪ ॥

ತಥಾಪಿ ತ್ರಯ ಏವಾತ್ರ ವಿಜ್ಞೇಯಾನಿ ವಿಪಶ್ಚಿತಾ ।
ತೇಷಾಮಂತರ್ಭವಂತ್ಯೇತೇ ಯಸ್ಮಾತ್ಪಾರ್ಥಿವಸತ್ತಮ ॥ ೧೫ ॥

ಬಲಿಕಾಮಸ್ತು ರತ್ಯರ್ಥೀ ಹಿಂಸಾರ್ಥೀ ಚ ತಥಾ ಗ್ರಹಃ ।
ಅಸಾಧ್ಯಂ ಬಲಿಕಾಮಂತು ಕೃಚ್ಛ್ರಸಾಧ್ಯಂ ರತಿಗ್ರಹಂ ॥ ೧೬ ॥

---

೧೨-೧೩. ಈ ಕೆಳಗೆ ವಿವರಿಸಿರುವ ಒಂಭತ್ತು ಕಾರಣಗಳಿಂದ ಗ್ರಹಗಳು ಮನುಷ್ಯರ ದೇಹವನ್ನಾಕ್ರಮಿಸುವುವು. ಭಯಂಕರವಾದ ರೌದ್ರಮುಖ, ಮತ್ತೊಬ್ಬರನ್ನು ಅಕಾರಣವಾಗಿ ಹಿಂಸಿಸೋಣ, ಅತ್ಯಾಶೆಯಿಂದ ಕೂಡಿರೋಣ, ಬಲಿಯನ್ನು ಅಪೇಕ್ಷಿಸೋಣ, ಬಲೋದ್ರೇಕದಿಂದ ಕೂಡಿರೋಣ, ಎಲ್ಲಾದರೂ ಅಂಜಿಕೊಂಡಿರೋಣ, ಯಾರಾದರೂ ಇವನಮೇಲೆ ಮಂತ್ರ (ಮಾಟ) ಪ್ರಯೋಗಮಾಡಿರೋಣ, ಇತ್ಯಾದಿ ಕಾರಣಗಳಿಂದ ಗ್ರಹಚೇಷ್ಟೆಗಾರಂಭವಾಗುವುದು.

೧೪-೧೫. ಇದಕ್ಕೆ ಕಾರಣಗಳು ಇಷ್ಟೇ ಸರಿಯೆಂದು ನಾವು ನಿಷ್ಕರ್ಷೆಮಾಡಿ ಹೇಳುವುದಕ್ಕಾಗುವುದಿಲ್ಲ. ಯದ್ಯಪಿ ಇದಕ್ಕೆ ಮೂರು ಕಾರಣಗಳಿವೆಯೆಂದು ಮುಖ್ಯವಾಗಿ ಬುದ್ಧಿವಂತನಾದವನು ಗ್ರಹಿಸಬೇಕು. ಯಾವ ಈ ಕೆಳಗೆ ವಿವರಿಸುವ ಮುಖ್ಯ ಕಾರಣಗಳಿಗೋಸ್ಕರವಾಗಿ ಆಯಾಯ ಆಶಾಬದ್ಧವಾದ ಗ್ರಹಗಳು ಅಂತಂತಹ ಮನುಷ್ಯರನ್ನು ಹುಡುಕಿಹುಡುಕಿ ಹಿಡಿಯುವ ಕ್ರಮವನ್ನು ಹೇಳುವೆನು ಕೇಳು.

೧೬. ಅನ್ನ ತಿನ್ನುವ ಆಶೆ, ಸಂಭೋಗಾಪೇಕ್ಷೆ, ಹಿಂಸಾಪೇಕ್ಷೆ, ಇವೇ ಈ ಮುಖ್ಯಕಾರಣಗಳು. ಅನ್ನಗ್ರಹವು ಹಿಡಿದುಬಿಟ್ಟರೆ ಎಷ್ಟು ಅನ್ನವಾದರೂ ಅದಕ್ಕೆ

**ಹಂತುಕಾಮಮಸಾಧ್ಯಂತು ವಿನಾ ಮಂತ್ರಬಲಂ ಮಹತ್ ।**
**ಸಾಂತ್ವಪೂರ್ವಂ ಗ್ರಹೋ ವಿಷ್ಣೋ ಮಧುರಂ ಯಃ ಪ್ರಜಾಯತೇ ॥**

**ತತಶ್ಚಾಂತರಮಾಸಾದ್ಯ ವಿಚಿತ್ರಂ ಯಾಚತೇ ಬಲಿಂ ।**
**ಪಾನಮಾಲ್ಯಾನುಲೇಪಾಂಶ್ಚ ನೈವೇದ್ಯಂ ದೃಷ್ಟ್ವಾ ನಮಸ್ಯತಿ ॥ ೧೮ ॥**

**ಬಲಿಕಾಮಸ್ಯ ಲಿಂಗಾನಿ ಪ್ರೋಕ್ತಾನ್ಯೇತಾನಿ ವೈ ಮಯಾ ।**
**ರಮತೇ ನೃತ್ಯತಿ ಶುಚಿಸ್ತಥಾ ಹಸತಿ ಗಾಯತಿ ॥ ೧೯ ॥**

---

ಹೊಟ್ಟೆ ತುಂಬುವುದೇ ಇಲ್ಲ. ರತಿ (ಮೋಹಿನಿ) ಗ್ರಹವು ಹಿಡಿದರೆ ಹೆಂಗಸನ್ನಾಗಲಿ ಗಂಡಸನ್ನಾಗಲಿ ಮೈಥುನಮಾಡಿ ಎಷ್ಟಾದರೂ ತೃಪ್ತಿಪಡದೆ ಗ್ರಹಪೀಡಿತನನ್ನು ಹಿಂಡಿ ಹಿಪ್ಪೆಮಾಡುವುದು.

೧೭. ಹಿಂಸ್ರಗ್ರಹವು ಏನಾದರೂ ಹಿಡಿದುಬಿಟ್ಟಿತೆಂದರೆ ಏತೇತರಿಂದಲೂ ಸಾಯದೆಯಿದ್ದ ಮಹಾಬಲಿಷ್ಠನನ್ನಾದರೂ ಸಹ ತೆಗೆದು (ಮುರಿದು) ಕೊಂಡೇ ಹೊರಟುಹೋಗುವುದು. ಆದ್ದರಿಂದ ಅಂತಹ ಗ್ರಹವನ್ನು ಮೊದಲು ಹೊರಡಿಸಬೇಕು. ಅದು ಬಲುಮೋಸಗ್ರಹ. ಅದೇನುಮಾಡುವುದೆನ್ನು ವಿರೋ ಅದು ಹಿಡಿದ ಪುರುಷನ ಬಾಯಿಂದ ಬಹಳ ಸಮಾಧಾನದ ಮಾತುಗಳನ್ನೂ, ಮೃದುಮಧುರವಾದ ಮಾತುಗಳನ್ನೂ ಆಡಿಸುತ್ತಲೇ ಇದ್ದು ಕಡೆಗೆ ಆಸಮಯದಲ್ಲಿ ಅಸುವನ್ನು ಹೀರಿಬಿಡುವುದು.

೧೮. ಬಲಿಗ್ರಹವೆನ್ನುವುದು ಎಷ್ಟು ಅನ್ನವನ್ನುಂಡರೂ ಮತ್ತೂಮತ್ತೂ ಹೊಟ್ಟೆಹಸಿವೆಯೆಂದು ಹೇಳುತ್ತಲೇ ಇರುವುದು. ಯಾರಾದರೂ ಚಿಕಿತ್ಸಕ (ವೈದ್ಯ) ರು ಬಂದು ಪರೀಕ್ಷೆಮಾಡಿದರೆ ಅವರ ಕಾಲಮೇಲೆ ಬಿದ್ದು ನನಗೆ ಸ್ವಲ್ಪ ಕುಡಿಯುವ ನೀರನ್ನೂ, ಗಂಧ ಹೂವುಗಳನ್ನೂ ಕೊಡಿಸಿಕೊಡಬೇಕೆಂದು ಕೇಳಿಕೊಳ್ಳುವುದು.

೧೯. ಬಲ್ಯನ್ನವನ್ನು ಬಯಸುವ ಗ್ರಹಗಳ ಲಕ್ಷಣವನ್ನು ಈಗ ಹೇಳಿಯಾಯಿತಷ್ಟೆ? ಈ ಅತ್ಯಾಶಾಪರಗ್ರಹವು ಬಹು ಸಂತೋಷಪಡುತ್ತಿರುವಂತೆ ಕಾಣುತ್ತಿರುವುದು, ಕುಣಿಯುವುದು, ಬಹು ಶುಚಿಯಾಗಿರುವಂತೆ ಕಾಣುವುದು, ನಗುವುದು, ಹಾಡುವುದು.

ಗಂಧಮಾಲ್ಯಾಂಬರಸ್ನಾನಧೂಪೋದ್ವರ್ತನಸೇವಕಃ ।
ಕಥಾ ವಿಚಿತ್ರಾಃ ಕುರುತೇ ಮಧುರಂ ಸಂಪ್ರಭಾಷತೇ　　॥ ೨೦ ॥

ಅಲಂಕೃತಂ ಚಾವಿಶತಿ ವರ್ಜಯತ್ಯನಲಂಕೃತಂ ।
ರತಿಕಾಮಸ್ಯ ರೂಪಾಣಿ ಜ್ಞೇಯಾನ್ಯೇತಾನಿ ಬುದ್ಧಿನಾ　　॥ ೨೧ ॥

ಯಶ್ಚಾವಿಷ್ಟೋ ವಿದ್ರವತಿ ಸಿಂಹವ್ಯಾಘ್ರತರಕ್ಷುಪಂ ।
ಯುದ್ಧಮಾರಭತೇ ಕರ್ತುಂ ಗಜಾದಿಭಿರಭೀತವತ್　　॥ ೨೨ ॥

ಭೃಶಂ ತಾಡಯತಿ ಸ್ವಾಂಗಂ ಪತತ್ಯಗ್ನೌ ಪತಂಗವತ್ ।
ರಾಗದ್ವೇಷಾಣಿ ಕುರುತೇ ವಿಜನೇ ರಮತೇಽಧಿಕಂ　　॥ ೨೩ ॥

---

೨೦. ಗಂಧವನ್ನು ತೊಡೆದುಕೊಳ್ಳುವುದು, ಹೂವನ್ನು ಮುಡಿದುಕೊಳ್ಳುವುದು, ವಸ್ತ್ರವನ್ನುಟ್ಟುಕೊಳ್ಳುವುದು, ಸ್ನಾನಮಾಡುವುದು, ಧೂಪದೀಪನೈವೇದ್ಯಗಳನ್ನು ಬಯಸುವುದು, ನಾನಾವಿಧವಾದ ವಿಚಿತ್ರ ಕಥೆಗಳನ್ನು ಹೇಳುವುದು, ಮೃದುಮಧುರವಾಗಿ ಮಾತನಾಡುವುದು.

೨೧ ಯಾರಾದರೂ ಅಲಂಕಾರಮಾಡಿಕೊಂಡಿರುವ ಪುರುಷನನ್ನು ಕಂಡರೆ ಅವನನ್ನು ಹಿಡಿದುಕೊಳ್ಳುವುದು. ಏನೂ ಅಲಂಕಾರವಿಲ್ಲದವನ ತಂಟೆಗೆ ಹೋಗದೆ ಅವನನ್ನು ಬಿಟ್ಟುಹೋಗುವುದು. ಈ ವಿಧವಾದ ವಿಶೇಷ ಲಕ್ಷಣಗಳಿಂದಲೇ ರತಿಕಾಮವಾದ ಗ್ರಹದ ಸ್ವರೂಪವನ್ನು ಬುದ್ಧಿವಂತರು ಕಂಡುಹಿಡಿಯಬಹುದು.

೨೨. ಯಾವಾಗ ಗ್ರಹ ಹಿಡಿಯಿತೋ ಆ ಕೂಡಲೆ ಆ ಗ್ರಹಾವಿಷ್ಟಮನುಷ್ಯನು ಸಿಂಹವ್ಯಾಘ್ರಗಳು ಓಡಿಹೋಗಿ ಆನೆಯಮೇಲೆ ಬೀಳುವಂತೆ ಇತರರ ಸಂಗಡ ಜಗಳ ಮಾಡುವುದಕ್ಕೆ ಆರಂಭಿಸುವನು.

೨೩. ತನ್ನ ಮೈಕೈಗಳಮೇಲೆ ತಾನೇ ಹೊಡೆದುಕೊಳ್ಳುವನು. ಪತಂಗದ ಹುಳುಗಳು ಬೆಂಕಿಯಲ್ಲಿ ಬೀಳುವಂತೆ ತಾನೂ ಬೆಂಕಿಯಲ್ಲಿ ಬೀಳುವುದಕ್ಕೆ ಹೋಗುವನು. ರಾಗದ್ವೇಷಗಳನ್ನು ತೋರ್ಪಡಿಸಿಕೊಳ್ಳುವನು. ಯಾರೂ ಇಲ್ಲದೇಇದ್ದ ಸ್ಥಳಕ್ಕೆ ಓಡಿಹೋಗಿ ಅಲ್ಲಿ ಆನಂದಪಡುವನು.

ಕರೋತಿ ಮರಣೋಪಾಯಾನ್ಹಂತುಂ ಕಾಮಾರ್ದಿತೋ ನರಃ ।
ಲೋಮಹರ್ಷೋಂಗಮಾಂದ್ಯಂ ಚ ಛಾಯಾನ್ಯೈಕೃತ್ಯಮೇವ ಚ ॥ ೨೪ ॥

ಅಮಾನುಷೋತ್ಸಾಹಬಲಂ ವಿಹಾರಾಹಾರಚೇಷ್ಟಿತಂ ।
ದ್ವೌ ವಾ ತ್ರಯೋ ವಾ ನೇತ್ರೇಽಸ್ಯ ಸಂಪಶ್ಯಂತೇ ಕುಮಾರಕಾಃ ॥ ೨೫ ॥

ನಿಮೀಲಿತಾಕ್ಷಿತಾತ್ಯರ್ಥಂ ರಕ್ತಾದಿವಮನಂ ತಥಾ ।
ಸಾಮಾನ್ಯಮೇತದುದ್ದಿಷ್ಟಂ ಗ್ರಹೇತಸ್ಯ ತು ಲಕ್ಷಣಂ ॥ ೨೬ ॥

ಮುಕ್ತಸ್ಯ ಲಕ್ಷಣಂ ಚಾತಃ ಪ್ರವಕ್ಷ್ಯಾಮಿ ನಿಬೋಧತ ।
ಭೂಮೌ ವಿನಿಪತತ್ಯಾಶು ತಥಾ ಸಂಜ್ಞಾಂ ಪ್ರಪದ್ಯತೇ ॥ ೨೭ ॥

---

೨೪. ಆತ್ಮಹತ್ಯೆ ಮಾಡಿಕೊಳ್ಳುವುದಕ್ಕಾಗಿ ನಾನಾವಿಧ ಉಪಾಯಗಳನ್ನು ಮಾಡುವನು. ತಲೆಯನ್ನು ಬಿಚ್ಚಿ ಕೆದರಿ ಅದನ್ನು ಕತ್ತಿಗೆ ಬಿಗಿದುಕೊಳ್ಳುವನು. ಹಲ್ಲನ್ನು ಕಟಕಟನೆ ಕಡಿಯುವನು. ತನ್ನ ಅಂಗವನ್ನು ನಾನಾವಿಕಾರ ಮಾಡುವನು. (ಇದು ಕಾಮೋನ್ಮತ್ತಗ್ರಹಲಕ್ಷಣ. ಹುಚ್ಚುಹಿಡಿದಾಗ ಈ ಲಕ್ಷಣಗಳೆಲ್ಲಾ ಕಾಣುವುವು ಇದು ಎಲ್ಲರೂ ನೋಡಿದ ವಿಷಯವೇ ಆಗಿದೆ.)

೨೫. ಮನುಷ್ಯನ ಯೋಗ್ಯತೆಯನ್ನು ಮೀರಿದ ಅಮಾನುಷವಾದ ಉತ್ಸಾಹವನ್ನೂ ಬಲವನ್ನೂ ತೋರ್ಪಡಿಸುವುದು. ತಿಂಡಿ, ಊಟ, ಆಟಗಳಲ್ಲಿ ಬಹು ಉತ್ಸಾಹವನ್ನು ತೋರಿಸುವುದು. ಈ ವಿಧವಾದ ಮನುಷ್ಯನ ಕಣ್ಣಿನ ಲಕ್ಷಣವೇ ವಿಕಾರವಾಗಿ ಬೇರೆಯಾಗಿ ಕಾಣುವುದು. ಇವನ ಕಣ್ಣಿಗೆ ಒಂದೇ ಆಕೃತಿಯು ಎರಡರಂತೆ ಮೂರರಂತೆ ತೋರಿಬರುವುದು.

೨೬. ಈ ಗ್ರಹವು ಒಂದೊಂದುವೇಳೆ ಕಣ್ಣುಮುಚ್ಚಿಕೊಂಡೇ ಇರುವುದು ಕಣ್ಣುಬಿಟ್ಟಾಗ ವಿಕಾರದೃಷ್ಟಿಯಿಂದ ನೋಡುವುದು, ರಕ್ತಗಳನ್ನೇ ಕಾರಿಕೊಳ್ಳುವುದು. ಸದ್ಯಕ್ಕೆ ಇಷ್ಟುಮಟ್ಟಿಗೆ ಈ ಗ್ರಹಗಳು ಹಿಡಿಯುವ ಲಕ್ಷಣಗಳನ್ನು ಹೇಳಿಯಾಯಿತು,

೨೭. ಇನ್ನುಮುಂದೆ ಹೀಗೆ ಹಿಡಿದಿದ್ದ ಗ್ರಹವು ಆ ಮನುಷ್ಯನನ್ನು ಬಿಟ್ಟು ಹೊರಟುಹೋಗುವಾಗ ಆಗುವ ಲಕ್ಷಣಗಳನ್ನು ನಿನಗೆ ತಿಳಿಸುತ್ತೇನೆ ಕೇಳು ಶೈಲೂಷ ; ಗ್ರಹ ಬಿಟ್ಟೊಡನೆ ಆ ಮನುಷ್ಯನು ಥಟ್ಟನೆ ಜ್ಞಾನತಪ್ಪಿ ನೆಲದಮೇಲೆ ಬಿದ್ದುಬಿಡುವನು. ಹಾಗೆಯೇ ಜ್ಞಾನವನ್ನು ಹೊಂದಿ ಮೇಲಕ್ಕೆದ್ದು ಕುಳಿತುಕೊಳ್ಳುವನು.

ಪರಾಮೃಶತಿ ಕೇಶಾಂಶ್ಚ ವಾಸಾಂಸ್ಯಾಭರಣಾನಿ ಚ ।
ಶುಭಾಶುಭಂ ಚಾತ್ಮಕಾರ್ಯಂ ಪೃಚ್ಛತಿಸ್ಮ ಸುಹೃಜ್ಜನಂ　　॥ ೨೮ ॥

ಅತಃ ಪರಂ ಪ್ರವಕ್ಷ್ಯಾಮಿ ದೇವಾದಿಗ್ರಹಲಕ್ಷಣಂ ।
ಚಿಕಿತ್ಸಿತೇನ ಸಂಯುಕ್ತಂ ತನ್ನಿಬೋಧ ಜನಾಧಿಪ　　॥ ೨೯ ॥

ನದೀಕೂಲಾದ್ರಿಶಿಖರರುಚಿಃ ಪ್ರಾಸಾದಮೇವ ಚ ।
ಶುಚಿಶೀಲಸಮಾಚಾರೋ ಜ್ಞೇಯೋ ದೇವಗ್ರಹಾರ್ದಿತಃ　　॥ ೩೦ ॥

---

೨೮. ಬಿಚ್ಚಿಹೋಗಿದ್ದ ತಲೆಗೂದಲನ್ನು ಸರಿಮಾಡಿಕೊಂಡು ಜುಟ್ಟು ಗಂಟು ಹಾಕಿಕೊಳ್ಳುವನು. ಬಿಚ್ಚಿಹೋಗಿದ್ದ ಬಟ್ಟೆಯನ್ನು ಸರಿಮಾಡಿ ಉಟ್ಟುಕೊಳ್ಳುವನು. ಕಳಚಿಹೋಗಿದ್ದ ಒಡವೆಗಳನ್ನು ಸರಿಯಾಗಿ ಧರಿಸಿಕೊಳ್ಳುವನು. ಹತ್ತಿರವೇ ನಿಂತಿರುವ ಆತ್ಮೀಯರನ್ನೂ ಸ್ನೇಹಿತರನ್ನೂ ಕುರಿತು ಶುಭಾಶುಭವಿಚಾರವಾಗಿಯೂ, ಗೃಹಕೃತ್ಯ ಸಂಬಂಧವಾಗಿಯೂ ಇದ್ದ ತನ್ನ ವಿಚಾರಗಳನ್ನು ಕುರಿತು ಕುಶಲಪ್ರಶ್ನೆಮಾಡುವನು.

೨೯. ಇದುವರಿಗೆ ಹೇಳಿದ ಸ್ಕಂದಗ್ರಹಗಳ ಲಕ್ಷಣವನ್ನೂ ಆವಾಹನೆ ವಿಸರ್ಜನೆ ಗಳನ್ನೂ ಕೇಳಿಯಾಯಿತಷ್ಟೆ. ಇನ್ನು ಮುಂದೆ ನಾನಾ ದೇವತಾಜನ್ಯವಾದ ಪೂರ್ವ ದೇವತಾ (ಸ್ಕಂದನ ನಿರ್ಮಾಣಕ್ಕೆ ಮುಂಚೆ ಹುಟ್ಟಿ ಸ್ಕಂದನ ಬಳಿಗೆ ಬಂದಿದ್ದ) ಗ್ರಹ ಗಳ ಲಕ್ಷಣಗಳನ್ನು ವಿವರಿಸುತ್ತೇನೆ. ಮತ್ತು ಆ ಗ್ರಹದ ಚಿಕಿತ್ಸಾಕ್ರಮವನ್ನೂ ಸಹ ಹೇಳುತ್ತೇನೆ ಕೇಳು.

೩೦. ದೇವಗ್ರಹವು ಹಿಡಿಯಿತೆಂದರೆ ತದ್ಗ್ರಹಗೃಹೀತ ಮನುಷ್ಯನು ನದೀ ತೀರಕ್ಕೆ ಹೊರಟುಹೋಗಿ ಸುಮ್ಮನೆ ಸ್ನಾನಮಾಡುತ್ತಲೇ ಇರುತ್ತಾನೆ. ಬೆಟ್ಟದ ತುದಿಗೆ ಹೊರಟುಹೋಗಿ ಸುಮ್ಮನೆ ಸ್ನಾನಮಾಡುತ್ತಲೇ ಇರುತ್ತಾನೆ. ಬೆಟ್ಟದತುದಿಗೆ ಹೊರಟುಹೋಗಿ ಅಲ್ಲೇ ಕುಳಿತುಬಿಡುತ್ತಾನೆ. ಯಾವುದಾದರೂ ಮನೆಯ ಮಹ

ದೇವಾನಾಂ ಪೂಜನಂ ತಸ್ಯ ಪುಷ್ಪಧೂಪಫಲಾಕ್ಷತೈಃ ।
ಗಂಧದೀಪಪ್ರದಾನೈಶ್ಚ ವಹ್ನಿಸಂತರ್ಪಣೈಸ್ತಥಾ ॥ ೩೧ ॥

ಗೋರಸೈಶ್ಚ ಸ ಶಾಲ್ಯನ್ನೈರ್ಬ್ರಾಹ್ಮಣೈಃ ಸ್ವಸ್ತಿವಾಚನೈಃ ।
ಕರ್ತವ್ಯಂ ವಿದುಷಾನಿತ್ಯಂ ತತಃ ಸಂಪದ್ಯತೇ ಸುಖೀ ॥ ೩೨ ॥

---

ಡಿಯ ಮೇಲಕ್ಕೆ ಹೋಗಿ ಅಲ್ಲಿಯೇ ಕುಳಿತುಬಿಡುವನು ಮತ್ತು ಯಾವಾಗಲೂ ನಾನು ಮಡಿ, ಮುಟ್ಟಬೇಡಿ ಎಂದು ಹೇಳುತ್ತಾ ಮಡಿಮಡಿಯೆಂದೇ ಹಾರಾಡುತ್ತಿರುತ್ತಾನೆ.

೩೧. ದೇವರ ಮುಂದೆ ಕೂತರೆ ಎಷ್ಟುಹೊತ್ತಾದರೂ ಕುಳಿತೇಬಿಡುತ್ತಾನೆ. ಪುಷ್ಪದೀಪಫಲಾಕ್ಷತೆಗಳಿಂದಲೂ, ಗಂಧದೀಪದಾನಗಳಿಂದಲೂ, ಹವನಹೋಮಗಳಿಂದಲೂ, ಬ್ರಾಹ್ಮಣಸಮಾರಾಧನೆಗಳಿಂದಲೂ ಸಹ ತೃಪ್ತಿಪಡುತ್ತಾ ಪುನಃಪುನಃ ಅದೇ ಕೆಲಸವನ್ನೇ ಮಾಡುತ್ತಲೇ ಇರುತ್ತಾನೆ. ಔಪಾಸನವೈಶ್ವದೇವಾದ್ಯಗ್ನಿಕರ್ಮಗಳನ್ನು ಹುಚ್ಚುಹುಚ್ಚಾಗಿ ಮಾಡತೊಡಗುತ್ತಾನೆ.

೩೨. ಮೇಲೆ ಹೇಳಿದ ಕೆಲಸಗಳು ಹೆಚ್ಚುತ್ತಾಬಂದಂತೆ ಆ ಗ್ರಹದ ಪೋಷಕರು ಅವನು ಏನೇನನ್ನು ಮಾಡುವನೋ ಅದರಂತೆ ಅವನ ಗ್ರಹದೋಷನಿವಾರಣೆಯಾಗುವುದಕ್ಕಾಗಿ ದೇವತಾಪ್ರೀತಿಯಾಗಲೆಂದು ಪೂಜೆಗಳನ್ನೂ, ಹವನಹೋಮಗಳನ್ನೂ, ಶಾಂತಿಕರ್ಮವದ್ನೂ ಮಾಡಿಸಿ ಹಾಲು, ತುಪ್ಪ, ಮೊಸರು, ಶಾಲ್ಯನ್ನ, ವಿವಿಧ ಭಕ್ಷ್ಯಭೋಜ್ಯಗಳಿಂದ ಕೂಡಿದ ಸಮಾರಾಧನೆಯನ್ನು ಬ್ರಾಹ್ಮಣರಿಗಾಗಿ ಮಾಡಿಸಬೇಕು. ಹಾಗೆ ಕೆಲವುದಿವಸ ಮಾಡಿಸಿದರೆ ಆ ದೇವಗ್ರಹವು ಬಿಡುಗಡೆಯಾಗಿ ಗ್ರಹಗೃಹೀತನು ಸುಖವನ್ನು ಹೊಂದುತ್ತಾನೆ

ಉಚ್ಛಿಷ್ಟಾನ್ಯೈರವಾನ್ರಾವಾನ್ವಿರಸಂ ಕುರುತೇಽಧಿಕಂ ।
ತಸ್ಮಿಂಸ್ತಥೋತ್ಸವಾನ್ಯಕ್ಷಾನ್ವ್ರತಾನಧ್ಯಯನಾನಿ ಚ ॥ ೩೩ ॥

ಬಹುಶೋ ವಟುಚಾಶ್ನಾತಿ ವಸ್ತ್ರಂ ಪಾಟಯತಿ ಸ್ವಕಂ ।
ಅಸುರಗ್ರಹದುಷ್ಟಸ್ಯ ರೂಪಮೇತನ್ನಿನಿರ್ದಿಶೇತ್ ॥ ೩೪ ॥

ದೈತ್ಯಸಂಪೂಜನಂ ತಸ್ಯ ಕಾರ್ಯಂ ಮಾಂಸಸುರಾಸವೈಃ ।
ರಕ್ತೈಃ ಪುಷ್ಪೈರ್ಧೂಪದೀಪೈಸ್ತಥಾ ಬೀಜಸಮುದ್ಭವೈಃ ॥ ೩೫ ॥

ಗಂಧರ್ವವಾದ್ಯನಿರ್ಘೋಷಂ ಶ್ರುತ್ವಾ ಹೃಷ್ಟಃ ಪ್ರನೃತ್ಯತಿ ।
ತೀರ್ಥೋದ್ಯಾನನದೀತೀರಗಂಧಮಾಲ್ಯಾದಿಸೇವನಾತ್ ॥ ೩೬ ॥

---

೩೩. ಮೇಲೆ ಹೇಳಿದುದು ದೇವಗ್ರಹಗಳ ಮಾತಾಯಿತು. ಇನ್ನು ರಾಕ್ಷಸ ಗ್ರಹಗಳ ಲಕ್ಷಣವನ್ನು ವಿವರಿಸುವೆನು. ಕೇಳೈ, ಶೈಲೂಷ! ಎಂಜಲನ್ನವನ್ನು ತಿನ್ನು ವುದು, ಭಯಂಕರವಾಗಿ ಕಿರಿಚಿಕೊಳ್ಳುವುದು, ಯಾವ ಕೆಲಸಕ್ಕೂ ವಿಘ್ನವನ್ನು ಮಾಡಿ ವಿರಸವನ್ನಾಗಿಮಾಡುವುದು, ಉತ್ಸವಮಾಡಬೇಕೆಂದು ಹೇಳುವುದು, ವ್ರತಮಾಡ ಬೇಕೆಂದು ಹೇಳುವುದು, ಅಧ್ಯಯನವನ್ನು (ಬ್ರಹ್ಮರಾಕ್ಷಸಗ್ರಹ) ಹೇಳುತ್ತಿರುವುದು.

೩೪. ವಿಪರೀತ ಊಟ ಮಾಡುತ್ತಲೇ ಇರುವುದು, ತಾನುಟ್ಟು ಹೊದೆದಿದ್ದ ಬಟ್ಟೆಗಳನ್ನು ಕಿತ್ತು ಪರಪರನೆ ಹರಿದುಬಿಡುವುದು, ಹೀಗೆಲ್ಲಾ ಮಾಡುವುದಕ್ಕಾರಂಭಿ ಸಿದರೆ ಅಂತಹವನಿಗೆ ರಾಕ್ಷಸಗ್ರಹ ಹಿಡಿದಿದೆಯೆಂದು ತಿಳಿದುಕೊಳ್ಳಬೇಕು.

೩೫. ಈ ಗ್ರಹವು ಬಿಡುಗಡೆಯಾಗಬೇಕಾದರೆ ದೈತ್ಯರಿಗೆ ಪ್ರೀತಿಯಾಗುವಂತೆ ಷೋಡಶೋಪಚಾರ ಪೂಜೆಮಾಡಿಸಿ ಮಾಂಸ, ಹೆಂಡ, ರಕ್ತಗಳನ್ನು ನೈವೇದ್ಯಮಾಡಿಸಿ ಕೆಂಪು ಹೂವುಗಳಿಂದಲೂ, ಕೆಂಪು ಧೂಪದೀಪಗಳಿಂದಲೂ ಅರ್ಚಿಸಬೇಕು.

೩೬-೩೭. ಇನ್ನು ಗಂಧರ್ವಗ್ರಹ ಗೃಹೀತನ ಲಕ್ಷಣವನ್ನೂ, ಆ ಗ್ರಹಚಿಕಿತ್ಸೆ ಯನ್ನೂ ಹೇಳುತ್ತೇನೆ. ಈ ಗ್ರಹವು ಗಂಧರ್ವವಾದ್ಯಗಳ ಧ್ವನಿಗಳನ್ನು ಕೇಳಿದರೆ ಆನಂದದಿಂದ ಕುಣಿಯಲಾರಂಭಿಸುತ್ತದೆ. ನದನದೀ-ಮುಂತಾದ ಜಲಾಶಯಗಳ ಬಳಿಯಲ್ಲಿ ಕುಳಿತು ಗಂಧಮಾಲ್ಯಾದಿಗಳನ್ನು ಸೇವಿಸುತ್ತಾ, ಮನಸ್ಸು ಬಂದಂತೆ ಇದು ತಿರುಗುತ್ತಲೇ ಇರುತ್ತದೆ. ಆದುದರಿಂದ ಈ ಗ್ರಹದ ಪ್ರೀತಿಗಾಗಿ, ಗಂಧರ್ವರ ಪ್ರೀತಿ

**ಯಥಾಕಾಮಂ ವಿಚರತಿ ಗಂಧರ್ವೋನ್ಮಾದಿತೋ ನರಃ**
**ಗಂಧೈರ್ಮಾಲ್ಯೈಶ್ಚ ವಿವಿಧೈರ್ಗೀತವಾದ್ಯೈಸ್ತಥೈವ ಚ** ॥ ೩೭ ॥

**ಗಂಧರ್ವಪೂಜನಂ ಕಾರ್ಯಂ ತೇನ ಸಂಪದ್ಯತೇ ಸುಖೀ ।**
**ನಿದ್ರಾಲುರ್ರಸೋ ದುಷ್ಟೋ ದರ್ಶಿವತ್ಕುರುತೇ ಕರೌ** ॥ ೩೮ ॥

**ಗರ್ಭವಾಸಗುಹಾಸೇವೀ ನರೋನ್ಮತ್ತಂ ವಿದುರ್ಬುಧಾಃ ।**
**ನಾಗಾನಾಂ ಪೂಜನಂ ತಸ್ಯ ಕಾರ್ಯಂ ಕುಲ್ಮಾಷಪರ್ಪಟೈಃ** ॥ ೩೯ ॥

**ಪಾಯಸೋಲ್ಲೋಪಿಕಾಪೂಪೈಃ ಪದ್ಮೋತ್ಪಲಬಿಸೈಸ್ತಥಾ ।**
**ಅಮತ್ಸರೀ ಮೃದುರ್ವೀರಃ ಪ್ರಿಯವಾಗ್ಬಹುಭೋಜನಃ** ॥ ೪೦ ॥

---

ಯಾಗಲೆಂದು ಗಂಧರ್ವರನ್ನು ಪೂಜಿಸಿ, ತನ್ಮೂಲಕವಾಗಿ ಗಂಧರ್ವರಿಗೋಸ್ಕರ ಹೂವು ಗಂಧಗಳನ್ನು ಸಮರ್ಪಿಸಿ, ಸಂಗೀತಗಾರರನ್ನು ಕರೆಯಿಸಿ ಉತ್ತಮವಾದ ಗಾನಾಲಾಪನೆಗಳಿಂದಲೂ, ವಾದ್ಯಧ್ವನಿಗಳಿಂದಲೂ ಗಂಧರ್ವ ಪ್ರೀತಿಗೋಸ್ಕರ ಮಾಡಿಸಬೇಕು. ಈ ಕ್ರಮದಿಂದ ಗಂಧರ್ವರಲ್ಲಿ ಭಕ್ತಿಯನ್ನಿಟ್ಟು ಪೂಜೆಮಾಡಿಸಿದರೆ, ಆ ಗ್ರಹವು ಬಿಡುಗಡೆಯಾಗಿ ಆ ಮನುಷ್ಯನು ಸುಖವಾಗಿ ಬದುಕುವನು.

೩೮. ಇನ್ನು ಉನ್ಮಾದ (ಹುಚ್ಚು) ಗ್ರಹದ ಲಕ್ಷಣವನ್ನೂ ಅದರ ಚಿಕಿತ್ಸೆಯನ್ನೂ ಹೇಳುತ್ತೇನೆ, ಕೇಳು. ಯಾವಾಗಲೂ ನಿದ್ದೆಮಾಡುತ್ತಲೇ ಇರುವುದು, ಮಂಕಾಗಿ ಕುಳಿತಿರುವುದು, ಬಹು ಕೆಟ್ಟ ನಡತೆಯಿಂದ ಕೂಡಿರುವುದು, ಎರಡು ಕೈಗಳನ್ನೂ ಚಾಚಿ ಸೌಟಿನಂತೆ ನಿಲ್ಲಿಸುವುದು.

೩೯. ನರಕದ್ವಾರ (ಯೋನಿ) ಲಾಭಕ್ಕಾಗಿ ತಲ್ಲಣಿಸುತ್ತಿರುವುದು, ಇದಕ್ಕಾಗಿ ದಿಗಂಬರನಾಗಿ ನಿಲ್ಲುವುದು, ಅದಕ್ಕೆ ತಕ್ಕ ಹುಚ್ಚು ಚೇಷ್ಟೆಗಳನ್ನು ಮಾಡುತ್ತಿದ್ದರೆ ಅದು ಉನ್ಮತ್ತ (ಹುಚ್ಚು) ಗ್ರಹವೆಂದೂಹಿಸಿ ಅದರ ಪರಿಹಾರಕ್ಕಾಗಿ ಆನೆಗಳನ್ನು ಪೂಜಿಸಿ, ಹಲಸಂದೆ ಹಪ್ಪಳವನ್ನು ಮಾಡಿ ಅದಕ್ಕೆ ತಿನ್ನಿಸಬೇಕು.

೪೦. ಮತ್ತು ಒಡೆಯನ್ನೂ, ಪಾಯಸವನ್ನೂ, ಕಮಲದಳದ ದಂಟನ್ನೂ ಅದಕ್ಕೆ ನಿವೇದನಮಾಡಿ ಪೂಜಿಸಿದರೆ ಆ ಗ್ರಹವು ಬಿಟ್ಟುಹೋಗುತ್ತದೆ. ಇನ್ನು ಭೂತೋನ್ಮಾದ ಗ್ರಹದ ಲಕ್ಷಣವನ್ನು ಹೇಳುತ್ತೇನೆ, ಕೇಳು. ನಿರ್ಮಾತ್ಸರ್ಯದಿಂದಿರು

**ಪೃಥುನಿಷ್ಫಲತಾನೃಾಕ್ಷಃ ತಥಾ ನೈ ಗೋರಸಪ್ರಿಯಃ ।**
**ಭೂತೋನ್ಮಾದಸಮಾವಿಷ್ಟೋ ಲಿಂಗೈರೇತೈರ್ವಿನಿರ್ದಿಶೇತ್ ॥ ೪೧ ॥**

**ಕುಸುಮೈರ್ಬಹುವರ್ಣೈಶ್ಚ ಗೋರಸೈರ್ವಿವಿಧೈಸ್ತಥಾ ।**
**ಭೂತ ಪೂಜಾ ತು ಕರ್ತವ್ಯಾ ತೇನ ಸಂಪದ್ಯತೇ ಸುಖೀ ॥ ೪೨ ॥**

**ಶೂನ್ಯಾಗಾರಶ್ಮಶಾನಾದಿಚತುಷ್ಪಥನಿಷೇವಕಃ ।**
**ರಾತ್ರೌ ಚರತಿ ಯೋಚ್ಛಿಷ್ಟಃ ಪಿಶಾಚೋನ್ಮಾದಿತೋ ನರಃ ॥ ೪೩ ॥**

**ಪಿಶಾಚಯಜನಂ ತಸ್ಯ ಕರ್ತವ್ಯಂ ಪಲಲಾಮಿಷೈಃ ।**
**ಕಂಟಕೀಸಂಭವೈಃ ಪುಷ್ಪೈಃ ಕೃಷ್ಣವರ್ಣೈಸ್ತಥೈವ ಚ ॥ ೪೪ ॥**

---

ವಂತೆ ಕಾಣಿಸಿಕೊಳ್ಳುವುದು. ಬಹಳ ಮೃದುಸ್ವಭಾವದವನಾಗಿಯೂ, ಆ ಕೂಡಲೇ ಬಹು ಪರಾಕ್ರಮಶಾಲಿಯಂತೆಯೂ, ಕೆಲವು ವೇಳೆ ಸುಮ್ಮನೆ ಮಾತನಾಡುತ್ತಲೂ, ವಿಪರೀತ ಊಟಮಾಡುತ್ತಲೂ,

೪೧. ಕಣ್ಣನ್ನು ದಪ್ಪನಾಗಿ ಮಾಡಿಕೊಂಡು ಕೆಂಪಾದ ಆ ಕಣ್ಣುಗಳಿಂದ ಕ್ರೂರವಾಗಿ ನೋಡುತ್ತಲೂ, ಹಾಲು, ತುಪ್ಪ, ಮೊಸರುಗಳನ್ನಪೇಕ್ಷಿಸುತ್ತಲೂ ಇದ್ದರೆ, ಈ ಲಕ್ಷಣಗಳಿಂದ ಇದು ಭೂತಗ್ರಹವೆಂದು ಕಂಡುಹಿಡಿದುಕೊಳ್ಳಬೇಕು.

೪೨. ಇದರ ಚಿಕಿತ್ಸಾರೂಪವಾಗಿ ಬಣ್ಣಬಣ್ಣದ ರಂಗೋಲಿಗಳಿಂದ ಭೂಮಿಯ ಮೇಲೆ ಭೂತವನ್ನು ಬರೆದು ಬಣ್ಣಬಣ್ಣದ ಹೂವುಗಳನ್ನು ತಂದು ಅದಕ್ಕೆ ಪೂಜೆ ಮಾಡಿ, ಹಾಲು, ಮೊಸರು, ತುಪ್ಪಗಳನ್ನು ಭೂತತೃಪ್ತಿಗಾಗಿ ಸುರಿದು ನೈವೇದ್ಯಮಾಡಿದರೆ ಭೂತಗ್ರಹವು ಬಿಟ್ಟೋಡುವುದು.

೪೩. ಇನ್ನು ಪಿಶಾಚಗ್ರಹದ ಲಕ್ಷಣವನ್ನು ವಿವರಿಸುತ್ತೇನೆ, ಕೇಳು. ಯಾರೂ ವಾಸವಿಲ್ಲದೆ ಬೀಗಹಾಕಿರುವ ಮನೆಗಳಲ್ಲಿಯೂ, ಸ್ಮಶಾನಗಳಲ್ಲಿಯೂ, ಬೆಟ್ಟಗಳಲ್ಲಿಯೂ, ನಾಲ್ಕು ದಾರಿ ಕೂಡುವ ಚೌಕಗಳಲ್ಲಿಯೂ, ರಾತ್ರಿವೇಳೆಗಳಲ್ಲಿಯೂ ಈ ಪಿಶಾಚಗ್ರಹವು ಹಿಡಿದ ಮನುಷ್ಯನು ಹುಚ್ಚು ಹುಚ್ಚಾಗಿ ಅಲೆಯುತ್ತಿರುತ್ತಾನೆ.

೪೪. ಈ ಪಿಶಾಚಗ್ರಹದ ಪ್ರೀತಿಗಾಗಿ ಮುಳ್ಳುಗಿಡಗಳಲ್ಲಿ ಬಿಡುವ ಕಪ್ಪು ಹೂವುಗಳನ್ನು ತಂದು ಪೂಜೆಮಾಡಿಸಿ, ಮಾಂಸ ಕಲಸಿದ ಅನ್ನ (ಅಥವಾ ಕುಂಕುಮ

**ಅವ್ಯಕ್ತಭಾಷೀ ರಕ್ತಾಕ್ಷೋ ಹಾಸ್ಯೇ ಚೋಚ್ಚಸ್ವರಸ್ತಥಾ ।**
**ರೌದ್ರಂ ನಿರೀಕ್ಷತೇಽತ್ಯರ್ಥಂ ಯಕ್ಷೇಣೋನ್ಮಾದಿತೋ ನರಃ ॥ ೪೫ ॥**

**ಕುಲ್ಮಾಷಘೃತಪಿಣ್ಯಾಕಪಲಲೋಲ್ಲೋಪಿಕಾಗುಡೈಃ ।**
**ಯಕ್ಷಾಣಾಂ ಪೂಜನಂ ತಸ್ಯ ಕರ್ತ್ತವ್ಯಂ ದೋಷಶಾಂತಯೇ ॥ ೪೬ ॥**

**ಉದ್ವಿಗ್ನಚೇತಾಃ ಶೀತಶ್ಚ ನಾತಿಶೋಕಪರಾಯಣಃ ।**
**ರಾಕ್ಷಸೇನ ಗೃಹೀತಶ್ಚ ಭವತ್ಯೋಷ್ಠವಿಲೇಹಕಃ ॥ ೪೭ ॥**

**ಪಕ್ವಾಮಿಷೇಣ ಮಾಂಸೇನ ರುಧಿರೇಣ ತಥೈವ ಚ ।**
**ರಾಕ್ಷಸಾನಾಂ ಬಲಿಃ ಕಾರ್ಯಸ್ತಸ್ಯ ದೋಷಪ್ರಶಾಂತಯೇ ॥ ೪೮ ॥**

---

ದಿಂದ ಕಲಿಸಿದ ಅನ್ನ) ವನ್ನು ನೀವಾಳಿಸಿ ನಾಲ್ಕು ದಾರಿ ಕೂಡುವ ಚೌಕಗಳಲ್ಲಿಟ್ಟರೆ ಆ ಗ್ರಹವು ಅದನ್ನು ಸ್ವೀಕರಿಸಿ ಅವನನ್ನು ಬಿಟ್ಟು ಹೊರಟುಹೋಗುವುವು.

೪೫. ಈಗ ಯಕ್ಷಗ್ರಹ ಲಕ್ಷಣವನ್ನು ಲಕ್ಷ್ಯವಿಟ್ಟು ಕೇಳಯ್ಯಾ! ಯಕ್ಷ ಗಂಧರ್ವರಾಜ! ಒಬ್ಬರಿಗೂ ತಿಳಿಯದ ಹಾಗೆ ಅಸ್ಪಷ್ಟವಾಗಿ ಮಾತನಾಡುವುದು, ಕಣ್ಣನ್ನು ಕೆಂಪಗೆ ಮಾಡಿಕೊಂಡಿರುವುದು, ಎಲ್ಲರನ್ನೂ ಅಣಕಿಸುವುದು, ಘಟ್ಟಿಯಾಗಿ ಕೂಗಿಕೊಳ್ಳುವುದು, ಭಯಂಕರವಾದ ನೋಟದಿಂದ ನೋಡುವುದು, ಇವೇ ಆ ಗ್ರಹದ ಲಕ್ಷಣವು.

೪೬. ಇದರ ಪ್ರೀತಿಗಾಗಿ ಹಲಸಂದೆ ಹಿಟ್ಟು, ತುಪ್ಪ, ಬೆಲ್ಲ, ಮಾಂಸಗಳನ್ನು ಕಲಸಿ ಉಂಡೆಮಾಡಿ ಯಕ್ಷಗ್ರಹಕ್ಕೆ ಪೂಜೆಮಾಡಿ ನೈವೇದ್ಯಮಾಡಿದರೆ ಗ್ರಹದೋಷವು ಪರಿಹಾರವಾಗಿ ಮನುಷ್ಯನು ಕ್ಷೇಮವನ್ನು ಹೊಂದುವನು.

೪೭. ಇನ್ನು ರಾಕ್ಷಸಗ್ರಹಪೀಡಿತನ ಲಕ್ಷಣವನ್ನು ತಿಳಿಸುತ್ತೇನೆ, ಕೇಳು. ಯಾವಾಗಲೂ ಉದ್ವೇಗ (ಬಹು ಚಿಂತೆ) ವುಳ್ಳ ಮನಸ್ಸಿನಿಂದ ಕೂಡಿರುವುದು, ತಣ್ಣ (ಸುಮ್ಮ) ಗಿರುವುದು, ಹೊರಗೆ ಹೆಚ್ಚಾದ ದುಃಖವಿಲ್ಲದಂತೆ ಕಾಣಿಸಿಕೊಳ್ಳುವುದು, ಯಾವಾಗಲೂ ನಾಲಿಗೆಯಿಂದ ತುಟಿಯನ್ನು ಸವರಿ (ನೆಕ್ಕಿ) ಕೊಳ್ಳುತ್ತಿರುವುದೇ ರಾಕ್ಷಸಗ್ರಹ ಲಕ್ಷಣವು.

೪೮. ಇದರ ದೋಷವು ಪರಿಹಾರವಾಗಬೇಕಾದರೆ ಬೇಯಿಸಿದ ಮಾಂಸ, ರಕ್ತಗಳನ್ನು ರಾಕ್ಷಸರಿಗೆ ಬಲಿಕೊಟ್ಟರೆ ಆ ಗ್ರಹವು ಪಲಾಯನವಾಗುವುದು.

**ಭಸ್ಮಪಾಂಸುರಜೋಧ್ವಸ್ತೋ ಮಲಿನೋ ಮಲಿನಾಂಬರಃ ।**
**ಪ್ರೇತಗೃಹೀತೋ ಭವತಿ ವಿಕೃತೋ ಧ್ವಸ್ತಮಸ್ತಕಃ ॥ ೪೯ ॥**

**ಓದನಂ ಮಧುಪಾನೀಯಂ ಸರ್ಪಿಃ ಕ್ಷೀರಸಮನ್ವಿತಂ ॥ ೫೦ ॥**

**ಪ್ರೇತಾನಾಂ ತತ್ರ ದಾತವ್ಯಂ ತೇನ ಸಂಪದ್ಯತೇ ಸುಖೀ ।**
**ಶುಚಿಃ ಶುಚಿಸಮಾಚಾರಃ ಸಂಧ್ಯಾಚಾರೀ ತಿಲಪ್ರಿಯಃ ॥ ೫೧ ॥**

**ಪಿತೃಗ್ರಹಗೃಹೀತಸ್ಯ ರೂಪಮೇತದ್ವಿನಿರ್ದಿಶೇತ್ ।**
**ತಿಲಗೋರಸಪುಷ್ಪಾನ್ನಮಧುಮೂಲಫಲೈಃ ಶುಭೈಃ ॥ ೫೨ ॥**

**ದೀಪೈರ್ದಾನೈಸ್ತಥಾ ನಿತ್ಯಂ ಪ್ರಣಿಪಾತೇನ ಚಾಜ್ಞಯಾ ।**
**ಪಿತೄಣಾಂ ಪೂಜನಂ ತಸ್ಯ ಕರ್ತವ್ಯಂ ದೋಷಶಾಂತಯೇ ॥ ೫೩ ॥**

---

೪೯. ಇನ್ನು ಪ್ರೇತಗ್ರಹದ ಸಮಾಚಾರವೇನೆಂದರೆ :—ಬೂದಿಯಲ್ಲೂ ಧೂಳಿನಲ್ಲೂ ಬಿದ್ದು ಬಿದ್ದು ಹೊರಳುವುದು, ಕೊಳಕು ಕೊಳಕಾದ ಬಟ್ಟೆಯನ್ನೇ ಉಟ್ಟಿರುವುದು, ವಿಕಾರರೂಪ, ಕತ್ತುಕತ್ತರಿಸಿಕೊಳ್ಳುವುದು, ಇಂತಹ ಕೊಳಕು ಮನುಷ್ಯನಿಗೆ ಪ್ರೇತಗ್ರಹ ಹಿಡಿದಿದೆಯೆಂದು ತಿಳಿದುಕೊಳ್ಳಬೇಕು.

೫೦-೫೧. ಇದಕ್ಕೆ ಪ್ರೀತಿಯಾಗಬೇಕಾದರೆ ಅನ್ನ, ಪಾನಕ, ತುಪ್ಪ, ಹಾಲುಗಳನ್ನುದ್ದೇಶಿಸಿ ಕೊಡಬೇಕು. ಹೀಗೆ ಮಾಡಿದರೆ ಪ್ರೇತಗ್ರಹಗಳು ಓಡಿಯೋಡಿ ಹೋಗುವುವು

೫೨-೫೩. ಇನ್ನು ಪಿತೃಗ್ರಹದ ಲಕ್ಷಣವನ್ನು ವಿವರಿಸುತ್ತೇನೆ, ಕೇಳು. ಈ ಗ್ರಹ ಹಿಡಿದ ಕಾಲದಲ್ಲಿ ಅವನ ಪೂರ್ವಿಕರ ರೂಪದಂತೆ ಅವನು ಕಾಣಿಸಿಕೊಳ್ಳುತ್ತಾನಾದ್ದರಿಂದ, ಈ ಗ್ರಹ ಪ್ರೀತಿಗಾಗಿ ಪಿತೃಗಳನ್ನು ತಿಲತರ್ಪಣಗಳಿಂದ ಆವಾಹನೆಮಾಡಿ ಹೂವು, ಹಣ್ಣು, ಹಾಲು, ತುಪ್ಪ, ಮೊಸರು, ಎಳ್ಳು, ಧೂಪ, ದೀಪಗಳ ದಾನ, ಬ್ರಾಹ್ಮಣ ಭೋಜನ, ನಮಸ್ಕಾರ, ಆಜ್ಞಾಪಾಲನಾದಿಗಳಿಂದ ಪಿತೃಗಳನ್ನರ್ಚಿಸಿದರೆ ಆ ಪಿತೃಗ್ರಹವು ಬಿಟ್ಟು ಹೋಗುವುದು.

ಅಧೀತೇ ಜಪತೇ ಚೈವ ಶುಚಿಸ್ತಿಷ್ಠತಿ ಚಾಪ್ಯಥ ।
ಯೋಗಾಸಕ್ತಸ್ತಥಾರ್ಷೇಣ ಗೃಹೀತೋ ಮಾನವೋ ಭವೇತ್ ॥ ೫೪ ॥

ಹವಿರ್ಗೋರಸಪುಷ್ಪಾದ್ಯೈಸ್ತಥಾಽಧ್ಯಯನಸಂಸ್ತವೈಃ ।
ಋಷೀಣಾಂ ಪೂಜನಂ ಕಾರ್ಯಂ ತಸ್ಯ ದೋಷಪ್ರಶಾಂತಯೇ ॥ ೫೫ ॥

ಕರ್ಮಪ್ರಸಕ್ತೋ ಭವತಿ ನ ನಿದ್ರಾಂ ಭಜತೇ ದಿವಾ ।
ಪೌರುಷೇಣ ಗೃಹೀತಸ್ಯ ಲಕ್ಷಣಂ ಸಮುದಾಹೃತಂ ॥ ೫೬ ॥

ಬ್ರಾಹ್ಮಣಾನ್ಭೋಜಯೇತ್ತತ್ರ ಮಿಷ್ಟಮನ್ನಂ ಸುಸಂಸ್ಕೃತಂ ।
ಗಂಧಮಾಲ್ಯೋಜ್ಜ್ವಲಾನ್ರಾಜಂಸ್ತಸ್ಯ ದೋಷಪ್ರಶಾಂತಯೇ ॥ ೫೭ ॥

---

೫೪-೫೫. ಇನ್ನು ಮುಂದೆ ಋಷಿಗ್ರಹ ಲಕ್ಷಣವನ್ನು ವಿವರಿಸುತ್ತೇನೆ. ಈ ಗ್ರಹ ಹಿಡಿದ ಮನುಷ್ಯನು ಋಷಿಚರ್ಯೆಯಿಂದಲೇ ಇರುತ್ತಾನೆ ಆದರೆ ಆ ಚರ್ಯೆಯನ್ನು ಹುಚ್ಚು ಹುಚ್ಚಾಗಿ ಮಾಡುತ್ತಿರುತ್ತಾನೆ. ಅಂದರೆ ಸಂಧ್ಯಾವಂದನೆಗೆ ಆರಂಭಿಸಿದರೆ ಅದನ್ನೇ ಎಷ್ಟು ಹೊತ್ತಾದರೂ ಮಾಡುತ್ತಲೇ ಇರುವುದು, ಅಗ್ನಿಕಾರ್ಯ, ತರ್ಪಣ, ಜಪ, ಸ್ತೋತ್ರ, ಮಡಿ, ಹೋಮ, ಅಧ್ಯಯನಗಳ ವಿಷಯದಲ್ಲೂ ಅತಿವಿಪರೀತವಾಗಿ ನಡೆದುಕೊಳ್ಳುವುದು. ಇದರ ನಿವಾರಣೆಗೋಸ್ಕರ ಋಷಿಗಳನ್ನು ಪೂಜಿಸಿ, ಷೋಡಶೋಪಚಾರ ಪೂಜಾನಂತರ ಹವಿಷ್ಯಾನ್ನವನ್ನು ನಿವೇದಿಸಿ, ಅಧ್ಯಯನದಿಂದಲೂ ಸ್ತೋತ್ರಗಳಿಂದಲೂ ಋಷಿಗಳನ್ನಾರಾಧಿಸಿದರೆ ಆ ಋಷಿಗ್ರಹದ ಹುಚ್ಚು ಹೊರಟು ಹೋಗುವುದು.

೫೬-೫೭. ಇನ್ನು ಪುರುಷಗ್ರಹ ಲಕ್ಷಣವೇನೆಂದರೆ:—ಕರ್ಮಮಾಡುವುದರಲ್ಲಿ ನಿರತನಾಗಿರುವುದು, ಹಗಲು ನಿದ್ರೆಮಾಡದಿರುವುದು, (ಅಂದರೆ ವಿಪರೀತಾರ್ಥದಲ್ಲಿ ಪ್ರಯೋಗವೆಂದು ತಿಳಿಯಬೇಕು.) ಇದೇ ಪುರುಷಗ್ರಹ ಲಕ್ಷಣವು. ಇದಕ್ಕೆ ಹೆಚ್ಚಿಗೆ ಚಿಕಿತ್ಸೆಯೇನೂ ಬೇಕಿಲ್ಲ. ಒಳ್ಳೇ ರುಚಿಕರವಾದ ಅಡಿಗೆಯನ್ನು ಮಾಡಿಸಿ, ಬ್ರಾಹ್ಮಣರನ್ನು ಕರೆದು ಆ ಮೃಷ್ಟಾನ್ನದಿಂದ ಅವರನ್ನು ತೃಪ್ತಿಪಡಿಸಿ, ಅವರಿಗೆ ಹೂವು, ಗಂಧ, ಎಲೆಯಡಿಕೆ, ದಕ್ಷಿಣೆಗಳನ್ನು ಕೊಟ್ಟರೆ ಸಾಕು. ಆ ಗ್ರಹವು ಮಾಯವಾಗುವುದು.

ಸ್ಕಂದಗ್ರಹಗೃಹೀತಾನಾಂ ಬಾಲಾನಾಂ ಶೃಣು ಲಕ್ಷಣಂ ।
ರೋದಿತಿ ಸ್ತನತಿ ಧ್ಯಾತಿ ಭೂಮೌ ಸ್ವಪಿತಿ ಚಾಸಕೃತ್ ॥ ೫೭ ॥

ಅಸಂಬದ್ಧಪ್ರಲಾಪೀ ವಾ ಜ್ಞೇಯಃ ಸ್ಕಂದಗ್ರಹಾರ್ದಿತಃ ।
ರಕ್ತೈಃ ಪುಷ್ಪೈಃ ಫಲೈರ್ಮಾಲ್ಯೈಃ ಬಾಲಕ್ರೀಡನಕೈಸ್ತಥಾ ॥ ೫೮ ॥

ಘಂಟಾ ಚ ಕುಕ್ಕುಟೈಃ ಪೂಜಾ ಬಲಿನಾ ವಿವಿಧೇನ ಚ ।
ಪತಾಕಾಭಿಶ್ಚ ಕರ್ತವ್ಯಾ ಕುಮಾರಸ್ಯ ಮಹಾತ್ಮನಃ ॥ ೫೯ ॥

ಅತಃ ಪರಂ ಲೋಕಹಿತಂ ತವಾದ್ಯ
ಸರ್ವಗ್ರಹಘ್ನಾನ್ನಿಪುಣಾನ್ಪ್ರಯೋಗಾನ್ ।

---

೫೭. ಇವಿಷ್ಟು ಮೇಲೆ ಹೇಳಿದ ಗ್ರಹಗಳೆಲ್ಲವೂ ದೊಡ್ಡವರನ್ನೂ ಸಹ ಹಿಡಿದು ಬಿಡತಕ್ಕ ಶಕ್ತಿಯನ್ನು ಹೊಂದಿರುತ್ತವೆ. ಮುಂದೆ ಮಕ್ಕಳನ್ನೂ, ಬಾಲಕರನ್ನೂ ಹಿಡಿದು ಪೀಡಿಸುವ ಸ್ಕಂದಗ್ರಹಗಳ ಸಂಗತಿಯನ್ನು ಸ್ವಲ್ಪ ಹೇಳುತ್ತೇನೆ ಅದನ್ನು ಕೇಳು—ಮಗು (ಬಾಲಕನು) ಸುಮ್ಮನೆ ಯಾವಾಗಲೂ ಅಳುತ್ತದೆ, ಕಿರಿಚಿಕೊಳ್ಳುತ್ತದೆ. ಬೆಚ್ಚಿಬೀಳುತ್ತದೆ, ಮುಖ ಅಡಿಯಾಗಿ ಮಲಗಿಬಿಡುತ್ತದೆ.

೫೮. ಅಸಂಬದ್ಧ ಪ್ರಲಾಪ (ಹುಚ್ಚು ಹುಚ್ಚು ಮಾತು) ಮಾಡುತ್ತದೆ, ಇವೆಲ್ಲವೂ ಸ್ಕಂದಗ್ರಹದ ಲಕ್ಷಣವೆಂದು ತಿಳಿದುಕೊಂಡು, ಅವುಗಳ ಮುಂದೆ ಕೆಂಪು ಹೂವುಗಳನ್ನು ತಂದಿಡಬೇಕು. ಹಣ್ಣು, ಗೆಡ್ಡೆಗೆಣಸು. ಆಟದ ಸಾಮಾನುಗಳನ್ನು ತಂದು ಅವುಗಳಿಗೆ ಕೊಡಬೇಕು.

೬೦. ಅವುಗಳ ಮುಂದೆ ಘಂಟೆ ಬಾರಿಸುತ್ತಾ ಇರಬೇಕು. ಇವರ ಬಿಡುಗಡೆಗಾಗಿ ಕೋಳೀಮರಿಯನ್ನು ಬಲಿಕೊಡಬೇಕು. ಮಹಾತ್ಮನಾದ ಕುಮಾರಸ್ವಾಮಿಯನ್ನು ಪ್ರಾರ್ಥಿಸಿ, ಆ ಸ್ವಾಮಿಯನ್ನು ವಿವಿಧೋಪಚಾರಗಳಿಂದ ಪೂಜಿಸಿ ಸ್ತೋತ್ರ ಮಾಡಬೇಕು. ಹೀಗಾದರೆ ಬಾಲಗ್ರಹವು ಬಿಟ್ಟೋಡುವುದು.

೬೧. ಶೈಲೂಷನನ್ನು ಕುರಿತು ನಾಡಾಯನರು ಹೇಳುತ್ತಾರೆ:—ಕೇಳಯ್ಯಾ ಶೈಲೂಷ! ಇದುವರೆಗೆ ಎಷ್ಟೋ ವಿಧ ಗ್ರಹಗಳ ಲಕ್ಷಣಗಳನ್ನೆಲ್ಲಾ ನೀನು ಕೇಳಿದೆಯಷ್ಟೆ? ಇನ್ನು ಮುಂದೆ ನಾನು ನಿನಗೆ ಲೋಕಹಿತಾರ್ಥವಾಗಿಯೂ, ಸರ್ವಗ್ರಹ ಪೀಡಾಪರಿಹಾರಕವಾಗಿಯೂ ಇರುವ ಪ್ರಯೋಗಗಳ (ಬಿಡುಗಡೆಯ ಉಪಾಯವ)

**ವಕ್ಷ್ಯಾಮಿ ಯೇಷಾಂ ಹಿ ನಿಷೇವಣೇನ**
**ಗ್ರಹೈರ್ವಿಮುಚ್ಯಂತಿ ನರಾ ನರೇಂದ್ರ** ॥ ೬೦ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಶೈಲೂಷಂ ಪ್ರತಿ ನಾಡಾಯನ ವಾಕ್ಯೇ**
**ಗ್ರಹಲಿಂಗಾನಿ ನಾಮೈಕ ತ್ರಿಂಶತ್ಯುತ್ತರ**
**ದ್ವಿಶತತಮೋಽಧ್ಯಾಯಃ.**

---

ನ್ನು ತಿಳಿಸುತ್ತೇನೆ. ನಾನು ಮುಂದೆ ಹೇಳುವ ಮೇರೆ ಪ್ರಯೋಗಮಾಡಿದರೆ ಎಲ್ಲಾ ವಿಧವಾದ ಗ್ರಹಗಳೂ ಸಹ ಮನುಷ್ಯರ ತಂಟೆಗೇ ಬರದೆ, ಅವರನ್ನು ಬಿಟ್ಟು ಹೋಗುವುವಲ್ಲದೆ ಅವರಿಗೆಲ್ಲಾ ದೀರ್ಘಾಯುರಾರೋಗ್ಯಭಾಗ್ಯಗಳನ್ನು ಕೊಡುತ್ತವೆ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಗ್ರಹಲಕ್ಷಣಗಳೆಂಬ ಹೆಸರಿನ
ಇನ್ನೂರ ಮೂವತ್ತೊಂದನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ದ್ವಾತ್ರಿಂಶದ್ಯುತ್ತರ ದ್ವಿಶತತಮೋಽಧ್ಯಾಯಃ ॥

---

॥ ನಾಡಾಯನ ಉವಾಚ ॥

**ಅಭ್ಯಂಗೋತ್ಸಾದನಂ ಸ್ನಾನಂ ಧೂಪೋ ರಕ್ಷಾ ಬಲಿರ್ಘೃತಂ ।**
**ನೇತ್ರಾಂಜನಂ ಪ್ರಧವನಂ ನವಗ್ರಹಹರಾಃ ಕ್ರಿಯಾಃ ॥ ೧ ॥**

**ಸರ್ಪಗಂಧಾ ವಚಾ ಕುಷ್ಠಮುಸ್ತಾಕ್ಷೇಪಣಚಂದನೈಃ ।**
**ಸಕ್ಷೀರಮೂತ್ರೈರ್ವಿಪಚೇತ್ತೈಲಂ ಸರ್ವಗ್ರಹಾಪಹಂ ॥ ೨ ॥**

---

### ಇನ್ನೂರಮೂವತ್ತೆರಡನೆಯ ಅಧ್ಯಾಯವು.

೧. ನಾಡಾಯನರು ಶೈಲೂಷನನ್ನು ಕುರಿತು ಗ್ರಹಚಿಕಿತ್ಸಾಧ್ಯಾಯವನ್ನು ಉಪದೇಶಿಸಿದ ಬಗೆಯೆಂತೆಂದೊಡೆ:—

ಗ್ರಹದೋಷವು ಪರಿಹಾರವಾಗಬೇಕಾದರೆ ಒಂಭತ್ತು ವಿಧಕ್ರಮಗಳನ್ನು ಕೈಗೊಳ್ಳಬೇಕು. ಅವಾವುವೆಂದರೆ:—ಸ್ನಾನ, ಲೇಪನ, ಅಭ್ಯಂಗ, ಧೂಪ, ರಕ್ಷೆ, ಬಲಿ, ಘೃತ, ನೇತ್ರಾಂಜನ, (ಕಣ್ಣು ಕಪ್ಪು,) ಪ್ರಧಾವನ, ಇವುಗಳೇ ಆ ಕ್ರಿಯಾಕರ್ಮಗಳು.

೨. ಪುನಗು, ಬಜೆ, ಚಂಗಲಕೋಷ್ಟ, ಮುಸ್ತೆ (ತುಂಗಮುಸ್ತೇ ಬೇರು) ಇವುಗಳನ್ನು ಗಂಧ ತೇದುಕೊಂಡು ಹಾಲು ಗಂಜಲಗಳಿಗೆ ಬೆರೆಸಿ ಚೆನ್ನಾಗಿ ಕಾಯಿಸಿ ಕುದಿಸಿ ತೈಲಮಾಡಿಕೊಂಡು ಮೈಗೆಲ್ಲಾ ಸವರಿಕೊಂಡು ಅಭ್ಯಂಗಸ್ನಾನಮಾಡಿದರೆ, ಸರ್ವಗ್ರಹಗಳೂ ಓಡುವುವು.

ಬಿಲ್ವಮಧ್ಯಂ ಬ್ರಹ್ಮದತ್ತಗವಾಕ್ಷೀಬೃಹತೀಫಲಂ ।
ಉತ್ಸಾದನಮಿದಂ ಶ್ರೇಷ್ಠಂ ಶ್ಲಕ್ಷ್ಣಪಿಷ್ಟಂ ಜಲೇನ ತು ॥ ೩ ॥

ಉಶೀರಕುಷ್ಠಮಂಜಿಷ್ಠಾದೇವದಾರುಮನಃಶಿಲಾಃ ।
ಶ್ರೀವೇಷ್ಟಕಸ್ತಥಾ ಕೌಂತೀ ಹರಿತಾಲೈಲವಾಲುಕೇ ॥ ೪ ॥

ಏತಚ್ಚೂರ್ಣೀಕೃತಂ ಸರ್ವಂ ಪಂಚಗವ್ಯಾಂಶಮಿಶ್ರಿತಂ ।
ಸರ್ವಗ್ರಹಪ್ರಶಮನಂ ಸ್ನಾನಮಾಯುಷ್ಯಮುತ್ತಮಂ ॥ ೫ ॥

ಸರ್ಷಪಾಶ್ಚ ಖುರಂ ಕುಷ್ಠಂ ಘೃತಂ ಭಲ್ಲಾತಕಂ ವಚಾ ।
ಪೂತೀಕಮಜನೋದಾ ಚ ಧೂಪಃ ಸರ್ವಗ್ರಹಾಪಹಃ ॥ ೬ ॥

ಶಸ್ತ್ರಂ ವಾ ರೋಚನಂ ಶಸ್ತಂ ಸುವರ್ಣಂ ಮಣಿಮೌಕ್ತಿಕಂ ।
ವಿಷಂ ಸವತ್ಸಾಂ ಧೇನುಂ ಚ ಮತ್ತಂ ಛಾಗಂ ತಥೈವ ಚ ॥ ೭ ॥

---

೩. ಬಿಲ್ವಪತ್ರೆ ಹಣ್ಣಿನ ತಿರುಳು, ಗಿರಿಕರ್ಣಿಕೆ ಬೇರು, ರಾಮಗುಳ್ಳದ ಹಣ್ಣು (ಗುಳ್ಳ) ಗಳನ್ನು ಸೇರಿಸಿ ಅರೆದು ಮೈಗೆ ಲೇಪಿಸಿಕೊಂಡು ಸ್ನಾನಮಾಡಿದರೆ ಉತ್ಸಾದನ ವೆನಿಸಿಕೊಳ್ಳುತ್ತದೆ. ಇದರಿಂದಲೂ ಗ್ರಹದೋಷವು ಪರಿಹಾರವಾಗುವುದು.

೪-೫. ಲಾಮಂಚ, ಚಂಗಲಕೋಷ್ಟ, ಮಂಜಿಷ್ಠೆಬೇರು, ದೇವದಾರುವಿನ ಬೇರು, ಮಣಿಶಿಲೆ, ತಕ್ಕೋಲೇಬೇರು, ಅರಿದಳ, ಏಲಕ್ಕಿ ಇವುಗಳನ್ನು ಕುಟ್ಟಿ ಚೂರು ಮಾಡಿ ಪಂಚಗವ್ಯದಲ್ಲಿ ಬೆರಸಿ ಮೈಗೆ ಸವರಿಕೊಂಡು ಸ್ನಾನಮಾಡುವುದರಿಂದ ಸಕಲ ಪೀಡಾ ಪರಿಹಾರವಾಗಿ ಆಯುಷ್ಯಾಭಿವೃದ್ಧಿಯುಂಟಾಗುತ್ತದೆ.

೬. ಸಾಸುವೆ, ಚಂಗಲಕೋಷ್ಟ, ತುಪ್ಪ, ಗೇರುಬೀಜ, ಬಜೆ, ತಪಸಿ, ಕೊಮ್ಮ ಗಸೆ, ಒಣಗಿದ ಬೂರುಗದ ಸೊಪ್ಪು, ಇವುಗಳ ಧೂಪವನ್ನು ಹಾಕಿಸಿದರೆ ಸರ್ವಗ್ರಹ ಗಳೂ ಬಿಡುಗಡೆಯಾಗುವುವು.

೭. ಪ್ರತಿ ಮನೆಗಳಲ್ಲಿಯೂ ರಕ್ಷಣಾರ್ಥವಾಗಿ ಇದರ ಕೆಳಗೆ ಬರೆದ ಪದಾರ್ಥ ಗಳನ್ನು ಇಟ್ಟುಕೊಂಡೇ ಇರಬೇಕು. ಇವೆಲ್ಲವೂ ಸಮಯ ವಿಶೇಷಗಳಲ್ಲಿ ಉಪ ಯೋಗಕ್ಕೆ ಬರುವ ವಸ್ತುಗಳು. ಅವಾವುವೆಂದರೆ:—ಚಾಕು, ಚಿನ್ನ, ವತ್ಸನಾಭಿ, ಕೊಡಸಿಗೆಬೀಜ, ಎತ್ತಿನನಾಲಿಗೆ ಗಿಡ, ಪೂರ್ಣಕುಂಭ, ಮಂತ್ರದಪುಸ್ತಕ, ವೀಣೆ, ಗಂಧದಕಲ್ಲು, ನವಿಲುಗರಿ, ಬೆಳ್ಳಿ, ಬಿಲ್ಲು, ಬಾಣ, ಗೇರುಬೀಜ, ಸಾಸುವೆ.

ಪೂರ್ಣಂ ಕುಂಭಂ ಚ ಮಂತ್ರಾಶ್ಚ ವೀಣಾ ಚಂದನಮೇವ ಚ ।
ಮಯೂರಪಕ್ಷಾನ್ರಜತಂ ಸಮಾರ್ಗಣಗುಣಂ ಧನುಃ ॥ ೮ ॥

ಭಲ್ಲಾತಕಾನಿ ಸರ್ಪಿಶ್ಚ ರಕ್ಷಾರ್ಥಂ ಧಾರಯೇದ್ಗೃಹೇ ।
ಪುಷ್ಪೈರ್ಧೂಪೈಸ್ತಥಾ ಗಂಧೈರ್ಭಕ್ಷ್ಯೈರ್ನಾನಾವಿಧೈಸ್ತಥಾ ॥ ೯ ॥

ಪೂರ್ಣಕುಂಭೈಃ ಸಕುಲ್ಮಾಷೈರ್ಗೋರಸೈಶ್ಚಂದನೇನ ಚ ।
ಧೂಪೈರನ್ನಪ್ರಕಾರೈಶ್ಚ ಬಲಿಃ ಕಾರ್ಯೋ ವಿಜಾನತಾ ॥ ೧೦ ॥

ಕಾಯಸ್ಥಾಂ ಜಟಿಲಾಂ ವೀರಾಂ ವಯಸ್ಥಾಂ ನಕುಲೀದ್ವಯಂ ।
ಜಯಾಂ ಚ ವಿಜಯಾಂ ಚೈವ ಮಾನಾಂ ಪರ್ಪಟಿಕಂಬರೀಂ ॥ ೧೧ ॥

ಮರ್ಕಟೀಂ ಸೂಕರೀಂ ಛತ್ರಾಮತಿಚ್ಛತ್ರಾಂ ಪಲಂಕಷಾಂ ।
ರಾಮಾಂ ಪೂತನಕಾಂ ಕೇಶೀಂ ಮೋರಟಾಂ ಕಟುಕಾಂ ವಚಾಂ ॥ ೧೨ ॥

---

೮-೧೦. ಗ್ರಹಪೀಡೆಯೇನಾದರೂ ಸಂಭವಿಸಿತೆಂದು ತಿಳಿದರೆ ಆ ಗ್ರಹಗಳಿಗೆ ಮೇಲೆ ಹೇಳಿದ ಚಿಕಿತ್ಸೆಗಳನ್ನೆಲ್ಲಾ ಮಾಡಬೇಕಲ್ಲದೆ, ಪುಷ್ಪಗಳನ್ನು ತಂದು ಪೂಜೆ ಮಾಡಿ, ಗಂಧಾದಿಗಳಿಂದಲಂಕರಿಸಿ, ಧೂಪಗಳನ್ನು ಹಾಕಿ, ನಾನಾವಿಧ ಭಕ್ಷ್ಯಗಳನ್ನು ಮಾಡಿ ನೈವೇದಿಸಬೇಕು. ಪೂರ್ಣಕುಂಭಗಳಿಂದ ಸ್ನಾನಮಾಡಿಸಿ, ಗಂಧವನ್ನರ್ಪಿಸಿ, ಹಾಲು, ಮೊಸರುಗಳನ್ನು ನಿವೇದಿಸಿ ಬಣ್ಣ ಬಣ್ಣದ ಅನ್ನಗಳನ್ನು ಕಲಸಿ ಈ ಅನ್ನದ ಬಲಿಗಳನ್ನು ಹಾಕಬೇಕು. ಹೀಗೆ ಮಾಡುವುದಕ್ಕೆ ಬಲಿಕರ್ಮವೆಂದು ಹೆಸರು.

೧೧-೧೩. ಇನ್ನು ಏಳನೆಯದಾದ ಘೃತವಿಷಯವನ್ನು ತಿಳಿಸುತ್ತೇವೆ. ಅಳಲೆ ಕಾಯಿ, ದಪ್ಪಸರ್ಪಾತಕ್ಷಿ, ಚಿಕ್ಕಸರ್ಪಾತಕ್ಷಿ, ತಗ್ಗೀಬೇರು, ಭಂಗೀಸೊಪ್ಪು, ಪರಪಾಷ್ಟಕ ಕಳ್ಳಂಗಳ್ಳೆಬೇರು, ನಸುಗುನ್ನೆಬೇರು, ಹಂದೀಗೆಡ್ಡೆ, ಸಣ್ಣಬೋಳದವರಗ, ದಪ್ಪಬೋಳ ದರಗ, ನೆಗ್ಗಿಲುಮುಳ್ಳು (ಪಲಂಕಷಾ), ಗುಳ್ಳದಬೇರು, ತಾರೇಕಾಯಿ, ಕಳ್ಳಂಚೋರಿ, ಹಾಲುಕೊರಟಿಕೆ ಬೇರು, ಕಟುಕರೋಹಿಣೀ, ಬಜೆ, ಕಚೋರ, ಚಕ್ರಾಣೀಬೇರು, ಚೇಳುಬಾಲದ ಗಿಡ, ಇದನ್ನೆಲ್ಲಾ ಬೆರಸಿ ಚೂರ್ಣಮಾಡಿಕೊಳ್ಳಬೇಕು. ಈ ಚೂರ್ಣ ವನ್ನು ಹಳೇತುಪ್ಪದಲ್ಲಿ ಬೆರಸಿ ಒಂದು ಮಡಕೆಗೆ ಹಾಕಿ, ಇದರ ನಾಲ್ಕರಷ್ಟು ನೀರನ್ನು ಬೆರಸಿ ಒಲೆಯ ಮೇಲಿಟ್ಟು ನೀರೆಲ್ಲಾ ಇಂಗಿ ತುಪ್ಪದ ಹಾಗೆ ಹೆಪ್ಪು ಕಟ್ಟಿಕೊಳ್ಳುವವ

ಚೌರಕಾಂ ವಿಷ್ಣುದತ್ತಾಂ ಚ ವೃಶ್ಚಿಕಾಂಡೀಂ ಚ ಚೂರ್ಣಯೇತ್ ।
ಪುರಾಣಮೇಭಿರ್ವಿಪಚೇದ್ಘೃತಂ ತೋಯೇ ಚತುರ್ಗುಣೇ ॥ ೧೩ ॥

ಮಹಾಪೈಶಾಚಿಕಂ ನಾಮ ಸರ್ವಗ್ರಹನಿವಾರಣಂ ।
ರಸಾಂಜನಂ ತ್ರಿಕಟುಕಂ ಮಂಜಿಷ್ಠಾ ಸಮನಃಶಿಲಾ ॥ ೧೪ ॥

ಸುಮಾನಿ ಚ್ಛಾಗಮೂತ್ರೇಣ ಪಿಷ್ಟ್ವಾ ವರ್ತಿಂತು ಕಾರಯೇತ್ ।
ಛಾಯಾ ಶುಷ್ಕಂ ತು ತಂ ಕುರ್ಯಾದಂಜನಂ ಗ್ರಹನಾಶನಂ ॥ ೧೫ ॥

ಶ್ವೇತಜ್ಯೋತಿಷ್ಮತೀಂ ವ್ಯೋಷಂ ವಸ್ತ್ರಸೂತ್ರೇಣ ವೇಷ್ಟಿತಂ ।
ಛಾಯಾಶುಷ್ಕೇ ಪುನಃ ಪಿಷ್ಟಂ ಜ್ಞೇಯಂ ಪ್ರಶಮನಂ ಹಿತಂ ॥ ೧೬ ॥

ಸಂಪೂಜನಂ ದೇವಗುರುದ್ವಿಜಾನಾಂ
ಭಕ್ತಿಃ ಪರಾ ಚಕ್ರಗದಾಧರಸ್ಯ ।

---

ರಿಗೂ ಮಡಿಕೆಯನ್ನು ಈಚೆಗೆ ಇಳಿಸಕೂಡದು. ಚೆನ್ನಾಗಿ ತುಪ್ಪವಾದ ಮೇಲೆ ಅದನ್ನು ಸಂಗ್ರಹಮಾಡಿ ಇಟ್ಟುಕೊಂಡು ಗ್ರಹಪೀಡಿತರಿಗೆ ಕೊಟ್ಟರೆ ಪಿಶಾಚ ಗ್ರಹಗಳೇ ಮುಂತಾದ ಸಕಲ ಕ್ರೂರ ಗ್ರಹಗಳೂ ಸಹ ಹೇಳದೆ ಕೇಳದೆ ಓಡಿ ಹೋಗುವುವು.

೧೪-೧೬. ಮರದರಿಶಿನ, ಶುಂಠಿ, ಹಿಪ್ಪಲಿ, ಮೆಣಸು, ಮಂಜಿಷ್ಠೆ, ಮಣಿಶಿಲೆ, ಇವುಗಳನ್ನು ಸರ್ವಸಮವಾಗಿ ಬೆರಸಿ ಆಡಿನ ಉಚ್ಚೆಯಲ್ಲಿ ನೆನಸಿ, ಬಟ್ಟೆಯಲ್ಲದ್ದಿ, ಬತ್ತಿಯನ್ನು ಮಾಡಿಕೊಂಡು, ಅದನ್ನು ನೆರಳಿನಲ್ಲಿ ಚೆನ್ನಾಗಿ ಒಣಗಿಸಿಟ್ಟುಕೊಂಡಿದ್ದು, ಆದನ್ನು ಸುಟ್ಟು ಕರಕು (ಕಪ್ಪು-ಅಂಜನ) ಮಾಡಿ, ಗ್ರಹಪೀಡಿತನಿಗೆ ಹಚ್ಚಿದರೆ ಗ್ರಹ ಗಳು ಬಿಡುಗಡೆ ಹೊಂದುವುವು. ಒಂದು ವೇಳೆ ಇಷ್ಟು ಪದಾರ್ಥವೂ ದೊರೆಯದೆ ಇದ್ದರೆ, ಇನ್ನೊಂದು ವಿಧ ಬತ್ತಿಯ ಅಂಜನವನ್ನು ತಿಳಿಸುತ್ತೇವೆ. ಅದನ್ನು ಮಾಡಿಡ ಬಹುದು. ಗುಂಗುಂಗೆಬೀಜ, ಮೆಣಸು, ಶುಂಠಿ, ಹಿಪ್ಪಲಿ ಇವುಗಳನ್ನು ಚೂರ್ಣ ಮಾಡಿ ಮೇಲಿನಂತೆ ಬತ್ತಿಮಾಡಿಕೊಂಡು ನೆರಳಿನಲ್ಲಿ ಒಣಗಿಸಿ, ಆ ಬತ್ತಿಯನ್ನು ಸುಟ್ಟು ಕಪ್ಪುಮಾಡಿ ಉಪಯೋಗಿಸಿದರೆ ಗ್ರಹಬಾಧೆಗಳು ನಿವಾರಣೆಯಾಗುವುವು

೧೭. ಅಯ್ಯಾ! ಶೈಲೂಷರಾಜ! ಇದುವರಿಗೆ ಗ್ರಹದೋಷ ನಿವಾರಣಾ ಚಿಕಿತ್ಸಾಕ್ರಮವನ್ನು ನಿನಗೆ ತಿಳಿಸಿರುತ್ತೇನೆ. ಈ ಕ್ರಮಗಳೊಂದನ್ನೂ ಮಾಡುವುದ

**ಯೇಷಾಂ ನ ತೇಷಾಂ ಪ್ರಭವಂತಿ ದೋಷಾ**
**ಗ್ರಹೋದ್ಭವಾ ಭೂಮಿಪತಿಪ್ರಧಾನ　　　॥ ೧೭ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಗ್ರಹಬಾಧಾಪ್ರತಿಷೇಧೋನಾಮ ದ್ವಾತ್ರಿಂಶದ್ಯುತ್ತರ ದ್ವಿಶತತಮೋಽಧ್ಯಾಯಃ.**

---

ಕ್ಕಾಗದೆ, ತಕ್ಕ ಚಿಕಿತ್ಸಕ (ವೈದ್ಯ) ರೂ ಸಿಕ್ಕದೆ ಹೋಗುವುದಾದರೆ " ತ್ವಮೇವಶರಣಂ ಮಮ," ಎಂದು ಹೇಳಿಕೊಂಡು ಶಂಖ-ಚಕ್ರ-ಗದಾ-ಪದ್ಮಧಾರಿಯಾದ ಮಹಾವಿಷ್ಣುವನ್ನೇ ಮರೆಹೊಕ್ಕು ಆ ಭಗವಂತನನ್ನು ಭಕ್ತಿಯಿಂದ ಪೂಜಿಸಿ, ದೇವಗುರು ಬ್ರಾಹ್ಮಣರನ್ನು ತೃಪ್ತಿಪಡಿಸಿ ಆನಂದಪಡುವವರಾರೋ, ಅವರನ್ನು ಗ್ರಹಗಳು ತಮ್ಮಷ್ಟಕ್ಕೆ ತಾವೇ ಬಿಟ್ಟುಹೋಗುವುವು. ಅಂದರೆ ಆಚಾರಪರನನ್ನೂ, ಧಾರ್ಮಿಕವೃತ್ತಿಯಿಂದಿರುವವನನ್ನೂ, ಸನಾತನ ವರ್ಣಾಶ್ರಮಧರ್ಮಿಯಾದ ಸತ್ಪುರುಷನನ್ನೂ ಸಹ ಯಾವ ಗ್ರಹಗಳೂ ಮಾತನಾಡಿಸಲಾರವೆಂದು ಮುಖ್ಯಾರ್ಥ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪವಾದ ಗ್ರಹಬಾಧಾ ಪ್ರತಿನಿಷೇಧವೆಂಬ ಹೆಸರಿನ ಇನ್ನೂರಮೂವತ್ತೆರಡನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ತ್ರಯಸ್ತ್ರಿಂಶದುತ್ತರದ್ವಿಶತತಮೋಽಧ್ಯಾಯಃ ॥

---

॥ ಶೈಲೂಷ ಉವಾಚ ॥

ಸ್ಕಂದಸ್ಯ ಶರಣಂ ಪ್ರಾಪ್ತಾನ್ಗ್ರಹಾಂಚ್ಛ್ರುತ್ವಾ ಶತಕ್ರತುಃ ।
ಯಶ್ಚಕಾರ ಮಹಾಭಾಗ ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥

॥ ನಾಡಾಯನ ಉವಾಚ ॥

ಸ್ಕಂದಸ್ಯ ಶರಣಂ ಪ್ರಾಪ್ತಾನ್ ಶ್ರುತ್ವಾ ಶತಮುಖೋ ಯಯೌ ।
ದೇವದೇವಗಣೈಃ ಸಾರ್ಧಂ ಸ್ಕಂದೋ ಯತ್ರ ವ್ಯವಸ್ಥಿತಃ ॥ ೨ ॥

---

### ಇನ್ನೂರಮೂವತ್ತಮೂರನೆಯ ಅಧ್ಯಾಯವು.

೧. ಶೈಲೂಷನು ಪುನಃ ನಾಡಾಯನನನ್ನು ಕುರಿತು ಪ್ರಶ್ನೆಮಾಡಿದುದೇನೆಂದರೆ:—ಎಲೈ ಮಹರ್ಷಿಯೇ! ಸ್ಕಂದನಿಗೆ ಹೆದರಿಕೊಂಡು ಇಂದ್ರನಿಂದ ಸೃಷ್ಟವಾದ ಸಕಲ ದೇವಗ್ರಹಗಳೂ ಸ್ಕಂದನನ್ನೇ ಶರಣುಹೊಂದಿದುವೆಂದು ನೀನು ಹೇಳಿದೆಯಷ್ಟೆ? ಈ ವೃತ್ತಾಂತವನ್ನಿನ್ನಷ್ಟು ಹೇಳಯ್ಯ ಎಂದು ಕೇಳಿಕೊಂಡನು.

೨. ಅದಕ್ಕೆ ನಾಡಾಯನನು ಕೊಟ್ಟ ಉತ್ತರವೇನೆಂದರೆ:—ತಾನು ನಿರ್ಮಾಣಮಾಡಿದ ಗ್ರಹಗಳೆಲ್ಲವೂ ಸ್ಕಂದನಿಗೆ ಹೆದರಿ ಶರಣಾಗತವಾದ ವೃತ್ತಾಂತವನ್ನು ಕೇಳಿದೊಡನೆಯೇ ಆ ಇಂದ್ರನು ಗಾಬರಿಯಾಗಿ, ತನ್ನೊಡನೆ ಸಕಲ ದೇವತಾವರ್ಗವನ್ನೂ ಕರೆದುಕೊಂಡು ಕುಮಾರಸ್ವಾಮಿಯು ಎಲ್ಲಿದ್ದನೋ ಅಲ್ಲಿಗೆ ಬರುವಂಥವನಾದನು.

ಸ್ಕಂದಂ ದೇವೇಶ್ವರೋ ದೃಷ್ಟ್ವಾ ದೀಪ್ತತೇಜಃ ಸಮುದ್ಯುತಿಂ ।
ತುಷ್ಟಾವ ರಾಜಶಾರ್ದೂಲ ಪ್ರಯತಃ ಸುಸಮಾಹಿತಃ ॥ ೩ ॥

॥ ಶಕ್ರ ಉವಾಚ ॥

ದೇವದೇವಂ ನಮಸ್ಯಾಮಿ ಕುಮಾರಂ ವರಮುಚ್ಯುತಂ ।
ಕಾರ್ತಿಕೇಯಂ ದುರಾರಾಧ್ಯಂ ವಹ್ನಿತೇಜಃ ಸಮುದ್ಭವಂ ॥ ೪ ॥

ಉಮಾಶಂಕರಜಂ ಭೀಮಂ ಗಂಗಯಾ ಜಠರೇ ಧೃತಂ ।
ಶಕ್ತಿಹಸ್ತಂ ವಿಶಾಲಾಕ್ಷಂ ಷಣ್ಮುಖಂ ದೀಪ್ತತೇಜಸಂ ॥ ೫ ॥

ಭಕ್ತಾನುಕಂಪಿನಂ ದಾಂತಂ ಬ್ರಹ್ಮಣ್ಯಂ ವರದಂ ಪ್ರಭುಂ ।
ಕಾಕಪಕ್ಷಧರಂ ಶಾಂತಂ ಶಿಖಂಡಕನಿಭೂಷಿತಂ ॥ ೬ ॥

---

೩. ವಿಶೇಷವಾಗಿ ಪ್ರಕಾಶಿಸುತ್ತಲಿರುವ ತೇಜಸ್ಸಿನಿಂದೊಡಗೂಡಿದ ಕುಮಾರಸ್ವಾಮಿಯನ್ನು ನೋಡಿದೊಡನೆಯೇ, ಆ ಇಂದ್ರನು ಶಾಂತಚಿತ್ತನಾಗಿ ಪರಿಶುದ್ಧವಾದ ಮನಸ್ಸಿನಿಂದ ಆ ಸ್ಕಂದನನ್ನು ಸ್ತೋತ್ರಮಾಡುವುದಕ್ಕಾರಂಭಿಸಿದನು.

೪. ಇಂದ್ರನು ಮಾಡಿದ ಕುಮಾರಸ್ವಾಮಿಯ ಸ್ತೋತ್ರ :—ಕೃತ್ತಿಕಾದೇವಿಯ ಹೊಟ್ಟೆಯಲ್ಲಿ ಹುಟ್ಟಿದ, ಅಗ್ನಿಯ ತೇಜಸ್ಸಿನಿಂದುದಿಸಿದ, ನಾಶರಹಿತನಾದ, ದೇವದೇವೋತ್ತಮನಾದ, ಕುಮಾರಸ್ವಾಮಿಯನ್ನು ನಾನು ನಮಸ್ಕಾರಮಾಡುತ್ತೇನೆ.

೫. ಮೊದಲು ಉಮಾಶಂಕರರ ತೇಜಸ್ಸಿ (ರೇತಸ್ಸಿ) ನಿಂದ ಹೊರಹೊರಟು, ಅನಂತರ ಭಯಂಕರವಾದ ವೀರ್ಯಸ್ವರೂಪದಿಂದ ಗಂಗಾದೇವಿಯ ಮಡುಲಲ್ಲಿ ಬಿದ್ದು, ಆ ಬಳಿಕ ಹೊಳೆಹೊಳೆಯುವ ತೇಜಸ್ಸಿನಿಂದೊಡಗೂಡಿ ಶಕ್ತಿಹಸ್ತನಾಗಿಯೂ, ವಿಶಾಲಾಕ್ಷನಾಗಿಯೂ, ಷಣ್ಮುಖನಾಗಿಯೂ ಪ್ರಪಂಚದಲ್ಲಿ ಪ್ರತ್ಯಕ್ಷನಾಗಿ ನಿಂತು,

೬. ಭಕ್ತರ ಮೇಲೆ ಕೃಪೆಮಾಡುತ್ತಾ ದಾಂತನೂ, ಬ್ರಹ್ಮನಿಷ್ಠನೂ, ವರಪ್ರದಾತನೂ, ಲೋಕಪ್ರಭುವೂ ಆಗಿರುವ, ಜುಳುಪಿ ಕೂದಲಿನಿಂದ ಬಲುಮುದ್ದಾಗಿ ಕಾಣುತ್ತಿರುವ, ಶಾಂತಿಯಿಂದ ನವಿಲಿನ ಮೇಲೆ ಕುಳಿತು ಕಂಗೊಳಿಸುತ್ತಿರುವ,

ರಕ್ತಾಂಬರಂ ಮಹಾಬಾಹುಂ ಮಯೂರವರಗಾಮಿನಂ ।
ಘಂಟಾಪ್ರಿಯಂ ಗಣಾಧ್ಯಕ್ಷಂ ಮಹಾಬಲಪರಾಕ್ರಮಂ ॥ ೭ ॥

ದೇವಸೇನಾಪತಿಂ ದೇವಂ ಸರ್ವಲೋಕಹಿತೇಪ್ಸಯಾ ।
ಷಷ್ಠ್ಯಾಂತು ಶುಕ್ಲಪಕ್ಷಸ್ಯ ಯೇ ಚ ತ್ವಾಂ ಭೌಮವಾಸರೇ ॥ ೮ ॥

ಕೃತ್ತಿಕಾಸ್ವರ್ಚಯಿಷ್ಯಂತಿ ಯಥಾಲಾಭಂ ಪೃಥಕ್ಪೃಥಕ್ ।
ನ ತೇಷಾಂ ದುರ್ಲಭಂ ಕಿಂಚಿದ್ಭವಿಷ್ಯತಿ ಸುರೋತ್ತಮ ॥ ೯ ॥

ದ್ವಿಯೋಗೇ ದ್ವಿಗುಣಂ ತೇಷಾಂ ಫಲಂ ಸ್ಕಂದ ಭವಿಷ್ಯತಿ ।
ತ್ರಿಯೋಗೇ ಪೂಜನಂ ಕೃತ್ವಾ ಭವತಃ ಸುರಸತ್ತಮ ॥ ೧೦ ॥

ಅಕ್ಷಯಂ ಫಲಮಾಪ್ಸ್ಯಂತಿ ನಾತ್ರ ಕಾರ್ಯಾ ವಿಚಾರಣಾ ।
ವೈಶಾಖಮಾಸಾದಾರಭ್ಯ ಪಂಚಮ್ಯಾಂ ಯ ಉಪೋಷಿತಃ ॥ ೧೧ ॥

೭. ಕೆಂಪು ಮಗುಟವನ್ನುಟ್ಟು, ಸಕಲ ದೇವಗಣಗಳಿಗೂ, ಸೈನ್ಯಕ್ಕೂ ಯಜಮಾನನಾಗಿ ಮಹಾಬಲ ಪರಾಕ್ರಮದಿಂದೊಡಗೂಡಿದ, ಸರ್ವಲೋಕಹಿತಕ್ಕಾಗಿ ಅವತಾರ ತಾಳಿರುವ ಮಯೂರಾಸನನೇ! ನಿನ್ನನ್ನು ನಮಸ್ಕರಿಸುತ್ತೇನೆ.

೮-೯. ಎಲೈ ಗಜಾನುಜನೇ! ಯಾರು ನಿನ್ನನ್ನು ಕೃತ್ತಿಕಾನಕ್ಷತ್ರಯುಕ್ತವಾದ ಶುಕ್ಲಪಕ್ಷದ ಷಷ್ಠೀ ಮಂಗಳವಾರದ (ಸ್ಕಂದಷಷ್ಠೀ) ದಿವಸ ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಯಥಾಲಾಭವಾದ ದ್ರವ್ಯದಿಂದ, ಯಥಾಶಕ್ತಿ ನಿಯಮದಿಂದ ಸಾಧ್ಯವಾದಷ್ಟು ಉಪಚಾರಗಳಿಂದ ಪೂಜಿಸುತ್ತಾರೆಯೋ ಅವರಿಗೆ ಮೂರು ಲೋಕದಲ್ಲೂ ಅಸಾಧ್ಯವಾದ ಕೆಲಸವೇ ಇಲ್ಲ. ಅಂದರೆ ಅವರು ಸಕಲ ಸಿದ್ಧಿಗಳನ್ನೂ ಹೊಂದುತ್ತಾರೆಂದು ತಾತ್ಪರ್ಯ.

೧೦. ಮೇಲೆ ಹೇಳಿದ ವಾರ, ನಕ್ಷತ್ರ, ದಿನ ಮೂರರಲ್ಲಿ ಎರಡು ಯೋಗವಿದ್ದಾಗ ಪೂಜಿಸಿದರೆ ಅವರಿಗೆ ದ್ವಿಗುಣವಾದ ಫಲವುಂಟಾಗುತ್ತದೆ. ಮೂರು ಯೋಗವೂ ಕೂಡಿದ ಆ ದಿವಸ ಪೂಜಿಸಿದರೆ ಹೇಳಬೇಕಾಗಿಯೇ ಇಲ್ಲ.

೧೧. ಅಂತಹ ಪುಣ್ಯಾತ್ಮರಿಗೆ ಅಕ್ಷಯ ಫಲವುಂಟಾಗುವುದರಲ್ಲಿ ಸಂಶಯವಿಲ್ಲ. ವೈಶಾಖಮಾಸ ಮೊದಲುಮಾಡಿಕೊಂಡು ಪ್ರತಿಯೊಂದು ಪಂಚಮಿಯ ದಿವಸವೂ

ಭವಂತಂ ಪೂಜಯೇತ್ಷಷ್ಠ್ಯಾಂ ಸಂವತ್ಸರಮತಂದ್ರಿತಃ ।
ಪುತ್ರಾರ್ಥೀ ಲಭತೇ ಪುತ್ರಾನ್ಧನಕಾಮೋ ಧನಾನಿ ಚ ॥ ೧೨ ॥

ಮೃತಶ್ಚ ಪ್ರಾಪ್ನುಯಾತ್ಸ್ವರ್ಗಂ ತ್ವಯಿ ತುಷ್ಟೇ ಹರಾತ್ಮಜ ।
ಸ್ತೋತ್ರೇಣ ಚ ಮದೀಯೇನ ಯೇ ತೋಷ್ಯಂತಿ ತವ ಪ್ರಭೋ ॥ ೧೩ ॥

ಲೋಕದ್ವಯೇಽಪಿ ತೇ ಕಾಮಾನ್ಪ್ರಾಪ್ಸ್ಯಂತಿ ಮನಸೇಪ್ಸಿತಾನ್ ।
॥ ಸ್ಕಂದ ಉವಾಚ ॥
ಪಿತಾ ಮೇ ದೈವತಂ ಶಕ್ರ ಮಹಾದೇವಃ ಪ್ರತಾಪವಾನ್ ॥ ೧೪ ॥

ತಸ್ಯಾಜ್ಞಯಾ ಕರಿಷ್ಯಾಮಿ ಯನ್ಮಾಂ ವಕ್ಷ್ಯತಿ ವಾಸವ ।
॥ ನಾರಾಯಣ ಉವಾಚ ॥
ತತಃ ಪ್ರಾದುರಭೂತ್ತತ್ರ ದೇವದೇವಸ್ತ್ರಿಲೋಚನಃ ॥ ೧೫ ॥

---

ಯಾರು ಉಪವಾಸದಿಂದಿದ್ದು ನಿನ್ನನ್ನು ಒಂದು ವರ್ಷಕಾಲ ಪೂರ್ತಿಯಾಗಿ ಬಿಡದೆ ಮೂರನೇ ಷಷ್ಠಿಯದಿವಸ ಪೂಜಿಸುತ್ತ ಬರುವರೋ,

೧೨ ಅಂತಹ ನಿನ್ನ ಭಕ್ತರು ಯಾವ ಇಷ್ಟಾರ್ಥಗಳನ್ನು ಮನಸ್ಸಿನಲ್ಲಿ ಕೋರಿಕೊಂಡರೂ ಆಯಾ ಮನೋರಥಗಳನ್ನು ನೀನು ಅವರವರಿಗೆ ಅನುಗ್ರಹಿಸಿ ಉದ್ಧರಿಸುತ್ತೀಯೆ. ಹಣಬೇಕಾದವರಿಗೆ ಹಣದ ರಾಶಿಯನ್ನೇ ಕೊಡುವೆ. ಮಕ್ಕಳನ್ನು ಕೇಳಿದರೆ ಮಕ್ಕಳನ್ನು ಕೊಡುವೆ.

೧೩. ನಿನ್ನ ಭಕ್ತನು ಸತ್ತುಹೋದ ಮೇಲೆ ನಿನ್ನ ಪರಮಾನುಗ್ರಹದಿಂದ ನನ್ನ ರಾಜ್ಯವಾದ ಸ್ವರ್ಗದಲ್ಲಿ ಸುಖವಾಗಿ ವಾಸಮಾಡುತ್ತಾನೆ. ಎಲೈ ಕುಮಾರ ಸ್ವಾಮಿಯೇ! ನಾನು ಈಗ ಮಾಡಿದ ನಿನ್ನ ಸ್ತೋತ್ರದಿಂದ ಅದಾವಮನುಷ್ಯನು ನಿನ್ನನ್ನು ಸ್ತುತಿಗೈವನೋ ಅಂಥವನು ಇಹಲೋಕ ಪರಲೋಕಗಳಲ್ಲಿ ತನ್ನ ಮನಸ್ಸಿನಲ್ಲಿದ್ದ ಬಯಕೆಗಳನ್ನೆಲ್ಲಾ ನಿಜವಾಗಿ ಹೊಂದಿ ಸುಖಪಡುತ್ತಾನೆ.

೧೪. ಈ ರೀತಿಯಾಗಿ ತನ್ನನ್ನು ಸ್ತೋತ್ರಮಾಡುತ್ತಿರುವ ಇಂದ್ರನನ್ನು ನೋಡಿ ಕುಮಾರಸ್ವಾಮಿಯು ಹೇಳಿದುದೇನೆಂದರೆ :—ಅಯ್ಯ ಇಂದ್ರ! ನನಗೆ ಪರಮೇಶ್ವರನೇ ತಂದೆಯಾಗಿಯೂ, ಗುರುವಾಗಿಯೂ ಇದ್ದಾನೆ. ಆ ಗುರುವು ನನಗೆ ಏನೇನು ಅಪ್ಪಣೆಕೊಡಿಸುತ್ತಾನೆಯೋ ಅದರಂತೆ ನಾನು ಮಾಡುವೆನೇ ಹೊರತು ಅನ್ಯಥಾ ನಾನು ಯಾವ ಸ್ವಾತಂತ್ರ್ಯವನ್ನೂ ವಹಿಸಲಾರೆನಯ್ಯ ಎಂದು ಹೇಳಿದನು.

೧೫. ಮಾತನಾಡುತ್ತಿದ್ದ ಹಾಗೆಯೇ ಮಧ್ಯೆ ನಾರಾಯಣನು ಶೈಲೂಷನನ್ನು

**ಅಭ್ಯಷಿಂಚತ್ಕುಮಾರಂ ಚ ಬ್ರಹ್ಮಣಾ ಸಹಿತಃ ಪ್ರಭುಃ ।**
**ಸೇನಾಪತ್ಯೇನ ದೇವಾನಾಂ ಸೋಽಭಿಷಿಕ್ತಸ್ತದಾ ಪ್ರಭೋ ॥ ೧೬ ॥**

**ಜಘಾನ ಮಹಿಷಂ ನಾಮ ದಾನವಂ ದೇವಕಂಟಕಂ ।**
**ಮಹಿಷೇಣ ಸಮಾನ್ವೀರ್ಯೇ ಜಘಾನಾಯುತಶೋಽಪರಾ ॥ ೧೭ ॥**

**ಬಹುತ್ವಾದ್ದಾನವಾನ್ವೀರಃ ಸ್ಕಂದಃ ಪರಬಲಾರ್ದನಃ ।**
**ಯದಾ ಹಂತುಂ ನ ಶಕ್ನೋತಿ ತದಾ ದೇವಸ್ತ್ರಿಲೋಚನಃ ॥ ೧೮ ॥**

**ಜಘಾನ ಮನಸಾ ತತ್ರ ತತಃ ಶೂಲವರಾಯುಧಃ ।**
**ಜಘಾನ ದಾನವಾನನ್ಯಾಃ ಶತಶೋಽಥ ಸಹಸ್ರಶಃ ॥ ೧೯ ॥**

---

ಕುರಿತು ಸ್ಪಷ್ಟವಾಗಿ ಹೇಳಿದನು :—ಚೆನ್ನಾಗಿ ಕೇಳು, ಶೈಲೂಷ! ಶಿವಕುಮಾರನು ಇಂತು ಶಿವನ ಮೇಲೆ ಹೆಚ್ಚುಗಾರಿಕೆಯನ್ನು ಹೊರಿಸಿದುದನ್ನು ನೋಡಿ, ಪರೋಕ್ಷದಿಂದ ಕೇಳುತ್ತಲಿದ್ದ ಪರಶಿವನು ಆ ನಿಮಿಷದಲ್ಲೇ ಸ್ಕಂದನೆದುರು ಬಂದು ನಿಂತನು.

೧೬. ಶಿವನಹಿಂದೆ ಬ್ರಹ್ಮನೂ ಜತೆಯಲ್ಲಿ ಬಂದಿದ್ದನು. ಆಗ ಅವರಿಬ್ಬರೂಸೇರಿ ಸಕಲ ದೇವತಾಸಹಿತನಾದ ಇಂದ್ರನ ಮುಂದೆ, ಕುಮಾರಸ್ವಾಮಿಯನ್ನು ದೇವತೆಗಳ ಸೇನೆಗೆ ಅಧಿಪತಿಯನ್ನಾಗಿಮಾಡಿ ಪಟ್ಟಾಭಿಷೇಕವನ್ನೂ ಸಹ ಮಾಡಿದರು.

೧೭. ಸ್ಕಂದನು ಸೈನ್ಯಾಧಿಪತ್ಯವನ್ನು ವಹಿಸಿಕೊಂಡೊಡನೆಯೇ ಒಂದು ಭಯಂಕರವಾದ ಕಾಳಗಕ್ಕಾರಂಭವಾಯಿತು. ಈ ಎಳೇ ಮಗುವಿಗೆ ಸೈನ್ಯಾಧಿಕಾರವನ್ನು ಕೊಟ್ಟಿರುವುದನ್ನು ತಿಳಿದು ಮಹಿಷಾಸುರನೆಂಬ ರಾಕ್ಷಸನು ಈ ಮಗುವನ್ನು ತೀರಿಸಿಬಿಡಬೇಕೆಂದು ದೇವತೆಗಳ ಮೇಲೆ ದಂಡೆತ್ತಿ ಬಂದು ದೊಡ್ಡ ಯುದ್ಧಕ್ಕೇ, ಆರಂಭಿಸಿದನು. ಆ ಯುದ್ಧದಲ್ಲಿ ಕುಮಾರಸ್ವಾಮಿಯು ಆ ಮಹಿಷಾಸುರನನ್ನೂ ಅವನಿಗೆ ಸಮಾನ ಪರಾಕ್ರಮಶಾಲಿಗಳಾಗಿದ್ದ ಹತ್ತು ಸಾವಿರ ರಾಕ್ಷಸರನ್ನೂ ಸಂಹರಿಸಿದನು.

೧೮. ಇಷ್ಟು ಮಂದಿ ರಾಕ್ಷಸರು ಸತ್ತಮೇಲೂ ಬಹು ಜನ ರಾಕ್ಷಸರು ಇನ್ನೂ ಉಳಿದುಕೊಂಡೇ ಇದ್ದರು. ಆ ದೊಡ್ಡ ಸೈನ್ಯವನ್ನಡಗಿಸಲು ಕುಮಾರನಿಗೆ ಸಾಧ್ಯವಿಲ್ಲದೇ ಹೋಯಿತು. ಆಗ ಆ ಸೈನ್ಯದ ಮುಂದೆ ಪರಮೇಶ್ವರನೇ ಸಾಕ್ಷಾತ್ತಾಗಿ ಬಂದು ನಿಂತುಕೊಂಡನು.

೧೯. ಈರೀತಿ ಸೈನ್ಯಮಧ್ಯದಲ್ಲಿ ನಿಂತ ಆ ಪರಮೇಶ್ವರನು ತ್ರಿಶೂಲಾಯುಧ

ಭಕ್ತಾನುಕಂಪೀ ಭಗವಾಂಸ್ತ್ರಿನೇತ್ರೋ
ದೇವಾರಿಸಂಘಾನ್ವಿನಿಪಾತ್ಯ ಸಂಘೇ ।
ಕೃತ್ವಾ ತ್ರಿಲೋಕೀಂ ಚ ತದಾ ಪ್ರಹೃಷ್ಟಾಂ
ಜಗಾಮ ಕೈಲಾಸಗಿರಿಂ ಮಹಾತ್ಮಾ ॥ ೨೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಮಹಿಷವಧೋ ನಾಮ ತ್ರಯಸ್ತ್ರಿಂಶದ್ಯುತ್ತರ
ದ್ವಿಶತತಮೋಽಧ್ಯಾಯಃ.

---

ವನ್ನು ಕೈಯಲ್ಲಿ ಹಿಡಿದು ನೂರಾರು ಸಾವಿರಾರು ಮಂದಿ ರಾಕ್ಷಸರನ್ನು ಸಂಹರಿಸಿದನು. ಉಳಿದವರು ಈಶ್ವರನ ಮನಸ್ಸಂಕಲ್ಪದಿಂದಲೇ ಅಸುಗಳನ್ನು ನೀಗಿದರು.

೨೦. ಭಕ್ತರಲ್ಲಿ ಅಪಾರಕೃಪೆಯನ್ನಿಟ್ಟಿರುವ ಆ ಕಪಾಲಪಾಣಿಯು ಆ ಕ್ರವ್ಯಾದರನ್ನು ಗುಂಪುಗುಂಪಾಗಿ ಕೊಂದು, ಮೂರು ಲೋಕದ ಜನರಿಗೂ ಉಪಕಾರ ವನ್ನು ಮಾಡಿ ಪರಮಾನಂದಭರಿತನಾಗಿ ಕೈಲಾಸಶಿಖರವನ್ನೇರಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಮಹಿಷವಧೆಯೆಂಬ ಹೆಸರಿನ
ಇನ್ನೂರಮೂವತ್ತ ಮೂರನೆಯ ಅಧ್ಯಾಯವು
ಮುಗಿದುದು.



ಶ್ರೀ

# ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಚತುಸ್ತ್ರಿಂಶದುತ್ತರದ್ವಿಶತತಮೋಽಧ್ಯಾಯಃ

॥ ನಾಡಾಯನ ಉವಾಚ ॥

**ತಸ್ಯೈವ ದೇವದೇವಸ್ಯ ಪ್ರಭಾವಮಪರಂ ಶೃಣು ।**
**ಯಷ್ಟುಕಾಮೈಃ ಸುರೈಃ ಪೂರ್ವಂ ಯಜ್ಞೇ ಭಾಗೋ ನ ಕಲ್ಪಿತಃ ॥ ೧ ॥**

**ಯದಾ ರಾಜಂಸ್ತ್ರಿನೇತ್ರಸ್ಯ ತದಾ ಕ್ರುದ್ಧೇನ ಶಂಭುನಾ ।**
**ಯಜ್ಞವಾಟಂ ತತೊ ಗತ್ವಾ ದೇವಾ ವಿತ್ರಾಸಿತಾ ಬಲಾತ್ ॥ ೨ ॥**

---

### ಇನ್ನೂರಮೂವತ್ತ ನಾಲ್ಕನೆಯ ಅಧ್ಯಾಯವು.

### ಈಶ್ವರನ ಮಹಿಮೆಗಳು.

೧. ನಾಡಾಯನನು ಪುನಃ ಹೇಳುತ್ತಾನೆ :—ಈಶ್ವರನ ಪ್ರಭಾವವೆಂತಹು ದೆಂಬುದನ್ನು ಇನ್ನೂ ಹೇಳುತ್ತೇನೆ, ಕೇಳು. ಒಂದಾನೊಂದು ಸಮಯದಲ್ಲಿ ದೇವತೆಗಳೆಲ್ಲರೂ ಕೂಡಿ ಒಂದು ಮಹಾಯಜ್ಞವನ್ನು ಮಾಡಿದರು. ಆ ಯಜ್ಞದಲ್ಲಿ ಪರಮೇಶ್ವರನೊಬ್ಬನ ವಿನಹ ಉಳಿದ ಸಕಲ ದೇವತೆಗಳಿಗೂ ಹವ್ಯಭಾಗವನ್ನು ಕೊಟ್ಟರು.

೨-೩. ಎಲೈ ಶೈಲೂಷನೇ, ಕೇಳು. ತನಗೆ ಹವಿರ್ಭಾಗವನ್ನು ದೇವತೆಗಳು ಕೊಡದೆ ಯಜ್ಞಮಾಡುತ್ತಿರುವುದನ್ನು ನೋಡಿ ಪರಮೇಶ್ವರನು ಪರಮಕ್ರೋಧಭರಿತ ನಾಗಿ ಯಜ್ಞಶಾಲೆಗೆ ನುಗ್ಗಿ ಅಲ್ಲಿದ್ದ ದೇವತೆಗಳನ್ನೆಲ್ಲಾ ಹೆದರಿಸಿ ಅಟ್ಟಿಬಿಟ್ಟನು. ಇಂದ್ರನ ಹಲ್ಲುಗಳನ್ನು ದುರಿಸಿಬಿಟ್ಟನು. ಅಗ್ನಿಯ ಎಡಗಣ್ಣನ್ನು ಕಿತ್ತುಹಾಕಿಬಿಟ್ಟನು. ಈ ರೀತಿ ಪರಮೇಶ್ವರನು ಆ ಯಜ್ಞಮಂಟಪದಿಂದೋಡಿಸಿ ಹೋದಮಾರ್ಗವಾಗಿ

**ಪುರೋಡಾಶಂ ಭಕ್ಷಯಿತ್ವಾ ಪೂಷ್ಣೋ ದಂತಾನಶಾತಯತ್ ।**
**ಭಗಸ್ಯ ನಯನಂ ವಾಮಂ ಬಭಂಜ ಪರವೀರಹಾ ॥ ೩ ॥**

**ಕ್ರುದ್ಧಂ ದೃಷ್ಟ್ವಾ ಮಹಾದೇವಂ ಮೃಗರೂಪಧರಸ್ತದಾ ।**
**ಪ್ರಾದ್ರವತ್ಸಹಸಾ ಯಜ್ಞೋ ನರನಾರಾಯಣಾಶ್ರಮಂ ॥ ೪ ॥**

**ತಮನ್ವಯೌ ಮಹಾತೇಜಾ ಬಾಣಚಾಪಧರೋ ಹರಃ ।**
**ಯಜ್ಞಾನುಸಾರಿಣಂ ಪ್ರಾಪ್ತಂ ಹರಂ ಬಾಣಧನುರ್ಧರಂ ॥ ೫ ॥**

**ನಾರಾಯಣಸ್ತು ತಂ ಚಕ್ರೇ ವಿಹ್ವಲಂ ಕಂಠಪೀಡನಾತ್ ।**
**ವಿಹ್ವಲೇ ತು ಮಹಾದೇವೇ ಯಜ್ಞೋ ದಿವಮಥಾಽಶ್ರಿತಃ ॥ ೬ ॥**

**ಹರೋಽಪಿ ಲಬ್ಧಸಂಜ್ಞಸ್ತಮನ್ವಯೌ ದಿವಿಸತ್ವರಃ ।**
**ನ ಶಶಾಕ ಮೃಗಂ ವೇದ್ಧುಂ ಯದಾ ಧರ್ಮಶ್ಚ ತೇಜಸಾ ॥ ೭ ॥**

---

ಇಟ್ಟಿದ್ದ ಪುರೋಡಾಶ (ಹೋಮದ್ರವ್ಯ) ವನ್ನು ಭಕ್ಷಿಸಿಬಿಟ್ಟನು.

೪. ಈ ವಿಧವಾಗಿ ಕ್ರೋಧೋದ್ದೀಪಿತನಾದ ಪರಮೇಶ್ವರನು ಮಾಡಿದ ಈ ಕೆಲಸಗಳನ್ನು ನೋಡಿ ಯಜ್ಞಕ್ಕೆ (ಯಜ್ಞಪುರುಷ ಅಥವಾ ಯಜ್ಞಾಭಿಮಾನದೇವತೆಗೆ) ಬಹಳ ಹೆದರಿಕೆಯಾಗಿ, ಆ ಯಜ್ಞವು ಜಿಂಕೆಯ ಆಕಾರವನ್ನು ತಳೆದು ಥಂಗನೆ ಹಾರಿಹೋಗಿ ಬದರಿಕಾ (ನರನಾರಾಯಣಾ) ಶ್ರಮದಲ್ಲಿ ಔತುಕೊಂಡುಬಿಟ್ಟಿತು.

೫-೬. ಈ ರೀತಿ ಜಿಂಕೆಯಾಕಾರದಿಂದೋಡಿ ಹೋದ ಯಜ್ಞವನ್ನು ಅನುಸರಿಸಿಕೊಂಡ ಹರನೂ ಸಹ ಬಾಣಚಾಪಗಳನ್ನು ಹಿಡಿದು ಆ ನರನಾರಾಯಣಾಶ್ರಮಕ್ಕೆ ಜತೆಯಲ್ಲಿಯೇ ಬಂದನು. ಹೀಗೆ ಯಜ್ಞದ ಹಿಂದೆಯೇ ಬಂದ ಬಾಣತೂಣೀರಾನ್ವಿತನಾದ ಈಶ್ವರನನ್ನು ನೋಡಿ, ನಾರಾಯಣನು ಎದುರಿಗೆ ಬಂದು ಈಶ್ವರನ ಕತ್ತನ್ನು ತಬ್ಬಿಕೊಂಡು ಬಿಟ್ಟನು. ಆಗ ನಾರಾಯಣಾಲಿಂಗನದಿಂದ ನಿಶ್ಚೇಷ್ಟಿತನಾಗಿ ವಿಹ್ವಲನಾಗಿದ್ದ ಶಂಕರನನ್ನು ನೋಡಿ ಆ ಔತುಕೊಂಡಿದ್ದ ಯಜ್ಞವು (ಜಿಂಕೆ) ಸ್ವರ್ಗಕ್ಕೆ (ಆಕಾಶಕ್ಕೆ) ಹಾರಿ ಹೊರಟುಹೋಯಿತು.

೭. ನಾರಾಯಣನ ಹಿಡಿತದಿಂದ ಕಂಠವು ಸಡಿಲವಾದೊಡನೆ ಈಶ್ವರನಿಗೆ ತಿಳಿವಳಿಕೆಯುಂಟಾಗಿ ಆಕಾಶಕ್ಕೆ ಹಾರಿದ್ದ ಜಿಂಕೆ (ಯಜ್ಞ) ಯಾ ಬೆನ್ನಟ್ಟಿ ಪುನಃ ಹೊರ

ತತಸ್ತಂ ಬೋಧಯಾಮಾಸ ಬ್ರಹ್ಮಾ ಶುಭಚತುರ್ಮುಖಃ ।
ಭರ್ಗಸ್ಯ ಪೂರ್ಣಂ ಚ ತದಾ ಪ್ರಸಾದಮಕರೋತ್ಪ್ರನಃ ॥ ೮ ॥

ಯಜ್ಞಸ್ಯ ಚಾಭಯಂ ದತ್ವಾ ಕ್ರೀಡಯಾನ್ವೇತಿ ತಂ ಪುನಃ
ತಾರಾಮೃಗಶ್ಚ ಗಗನೇ ಮಹಾದೇವಾನುಗಃ ಸದಾ ॥ ೯ ॥

ದೃಶ್ಯತೇ ಸ ಮಹಾಭಾಗ ರಾತ್ರೌಗ ಗಗನಭೂಷಣಃ ॥ ೧೦ ॥

ಕ್ರುದ್ಧೇನ ರುದ್ರೇಣ ಸುರಾ ನಿರಸ್ತಾಃ
ಸ್ವಸ್ಥಾಃ ಪ್ರಸನ್ನೇನ ಕೃತಾಶ್ಚ ಭೂಯಃ ।

---

ಟನು. ಮಹಾತೇಜಸ್ಸಿನಿಂದ ಕೂಡಿದ್ದ ಧರ್ಮಸ್ವರೂಪವಾದ ಆ ಯಜ್ಞ (ಹರಿಣ) ವನ್ನು ಹಿಂಸಿಸಲು ಈಶ್ವರನಿಗೆ ಸಾಧ್ಯವಿಲ್ಲದೆ ಹೋಯಿತು.

೮. ಆ ಸಮಯದಲ್ಲಿ ಬ್ರಹ್ಮನು ಆ (ಯಜ್ಞ-ಈಶ್ವರ) ಯಜ್ಞೇಶ್ವರರ ಬಳಿಗೆ ಬಂದು ಸರಿಯಾದ ತಿಳುವಳಿಕೆಯನ್ನು ಹೇಳಿ ಅವರವರಿಗೆ ಸ್ನೇಹವನ್ನು ಮಾಡಿಸಿದನು. ಕಣ್ಣುಕಳೆದುಕೊಂಡಿದ್ದ ಅಗ್ನಿಗೆ ಅನುಗ್ರಹವನ್ನೂ ಸಹ ಮಾಡಿದನು

೯. ಯಜ್ಞಕ್ಕೆ ಅಭಯವನ್ನು ಕೊಟ್ಟು ಈಶ್ವರನ ಸಂಗಡ ಆಟವಾಡಿಕೊಂಡು ಆಕಾಶದಲ್ಲಿಯೇ ಇರುವಂತೆ ಅಪ್ಪಣೆಕೊಟ್ಟನು.

೧೦. ಎಲೈ ವಾಚಕರೇ ! ನಿಮಗೂ ಕೂಡ ಆ ಮೃಗವೂ ಈಶ್ವರನೂ ಆಗಸದಲ್ಲಿ ಆಟವಾಡುತ್ತಿರುವುದನ್ನು ನೋಡಬೇಕೆಂದು ಆಶೆಯಿದೆಯೇನು ? ಹಾಗೆ ಆಶೆಯಿದ್ದರೆ ರಾತ್ರಿಹೊತ್ತಿನಲ್ಲಿ ಆಕಾಶದಕಡೆಗೆ ಕತ್ತೆತ್ತಿ ಸ್ವಲ್ಪನೋಡುತ್ತೀರಾ ? ಈಶ್ವರನೂ ಜಿಂಕೆಯೂ ಆಟವಾಡುತ್ತಿರುವ ನೋಟದ ಸೊಬಗು ಕಾಣುವುದು. ಆ ಸೊಬಗೇನು ? ಗೊತ್ತಾಯಿತೆ ? ಅದೇ ಮೃಗಶಿರಾನಕ್ಷತ್ರವಲ್ಲವೇ ? ಅದರ ಲಕ್ಷಣವು ಇನ್ನೂ ನಿಮಗೆ ತೋರದೆ ಇದ್ದರೆ ಯಾರಾದರೂ ನಿಮ್ಮೂರಿನ ಜೋಯಿಸರನ್ನು ಕೇಳಿ, ಹೇಳುತ್ತಾರೆ.

೧೧. ಯಾರೂ ಈಶ್ವರನಿಗೆ ಕೋಪಬರುವ ಕೆಲಸವನ್ನು ಮಾಡಬಾರದು. ಈಶ್ವರನ ಕೋಪದಿಂದ ಹೆದರಿದ ದೇವತೆಗಳು ಓಡಿಹೋದರು. ಆಮೇಲೆ ಅವನು

**ತಸ್ಮಾತ್ಪ್ರಸನ್ನಾಸ್ತು ಭವಾಯ ಲೋಕೇ**
**ಕ್ರುದ್ಧಶ್ಚ ಲೋಕಾಂತಕರಃ ಪ್ರದಿಷ್ಟಃ**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಯಜ್ಞವಿಧ್ವಂಸನೋ ನಾಮ ಚತುಸ್ತ್ರಿಂಶದುತ್ತರ ದ್ವಿಶತತಮೋಽಧ್ಯಾಯಃ.**

---

ಶಾಂತವಾದಮೇಲೆ ಶಾಂತರಾದರು. ನೀವೇನಾದರೂ ಹರನ ಸಿಟ್ಟಿಗೆ ಸಿಕ್ಕಿದರೆ ಸ್ವರ್ಗವನ್ನೇರಬೇಕಾದೀತು ? ಆದ್ದರಿಂದ ಆವನಮುಂದೆ ವಿಧೇಯರಾಗಿಯೂ ಶಾಂತರಾಗಿಯೂ ನಡೆದುಕೊಳ್ಳಿರಿ. ಜನರೇ ಎಚ್ಚರವಿರಲಿ !

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದ ರೂಪದಲ್ಲಿ ಯಜ್ಞವಿಧ್ವಂಸನ
ವೆಂಬ ಹೆಸರಿನ ಇನ್ನೂರ ಮೂವತ್ತನಾಲ್ಕನೇ ಆಧ್ಯಾಯವು
ಮುಗಿದುದು.



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಪಂಚತ್ರಿಂಶದುತ್ತರ ದ್ವಿಶತತಮೋಽಧ್ಯಾಯಃ ॥

---

॥ ನಾರಾಯಣ ಉವಾಚ ॥

ತಸ್ಯೈವ ದೇವದೇವಸ್ಯ ಪ್ರಭಾವಮಪರಂ ಶೃಣು ।
ತೇನ ವಿಧ್ವಂಸಿತೋ ಯಜ್ಞೋ ಯದಾ ದಕ್ಷಸ್ಯ ಧೀಮತಃ ॥ ೧ ॥

ದಕ್ಷಸ್ಯ ಯಜಮಾನಸ್ಯ ಗಂಗಾದ್ವಾರೇ ಪುರಾ ಪ್ರಭೋ ।
ಅನಾಹ್ವಾನೇ ಚ ಶರ್ವಸ್ಯ ದೇವೀ ಪ್ರಕುಪಿತಾಽಭವತ್ ॥ ೨ ॥

---

### ಇನ್ನೂರ ಮೂವತ್ತೈದನೆಯ ಅಧ್ಯಾಯವು.

೧. ನಾರಾಯಣನು ಶೈಲೂಷನನ್ನು ಕುರಿತು ಇನ್ನೂ ಹೇಳುತ್ತಾನೆ:—ಶೈಲೂಷ! ಈಶ್ವರನ ಮಹಿಮೆಯು ಇಷ್ಟೇ ಇದೆಯೆಂದು ತಿಳಿಯಬೇಡ. ಇನ್ನೂ ಇಂಥವು ಎಷ್ಟೋ ಇವೆ. ಅದರಲ್ಲಿ ಇನ್ನೊಂದು ಆ ಈಶ್ವರನ ಮಹಿಮೆಯನ್ನು ಹೇಳುತ್ತೇನೆ ಕೇಳು. ಈಗ ನಾನು ಹೇಳುವುದು ದಕ್ಷಬ್ರಹ್ಮನ ಯಜ್ಞದಲ್ಲಿ ನಡೆದ ಕಥೆ. ಹಿಂದೆಯೊಂದುಬಾರಿ ದಕ್ಷಬ್ರಹ್ಮನು ಒಂದು ಮಹಾಯಜ್ಞವನ್ನು ಮಾಡಿದನು. ಆ ಯಜ್ಞವೂ ಸಹ ಧ್ವಂಸಮಾಡಲ್ಪಟ್ಟಿತು. ಅದರ ವೃತ್ತಾಂತವನ್ನು ಈಗ ಹೇಳುತ್ತೇನೆ.

೨. ಬಹುಕಾಲದ ಹಿಂದೆ ಹರಿದ್ವಾರದಲ್ಲಿ ಒಂದು ದೊಡ್ಡ ಯಜ್ಞವು ನಡೆಯಿತು. ಆ ಯಜ್ಞಕ್ಕೆ ದಕ್ಷಬ್ರಹ್ಮನೇ ಯಜಮಾನನಾಗಿದ್ದನು. ದಕ್ಷನಿಗೆ ಈಶ್ವರನು ಅಳಿಯನೆಂದು ಎಲ್ಲರಿಗೂ ತಿಳಿದೇ ಇದೆಯಷ್ಟೆ. ಅಳಿಯನನ್ನು ದಕ್ಷನು ಯಜ್ಞಕ್ಕೆ ಬಾರೆಂದು ಕರೆಯಲೂ ಇಲ್ಲ. ಹವಿಸ್ಸನ್ನೂ ಕೊಡಲಿಲ್ಲ. ಇದನ್ನು ನೋಡಿ ಅಪ್ಪನ ಮನೆಗೆ ಆಸಾಮೂಳಾಗಿ ಹೋಗಿದ್ದ ಪಾರ್ವತಿಗೆ ಬಲು ಸಿಟ್ಟು ಬಂದುಬಿಟ್ಟಿತು.

ದೇವ್ಯಾಃ ಪ್ರಕೋಪಾಚ್ಚ ತಥಾ ಕ್ರುದ್ಧಃ ಶೂಲಧರಸ್ತದಾ ।
ವೀರಭದ್ರೇತಿ ವಿಖ್ಯಾತಂ ಕ್ರೋಧಜಂ ಸೃಷ್ಟವಾನ್ಗಣಂ ॥ ೩ ॥

ಭದ್ರಕಾಲೀ ಸ್ವಕಾದ್ದೇಹಾತ್ಸೃಷ್ಟವತ್ಯಥ ಪಾರ್ವತೀ ।
ಗಣೈರನುಗತೋ ರಾಜನ್ವೀರಭದ್ರೋ ಮಹಾಯಶಾಃ ॥ ೪ ॥

ಭದ್ರಕಾಲೀ ತಥಾ ಗತ್ವಾ ದಕ್ಷಯಜ್ಞಮಶಾತಯತ್ ।
ವಿಧ್ವಸ್ಯಮಾನಂ ಯಜ್ಞಂತು ಪಾರ್ವತ್ಯಾ ಸಹಿತಃ ಶಿವಃ ॥ ೫ ॥

ದೃಷ್ಟವಾಂಸ್ತತ್ರ ರಾಜೇಂದ್ರ ಭದ್ರಕರ್ಣೇಶ್ವರಃ ಸ್ಥಿತಃ ।
ವಿಧ್ವಸ್ಯಮಾನೇ ಯಜ್ಞೇ ತು ದಕ್ಷೋ ವಚನಮಬ್ರವೀತ್ ॥ ೬ ॥

---

೩. ತನ್ನ ಹೆಂಡತಿಯು ತನಗೆ ಹೇಳದೆ ತಂದೆಯ ಮನೆಗೆ ಹೋದದ್ದೂ· ಅಲ್ಲಿ ತನಗೆ (ಈಶ್ವರನಿಗೆ) ಹವಿರ್ಭಾಗವು ದೊರೆಯದೇ ಇದ್ದದ್ದೂ, ಅದನ್ನು ನೋಡಿ ಪಾರ್ವತಿಗೆ ಕೋಪ ಬಂದದ್ದೂ ಸಹ ಈಶ್ವರನಿಗೆ ಗೊತ್ತಾಗಿಹೋಯಿತು. ಆಗ ಶಿವ ನಿಗೂ ಕೋಪಬಂದು, ಆ ಶಿವಕೋಪದಿಂದಲೇ ವೀರಭದ್ರನೆಂಬ ವೀರಮಾಹೇಶ್ವರನು ಜನ್ಮಿಸಿದನು. ಆ ವೀರಭದ್ರನು ಅನೇಕ ಸೈನ್ಯ (ಗಣ) ವನ್ನು ಕೂಡಲೆ ನಿರ್ಮಾಣ ಮಾಡಿದನು

೪. ಇದನ್ನು ನೋಡುನೋಡುತ್ತಿದ್ದಂತೆಯೇ, ಲೋಕಮಾತೆಯಾದ ಪಾರ್ವತಿಗೂ ಸಹ ಬಹು ಕೋಪ ಬರಲು ಆಗಲಾಮಾತೆಯು ಭದ್ರಕಾಳಿಯನ್ನು ತನ್ನ ದೇಹದಿಂದ ನಿರ್ಮಾಣಮಾಡಿದಳು. ಈ ಭದ್ರಕಾಳಿಯೂ, ವೀರಭದ್ರನೂ ಅವರ ದೊಡ್ಡ ಗಣಸೈನ್ಯವೂ ಸಹ ದಕ್ಷನ ಯಜ್ಞಶಾಲೆಗೆ ಬಂದು ಸೇರಿದರು.

೫. ಈಶ್ವರನೂ ಪಾರ್ವತಿಯೂ ಸಹ ಆ ಗುಂಪು ಕೂಡಿದ್ದ ಜಾಗಕ್ಕೆ ಬಂದರು. ಗಣಗಳಿಗೆ ಹೇಳಿದರು ;—ಯಜ್ಞಶಾಲೆಗೆ ನುಗ್ಗಿರೋ, ಯಜ್ಞವೇದಿಯನ್ನುರುಳಿಸಿರೋ, ಈ ಜನದ ಜಂಜಡವನ್ನು ಜಜ್ಜಿರೋ, ಹೊಡೆಯಿರೋ, ಈ ಯಜ್ಞವನ್ನು ಹಾಳು ಮಾಡಿಬಿಡಿರೋ, ಹೀಗೆಂದು ಆ ಅನಾದಿದಂಪತಿಗಳು ಆಜ್ಞಾಪಿಸಲು ಇದನ್ನು ಕೇಳಿ ಭದ್ರಕಾಳಿಯು ನುಗ್ಗಿ ತಾನೊಬ್ಬಳೇ ಆ ಯಜ್ಞವನ್ನು ಲೂಟಿಮಾಡಿಬಿಟ್ಟಳು.

೬. ಈರೀತಿ ಯಜ್ಞಶಾಲೆಯು ಪಾಳುಬೀಳುತ್ತಿರುವಲ್ಲಿ ಅಲ್ಲೊಂದು ದೇವರು ಕಾಣಿಸಿತು. ಅದರ ಹೆಸರು ಭದ್ರಕರ್ಣೇಶ್ವರನೆಂದು. ಯಜ್ಞವನ್ನು ಹಾಳುಮಾಡಿ

ವೀರಭದ್ರಂ ಮಹಾಭಾಗಂ ಭದ್ರಕಾಲೀಂ ತಥೈವ ಚ ।
ಕೌ ಭವಂತಾವಿಹ ಪ್ರಾಪ್ತೌ ಮಮ ಯಜ್ಞೋಪಘಾತಕೌ ॥ ೭ ॥

॥ ವೀರಭದ್ರ ಉವಾಚ ॥

ಕ್ರುದ್ಧೇನ ಶಂಕರೇಣಾವಾಂ ಭಾಗಸ್ಯಾಪರಿಕಲ್ಪನಾತ್ ।
ಯಜ್ಞವಿಧ್ವಂಸನಾರ್ಥಾಯ ಪ್ರೇಷಿತೌ ತೇ ಪರಂತಪ ॥ ೮ ॥

ಭದ್ರಕರ್ಣೇಶ್ವರಂ ಶರ್ವಂ ಗಚ್ಛ ಶೀಘ್ರಂ ಪ್ರಸಾದಯ ।

॥ ನಾರಾಯಣ ಉವಾಚ ॥

ವೀರಭದ್ರವಚಃ ಶ್ರುತ್ವಾ ಗತ್ವಾ ತುಷ್ಟಾವ ಶಂಕರಂ ॥ ೯ ॥

---

ಕೊಂಡ ದಕ್ಷನು ಅರಕ್ಷಿತನಾಗಿ ಶೂನ್ಯೇಕ್ಷಣದಿಂದ ಕೂಡಿ ಭದ್ರಕರ್ಣೇಶ್ವರನ ಕಡೆಗೆ ನೋಡುತ್ತಾ ಭದ್ರಕಾಳೀ ವೀರಭದ್ರರನ್ನು ಕುರಿತು ಹೀಗೆ ಕೇಳಿದನು :—

೭. ನೀವಿಬ್ಬರೂ ಯಾರಪ್ಪಾ? ನನ್ನ ಯಜ್ಞವನ್ನೇಕೆ ಹೀಗೆ ಹಾಳುಮಾಡಿ ಬಿಟ್ಟಿರಯ್ಯಾ? ನಿಮ್ಮನ್ನಾರು ಇಲ್ಲಿಗೆ ಕಳುಹಿಸಿದರಯ್ಯಾ? ಅಮ್ಮಾ! ನೀನಾರಮ್ಮಾ? ನೀನೇಕೆ ಇವನ ಜತೆಗೆ ಬಂದೆಯಮ್ಮಾ?

೮. ಈ ಮೇರೆ ಹೇಳಿದ ದಕ್ಷನ ಮಾತನ್ನು ಕೇಳಿ ವೀರಭದ್ರನು ಇಂತು ಉತ್ತರವನ್ನು ಕೊಟ್ಟನು :—

ದಕ್ಷಬ್ರಹ್ಮ! ಚೆನ್ನಾಗಿ ಕೇಳು. ನಮ್ಮ ವೃತ್ತಾಂತವನ್ನು ಹೇಳುತ್ತೇವೆ. ನೀನು ಯಾರಿಗೆ ಯಜ್ಞಭಾಗವನ್ನು ಕೊಡದೆ ಅವಮಾನಮಾಡಿದೆಯೋ ಅಂತಹ ಮಹಾನುಭಾವನಾದ ಈಶ್ವರನ ಕೋಪದಿಂದ ನಾನು ಹುಟ್ಟಿದೆನು. ನನ್ನ ಹೆಸರು ವೀರಭದ್ರ. ಇವಳು ನಿನ್ನಿಂದ ಅವಮಾನಿತಳಾದ ನಿನ್ನ ಮಗಳ ಕೋಪದಿಂದ ಹುಟ್ಟಿದ ಭದ್ರಕಾಳಿ! ಹೀಗೆ ನಾವಿಬ್ಬರೂ ಹುಟ್ಟಿ ನಿನ್ನ ಯಜ್ಞವನ್ನು ಧ್ವಂಸಮಾಡುವುದಕ್ಕಾಗಿ ಆ ಮಾತಾಪಿತೃಗಳಿಂದ ಇಲ್ಲಿಗೆ ಕಳುಹಿಸಲ್ಪಟ್ಟಿದ್ದೇವೆ.

೯. ಇಗೋ, ನೋಡು! ಇಲ್ಲಿ ಯಜ್ಞವಾಟದಲ್ಲಿ ಪ್ರತ್ಯಕ್ಷನಾಗಿರುವ ಸ್ವಾಮಿಗೆ ಭದ್ರಕರ್ಣೇಶ್ವರನೆಂದು ಹೆಸರು, ಇವನೇ ಪರಮೇಶ್ವರನು. ಹೋಗು, ಅವನ (ಶಿವನ) ಕಾಲಿಗೆ ಅಡ್ಡಬಿದ್ದು ಕೇಳಿಕೋ. ತಪ್ಪುಮಾಡಿದೆನೆಂದು ಬೇಡಿಕೋ. ಅವನ ಅನುಗ್ರಹವನ್ನು ಮೊದಲು ಸಂಪಾದಿಸು.

ಅಶ್ವಮೇಧಸಹಸ್ರಾಗ್ರ್ಯಂ ಫಲಂ ಲೇಭೇ ತ್ರಿಲೋಚನಾತ್ ।
ತ್ರಿಲೋಚನಸ್ತದಾ ತುಷ್ಟೋ ವೀರಭದ್ರಮಭಾಷತ ॥ ೧೦ ॥

ಯತ್ರಸ್ಥೇನ ತ್ವಯಾ ಯಜ್ಞೋ ದಕ್ಷಸ್ಯಾದ್ಯ ವಿನಾಶಿತಃ ।
ತತ್ರ ಸ್ಥಾನೇ ತು ಸತತಂ ಸಾನ್ನಿಧ್ಯಂ ತ್ವಂ ಕರಿಷ್ಯಸಿ ॥ ೧೧ ॥

ಪೂಜಾಂ ಚ ವಿಪುಲಾಂ ತತ್ರ ಪ್ರಾಪ್ಸ್ಯಸೇ ಮತ್ಪ್ರಸಾದಜಾಂ ।
ಯೇ ಚ ತ್ವಾಂ ಪೂಜಯಿಷ್ಯಂತಿ ವೀರಭದ್ರ ಗಣೇಶ್ವರ ॥ ೧೨ ॥

ತೇ ನಾಕಪೃಷ್ಠಂ ಯಾಸ್ಯಂತಿ ನಾತ್ರ ಕಾರ್ಯಾ ವಿಚಾರಣಾ ।
ದಕ್ಷೇಣ ಚ ಸಮಾಹೂತಾ ಭದ್ರಕರ್ಣೇಶ್ವರೇ ತ್ವಯಾ ॥ ೧೩ ॥

---

೧೦. ನಾರಾಯಣನು ಶೈಲೂಷನಿಗೆ ಹೇಳುತ್ತಾನೆ :—ಕೇಳಿದೆಯಾ ಶೈಲೂಷ! ಹೀಗೆಂದು ವೀರಭದ್ರನು ಹೇಳಿದೊಡನೆಯೇ ದಕ್ಷಬ್ರಹ್ಮನು ಈಶ್ವರನ ಬಳಿಗೆ ಹೋಗಿ ಅವನ ಬಳಿ ನಿಂತುಕೊಂಡು ಸ್ತೋತ್ರಮಾಡಿದನು.

೧೧. ದಕ್ಷಬ್ರಹ್ಮನು ಮಾಡಿದ ಸ್ತೋತ್ರಕ್ಕೆ ಸಂತುಷ್ಟನಾಗಿ ಈಶ್ವರನು, ನೀನು ನನ್ನನ್ನು ಸ್ತೋತ್ರಮಾಡಿದುದರಿಂದ ಒಂದು ಸಾವಿರ ಅಶ್ವಮೇಧಯಾಗ ಮಾಡಿದ ಫಲವನ್ನು ಹೊಂದು. ಹೀಗೆಂದು ವರವನ್ನು ಕೊಟ್ಟು, ಆ ತ್ರಿಲೋಚನನು ವೀರಭದ್ರನೊಡನೆ ಇಂತು ಹೇಳಿದನು :—ಎಲೈ ವೀರಭದ್ರನೇ! ನೀನೀಗ ಯಾವ ಸ್ಥಳದಲ್ಲಿ ನಿಂತು ದಕ್ಷಯಾಗವನ್ನು ನಾಶಗೊಳಿಸಿದೆಯೋ, ಅಂತಹ ಆ ಸ್ಥಳದಲ್ಲಿಯೇ ಸರ್ವದಾ ವಾಸಮಾಡಿಕೊಂಡು ಲೋಕಾನುಗ್ರಹಮಾಡು.

೧೨-೧೩. ನನ್ನ ಅನುಗ್ರಹದಿಂದುಂಟಾದ ಮಾಹಾತ್ಮ್ಯದಿಂದ ಕೂಡಿದವನಾದ ನಿನಗೆ ಈ ಸ್ಥಳದಲ್ಲಿ ವಿಶೇಷವಾದ ಪೂಜೋಪಚಾರಗಳು ಸಲ್ಲುವುವು. ಎಲೈ ಗಣಾಧ್ಯಕ್ಷನಾದ ವೀರಭದ್ರನೇ! ಯಾವ ಮನುಷ್ಯರು ನಿನ್ನನ್ನು ಈ ಸ್ಥಳದಲ್ಲಿ ನಿಶ್ಚಲವಾದ ಭಕ್ತಿಯಿಂದ ಪೂಜಿಸುವರೋ ಅಂತಹ ಮನುಷ್ಯರೆಲ್ಲರೂ ಖಂಡಿತವಾಗಿಯೂ ಸ್ವರ್ಗಕ್ಕೆ ಹೋಗುವರೆಂಬ ವಿಷಯದಲ್ಲಿ ಯಾವ ಸಂದೇಹವನ್ನೂ ಪಡಬೇಕಾಗಿಲ್ಲ.

**ಸರಸ್ವತೀ ಮಹಾಭಾಗಾ ಪ್ರವಿಷ್ಟಾ ಜಾಹ್ನವೀಜಲಂ ।**
**ಸಂಗಮೇ ಚ ತಯೋಃ ಸ್ನಾತ್ವಾ ಪೂಜಾಂ ಮಮ ಕರಿಷ್ಯತಿ ॥ ೧೪ ॥**

**ಯಃ ಪುಮಾನ್ಸ ಗಣೇಶತ್ವಂ ಮಮ ಪ್ರಾಪ್ಸ್ಯತ್ಯಸಂಶಯಂ ।**
**ಗಂಗಾದ್ವಾರಂ ಕುಶಾವರ್ತಂ ಬಿಲ್ವಕಂ ನೀಲಪರ್ವತಂ ॥ ೧೫ ॥**

**ತಥಾ ಕನಖಲಂ ತೀರ್ಥಂ ಸರ್ವಪಾಪಪ್ರಮೋಚನಂ ।**
**ಭವಿಷ್ಯತಿ ಮಹಾಭಾಗ ತಥೈವ ಚ ಮನೋಹರಂ ॥ ೧೬ ॥**

**ಪ್ರಜಾಪತೇರ್ಯಜ್ಞಭುವಂ ಸಮಾಸಾದ್ಯ ಯತಸ್ತತಃ ।**
**ಮೋಕ್ಷ್ಯತೇ ಪಾತಕಂ ಸರ್ವಂ ತ್ರಿದಿವಂ ಚ ಗಮಿಷ್ಯತಿ ॥ ೧೭ ॥**

**ಭೂಮಿಷ್ಠಮುದ್ಧೃತಾತ್ಪುಣ್ಯಂ ತಸ್ಮಾತ್ಪ್ರಸ್ರವಣೋದಕಂ ।**
**ತಸ್ಮಾದಪಿ ತಥಾ ಪುಣ್ಯಂ ಸಾರಸಂ ಪರಿಕೀರ್ತಿತಂ ।**
**ಸಾರಸಾನ್ನೈರ್ಝರಂ ಪುಣ್ಯಂ ನಾದೇಯಮಪಿ ನೈರ್ಝರಾತ್ ॥ ೧೮ ॥**

---

೧೪. ದಕ್ಷಯಾಗದ ನೆವದಿಂದ ನಿನ್ನಿಂದ ಆಹ್ವಾನಿಸಲ್ಪಟ್ಟ ಭದ್ರಕರ್ಣೇಶ್ವರನೂ ಗಂಗೆಯೊಳಗೆ ಪ್ರವೇಶಿಸಿರುವ ಸರಸ್ವತಿಯೂ ಇದೇ ಸ್ಥಳದಲ್ಲಿ ಸನ್ನಿಹಿತರಾಗಿರುವರು. ಈ ಗಂಗಾಸರಸ್ವತೀ ಸಂಗಮದಲ್ಲಿ ಯಾರು ಸ್ನಾನಮಾಡಿ, ದಕ್ಷವೀರಭದ್ರರಿಂದ ಪೂಜಿತನಾದ ಭದ್ರಕರ್ಣೇಶ್ವರನ (ನನ್ನ) ನ್ನು ಪೂಜೆಮಾಡುವರೋ ಅಂತಹ ಪುಣ್ಯಾತ್ಮರೂ ಸಹ ಪ್ರಮಥ ಗಣಾಧಿಪತಿಗಳಾಗಲು ಸಂದೇಹವಿಲ್ಲ.

೧೫-೧೭. ಅನೇಕ ಜನ್ಮಾಂತರ ಸುಕೃತದಿಂದ ಕೂಡಿ ಯಾವ ಪುಣ್ಯಶಾಲಿಗಳು ಈ ಹರಿದ್ವಾರವನ್ನೂ, ಕುಶಾವರ್ತ ಕ್ಷೇತ್ರವನ್ನೂ, ಬಿಲ್ವಕ ಕ್ಷೇತ್ರವನ್ನೂ, ನೀಲ ಪರ್ವತವನ್ನೂ ಮತ್ತು ಕನಖಲವೆಂಬ ಸರ್ವಪಾಪ ವಿಮೋಚಕವಾದ ತೀರ್ಥವನ್ನೂ, ಬಹು ಮನೋಹರವಾದ ಮಹಿಮೆಯಿಂದ ಕೂಡಿದ ಈ ದಕ್ಷಬ್ರಹ್ಮನ ಯಾಗಶಾಲೆಯನ್ನೂ ಒಮ್ಮೆಯಾದರೂ ಸಂದರ್ಶಿಸುವರೋ, ಅಂತಹ ಮಹನೀಯರು ತಮ್ಮಲ್ಲಿ ಉಳಿದಿದ್ದ ಅಲ್ಪಸ್ವಲ್ಪ ಪಾಪಶೇಷಗಳನ್ನೂ ಸಹ ಕಳೆದುಕೊಂಡು ಸ್ವರ್ಗಲೋಕಕ್ಕೆ ಪ್ರಯಾಣಮಾಡುತ್ತಾರೆ.

೧೮-೧೯. ಕೇಳಿರಿ, ಭಕ್ತರುಗಳಿರಾ! ಕೇಳೈ ಶೈಲೂಷ! ಈ ದಕ್ಷಯಾಗ ಪ್ರದೇಶದಲ್ಲಿ ಭೂಮಿಯಿಂದ ಚಿಮ್ಮಿ ಹರಿದು ಬಂದ ನೀರು ಒಂದು ಕೊಳವಾಗಿ ಕಾಣುತ್ತಲಿದೆ.

**ತಸ್ಮಾದಪಿ ಚ ಗಾಂಗೇಯಂ ತದಿಹಾಪಿ ವಿಶೇಷತಃ ।**
**ಸರ್ವತ್ರ ದುರ್ಲಭಾ ಗಂಗಾ ತ್ರಿಷು ಸ್ಥಾನೇಷು ದುರ್ಲಭಾ　　॥ ೧೯ ॥**

**ಗಂಗಾದ್ವಾರೇ ಪ್ರಯಾಗೇ ಚ ಗಂಗಾಸಾಗರಸಂಗಮೇ ।**
**ಗಂಗಾದ್ವಾರೇ ಕುಶಾವರ್ತೇ ಬಿಲ್ವಕೇ ನೀಲಪರ್ವತೇ　　॥ ೨೦ ॥**

**ಸ್ನಾತ್ವಾ ಕನಖಲೇ ತೀರ್ಥೇ ನ ಪುನರ್ಜನ್ಮಭಾಗ್ಭವೇತ್ ।**
**ತೀರ್ಥಪಂಚಕಮೇತದ್ಧಿ ಯತ್ರೈವ ಗಣನಾಯಕಃ　　॥ ೨೧ ॥**

**ತತ್ರ ಸನ್ನಿಹಿತೋ ಬ್ರಹ್ಮಾ ತತ್ರಾಹಂ ತತ್ರ ಕೇಶವಃ ।**
**ತತ್ರ ದೇವಗಣಾಃ ಸರ್ವೇ ಋಷಯಶ್ಚ ತಪೋಧನಾಃ　　॥ ೨೨ ॥**

---

ಇದು ಬ್ರಹ್ಮಕುಂಡವೆನಿಸಿಕೊಂಡು ಪ್ರಸಿದ್ಧವಾಗಲಿ. ಈ ಬ್ರಹ್ಮಕುಂಡ ಸರೋವರದಲ್ಲಿ ಸ್ನಾನಮಾಡಿದವರ ಪುಣ್ಯವು ಅಕ್ಷಯವಾಗುವುದು. ಈ ಕುಂಡದಿಂದ ಹೊರಟು ಒಂದು ಝರಿಯು ಹರಿಯುತ್ತಿರುವುದು. ಇದು ಸುಳಿ ಸುಳಿಯಾಗಿರುವುದರಿಂದ ಕುಶಾವರ್ತವೆನಿಸುವುದು. ಇದೂ ಗಂಗಾನದಿಯ ಒಂದು ಭಾಗವು. ಗಂಗಾನದಿಯ ಸ್ನಾನ ಸಿಕ್ಕುವುದೇ ದುರ್ಲಭ. ಅದರಲ್ಲಿಯೂ ಈ ಹರಿದ್ವಾರ, ಬ್ರಹ್ಮಕುಂಡ (ಬ್ರಹ್ಮಕಪಾಲ), ಕುಶಾವರ್ತ, ಈ ಮೂರು ಸ್ಥಳಗಳಲ್ಲಿ ಸ್ನಾನಪ್ರಾಪ್ತಿಯಾಗಬೇಕಾದರೆ ಅನೇಕ ಜನ್ಮಗಳ ಸುಕೃತವಿರಬೇಕು.

೨೦-೨೪. ಹರಿದ್ವಾರ (ಗಂಗಾದ್ವಾರ), ಪ್ರಯಾಗ (ಗಂಗಾ ಯಮುನಾ-ಸರಸ್ವತೀ ಸಂಗಮ), ಮತ್ತು ಗಂಗಾಸಾಗರ ಸಂಗಮ ಮತ್ತು ಮೇಲೆ ವಿವರಿಸಿದಂತೆ ಗಂಗಾದ್ವಾರವೆನಿಸಿದ ಕುಶಾವರ್ತತೀರ್ಥ, ನೀಲಪರ್ವತ, ಕನಖಲತೀರ್ಥಗಳಲ್ಲಾರು ಸ್ನಾನಮಾಡುವರೋ ಅವರಿಗೆ ಪುನರ್ಜನ್ಮವಿಲ್ಲ. ಅಂಥವರೆಲ್ಲರೂ ಮೋಕ್ಷಕ್ಕೆ ಅಧಿಕಾರಿಗಳಾಗುವರು. ಈ ಐದಕ್ಕೂ ತೀರ್ಥ (ಸಮಂತ) ಪಂಚಕವೆಂಬ ಹೆಸರು ಸುಪ್ರಸಿದ್ಧವಾಗಿದೆ. ಇಲ್ಲಿಯೇ ವೀರಭದ್ರನಾದ ನೀನೂ ವಾಸವಾಗಿದ್ದೀಯೆ. ಇಲ್ಲಿಯೇ ಬ್ರಹ್ಮನೂ (ದಕ್ಷಬ್ರಹ್ಮ) ವಾಸವಾಗಿದ್ದಾನೆ. ನಾನೂ (ಈಶ್ವರನೂ) ಸಹ ಇಲ್ಲಿಯೇ ಬಂದಿರುತ್ತೇನೆ. ನಾರಾಯಣನಂತೂ ಇಲ್ಲಿ (ಬದರಿಕಾಶ್ರಮದಲ್ಲಿ) ಇದ್ದೇ ಇರುತ್ತಾನೆ. ನಾವೆಲ್ಲರೂ ಕೂಡ ಸೇರಿ ನಲಿಯುವ ಈ ನೆಲದಲ್ಲಿ, ನಿಯಮಾನ್ವಿತರಾದ ತಪೋಧನರಾದ ಮಹರ್ಷಿಗಳನೇಕರು ತಪಸ್ಸುಮಾಡುತ್ತಲೇ ಇರುತ್ತಾರೆ. ವೀರಭದ್ರ! ನನ್ನ ಮಾತನ್ನು ಕೇಳಪ್ಪ. ಮಗು, ನಿನಗೆ ಈ ಜಾಗವನ್ನು ಸಂತೋಷದಿಂದ ವಾಸಕ್ಕಾಗಿ

**ತತ್ಸಮೀಪೇ ಚ ತೇ ಸ್ಥಾನಂ ತ್ರಿದಂ ದತ್ತಂ ಮಯಾ ತವ ।**
**ತತ್ರ ತ್ವಂ ಸತತಂ ವತ್ಸ ಲೋಕಾತ್ಪೂಜಾಮವಾಪ್ಸ್ಯಸಿ ॥ ೨೩ ॥**

**ಏವಮುಕ್ತ್ವಾ ಮಹಾತೇಜಾ ವೀರಭದ್ರಂ ಮಹೇಶ್ವರಃ ।**
**ಉವಾಚ ವಚನಂ ದೇವೋ ಭದ್ರಕಾಲೀಂ ಮಹೇಶ್ವರಃ ॥ ೨೪ ॥**

**॥ ಮಹೇಶ್ವರ ಉವಾಚ ॥**

**ನಮೋಽಸ್ತು ತೇ ಮಹಾಭಾಗೇ ವರದೇ ಕಾಮರೂಪಿಣಿ ।**
**ಅಷ್ಟಾದಶಭುಜೇ ಸ್ವಸ್ತಿ ಶೂಲಮುದ್ಗರಧಾರಿಣಿ ॥ ೨೫ ॥**

**ಪೀತಕೌಶೇಯವಸನೇ ಶಶಾಂಕಸದೃಶಾನನೇ ।**
**ನೀಲೋತ್ಪಲದಲಶ್ಯಾಮೇ ಗಜಕುಂಭೋಪಮಸ್ತನಿ ॥ ೨೬ ॥**

---

ಕೊಟ್ಟಿದ್ದೇನೆ. ನೀನು ಈ ಸ್ಥಾನದಲ್ಲಿಯೇ ಸುಖವಾಗಿ ವಾಸಮಾಡಿಕೊಂಡು, ಲೋಕ ಪೂಜ್ಯನಾಗಿರಪ್ಪ.

ಈ ಪ್ರಕಾರವಾಗಿ ಪರಶಿವನು ವೀರಭದ್ರಮೂರ್ತಿಗೆ ವರವನ್ನು ಕೊಟ್ಟು ಭದ್ರಕಾಳಿಯನ್ನು ಹತ್ತಿರಕ್ಕೆ ಕರೆದು ಆ ದೇವತೆಯೊಡನೆ ಹೀಗೆ ಹೇಳಿದನು:—

೨೫-೩೪. ಅಮ್ಮಾ, ಭದ್ರಕಾಳಿ! ನೀನೇನು ಸಾಮಾನ್ಯಳೆಂದು ತಿಳಿದುಕೊಳ್ಳ ಬೇಡಮ್ಮಾ! ನಿನ್ನ ಮಹಿಮೆ ಅಪಾರವಾದುದು. ಆದುದರಿಂದ ನಿನ್ನ ಮಹಿಮೆಗಳನ್ನು ಕುರಿತು ನಾನೂ ಸ್ತೋತ್ರಮಾಡಿ ನಿನಗೂ ವರಪ್ರದಾನ ಮಾಡುವೆನೆಂದು ಹೇಳಿ ಶಂಕರನು ಭದ್ರಕಾಳಿಯನ್ನು ಸ್ತೋತ್ರಮಾಡಿದ ಬಗೆಯದೆಂತೆನೆ:—

ಓ! ಕಾಮರೂಪಿಣಿಯೂ, ಮಹಾಭಾಗ್ಯಶಾಲಿನಿಯೂ, ವರಪ್ರದಾತಳೂ ಆದ ಓ, ಭದ್ರಕಾಳಿಯೇ! ನಿನಗೆ ನಮಸ್ಕಾರವನ್ನು ಮಾಡುತ್ತೇನೆ.

ಹದಿನೆಂಟು ಭುಜವುಳ್ಳ, ಶೂಲಮುದ್ಗರಗಳನ್ನು ಕೈಯಲ್ಲಿ ಹಿಡಿದಿರುವ, ಹೊಂಬಣ್ಣದ ಪಟ್ಟೆಸೀರೆಯನ್ನುಟ್ಟಿರುವ, ಚಂದ್ರನಂತೆ ಶುಭ್ರಮುಖಿಯಾದ, ನೀಲೋತ್ಪಲದಳದಂತೆ ಶ್ಯಾಮಲವರ್ಣದಿಂದ ವಿರಾಜಮಾನಳಾದ, ಗಜದಕುಂಭ ಸ್ಥಳದಂತೆ ಸ್ತನದ್ವಯವನ್ನುಳ್ಳ, ಸರ್ವಾಂಗ ಸುಂದರಿಯಾದ, ಸರ್ವಾಭರಣಭೂಷಿತ ಳಾದ, ಕೈಯಲ್ಲಿ ಕಮಂಡಲು (ಗಿಂಡಿ) ವನ್ನು ಹಿಡಿದುಕೊಂಡಿರುವ, ಶತ್ರುಬಲಗಳನ್ನು ನಿರ್ಮೂಲಮಾಡುವ ಶಕ್ತಿಯುಳ್ಳ, ನಿನಗೆ ನಮಸ್ಕಾರ.

ವರದೇ ಚಾರುಸರ್ವಾಂಗಿ ಸರ್ವಾಭರಣಭೂಷಿತೇ ।
ಕಮಂಡಲುಧರೇ ದೇವಿ ದೇವಾರಿಬಲನಾಶಿನಿ　　॥ ೨೭ ॥

ಅದಿತಿಶ್ಚ ದಿತಿಶ್ಚೈವ ವನಿತಾ ಸಿದ್ಧಿರೇವ ಚ ।
ರಾತ್ರಿರ್ನಿದ್ರಾ ಪ್ರಭಾ ಕಾಂತಿರ್ಬುದ್ಧಿರ್ಲಕ್ಷ್ಮೀಃ ಸರಸ್ವತೀ　　॥ ೨೮ ॥

ಧೃತಿಃ ಕೀರ್ತಿಃ ಸ್ವಧಾ ಸ್ವಾಹಾ ತ್ವಮೇವ ವರವರ್ಣಿನೀ ।
ತ್ವಾಂ ಜನಾಃ ಪೂಜಯಿಷ್ಯಂತಿ ಸರ್ವಕಾಮಪ್ರದಾಂ ಶುಭಾಂ　　॥ ೨೯ ॥

ನವಮ್ಯಾಂ ಶುಕ್ಲಪಕ್ಷಸ್ಯ ಲೋಕಾತ್ಪೂಜಾಮವಾಪ್ಸ್ಯಸಿ ।
ನವಮ್ಯಾಂ ಪೂಜಯಿಷ್ಯಂತಿ ಯೇ ತ್ವಾಂ ಸಮ್ಯಗುಪೋಷಿತಾಃ　　॥ ೩೦ ॥

ತೇಷಾಂ ತ್ವಂ ಕಾಮ್ಯದಾ ಸೌಮ್ಯೇ ಭವಿಷ್ಯಸಿ ನ ಸಂಶಯಃ ।
ಕಂದರೇಷು ಚ ಶೈಲಾನಾಂ ವನಾನಾಂ ಗಹನೇಷು ಚ　　॥ ೩೧ ॥

---

ತಾಯೀ! ಅದಿತಿಯೂ ನೀನೇ, ದಿತಿಯೂ ನೀನೇ, ವನಿತೆ, ಸಿದ್ಧಿ, ರಾತ್ರಿ, ಹಗಲು, ಪ್ರಭೆ, ಕಾಂತಿ, ಬುದ್ಧಿ, ಲಕ್ಷ್ಮೀ, ಸರಸ್ವತೀ, ಧೃತಿ, ಕೀರ್ತಿ, ಸ್ವಧಾ, ಸ್ವಾಹಾ ಮುಂತಾದ ಸ್ವರೂಪಗಳೆಲ್ಲವೂ ನೀನೇ ಆಗಿರುತ್ತೀ. ನೀನು ಸರ್ವಾಂತರ್ಯಾಮಿನಿ, ಅಮ್ಮ! ಸಕಲೇಷ್ಟಪ್ರದಾಯಕಳಾದ ಪರಮಮಂಗಳಾಂಗಿಯಾದ ನಿನ್ನನ್ನು ಎಲ್ಲ ಜನರೂ ಎಲ್ಲಾ ಕಾಲಗಳಲ್ಲಿಯೂ ಪೂಜಿಸುತ್ತಿರುವರು ನಿಜ. ಆದರೆ ನಿನ್ನನ್ನು ವಿಶೇಷವಾಗಿ ಯಾವ ಮಹನೀಯರು, ಪ್ರತಿ ಶುಕ್ಲಪಕ್ಷದ ನವಮಿಯ ದಿವಸದಲ್ಲಿ ಉಪವಾಸದಿಂದಿದ್ದು ಪ್ರದೋಷಕಾಲದಲ್ಲಿ ಭಕ್ತಿಯಿಂದ ಪೂಜಿಸುತ್ತಿರುವರೋ, ಅವರಿಗೆ ನೀನು ಪ್ರಸನ್ನಳಾಗಿ ಅವರು ಕೇಳಿಕೊಳ್ಳುವ ಮನೋಗತವಾದ ಕಾಮ್ಯಫಲಗಳನ್ನೆಲ್ಲಾ ಹಿಂದೆ ಮುಂದೆ ನೋಡದೆ ಕೊಟ್ಟುಬಿಡು.

ಬೆಟ್ಟದ ಬುಡಗಳಲ್ಲಿ ಘೋರಾರಣ್ಯಗಳಲ್ಲಿ ನೀನು ಆನಂದದಿಂದ ವಿಹಾರಮಾಡಿಕೊಂಡಿರು. ಯಾರು ಪೂಜೆಗೆ ಕರೆಯುವರೋ ಅವರ ಬಳಿಗೆ ಹೋಗಿ ವರವನ್ನು ಕೊಡುತ್ತಾ ಇರು. ನನ್ನ (ಈಶ್ವರನ) ಮಹಿಮೆಯನ್ನು ಯಾರು ಅರಿತುಕೊಂಡು ನಿನಗೆ ಈಗ ಕೊಟ್ಟ ವರದ ಗುಟ್ಟನ್ನು ತಿಳಿದುಕೊಂಡು, ನನ್ನನ್ನೂ, ನಿನ್ನನ್ನೂ ಮನಸ್ಸಿನಲ್ಲಿಯೇ ಪೂಜಿಸುವರೋ ಅಂತಹ ಪುಣ್ಯಶಾಲಿಗಳಿಗೆ ಈ ಭೂಲೋಕ ಪರಲೋಕಗಳಲ್ಲಿ ಹಾಡಿಹಾಡಿದುದೆಲ್ಲಾ ರಾಗಗಳಾಗುವಂತೆ, ಹೇಳಿಹೇಳಿದ ಕೇಳಿ ಕೇಳಿದ ಮಾತು

ರಂಸ್ಯಸೇ ತ್ವಂ ವಿಶಾಲಾಕ್ಷಿ ತದಾ ಪೂಜಾಮವಾಪ್ಸ್ಯಸಿ।
ಯೇ ಚ ತ್ವಾಂ ಮತ್ಪ್ರಭಾವಜ್ಞಾಃ ಪೂಜಯಿಷ್ಯಂತಿ ಮಾನವಾಃ ॥ ೩೨ ॥

ನ ತೇಷಾಂ ದುರ್ಲಭಂ ಕಿಂಚಿದಿಹ ಲೋಕೇ ಪರತ್ರ ಚ ।
ಯೇ ಚೇದಂ ಮತ್ಕೃತಂ ಸ್ತೋತ್ರಮಭಿಧಾಸ್ಯಂತಿ ಭಕ್ತಿತಃ ॥ ೩೩ ॥

ತೇ ಸರ್ವೇ ಭಯನಿರ್ಮುಕ್ತಾ ಭವಿಷ್ಯಂತಿ ನ ಸಂಶಯಃ ।

॥ ನಾರಾಯಣ ಉವಾಚ ॥

ಏತಾವದುಕ್ತ್ವಾವಚನಂ ತತ್ರೈವಾಂತರಧೀಯತ ॥ ೩೪ ॥

ದಕ್ಷೋಽಪಿ ಚ ವರಂ ಲಬ್ಧ್ವಾ ಮುದಂ ಲೇಭೇ ತ್ರಿಲೋಚನಾತ್ ॥ ೩೫ ॥

ಏವಂ ಪ್ರಭಾವೋ ವರದಃ ಸ ದೇವೋ
ಭಕ್ತಾನುಕಂಪೀ ಜಗತೋ ನಿವಾಸಃ ।

---

ಗಳೆಲ್ಲವೂ ನಡೆದುಹೋಗುವುವು. ಮುಖ್ಯವಾಗಿ ಮೂರು ಲೋಕದಲ್ಲೂ ಅವರ ಮಾತಿಗೆ ಎದುರೇ ಇಲ್ಲವೆಂದು ತಿಳಿದುಕೊ. ಅಮ್ಮಾ! ಭದ್ರಕಾಳಿ! ನಾನು ಮಾಡಿದ ಈ ನಿನ್ನ ಸ್ತೋತ್ರವನ್ನಾರು ಭಕ್ತಿಯಿಂದ ಪಾರಾಯಣಮಾಡುವರೋ ಅವರಿಗೆ ಯಾವ ಭಯವೂ ಇಲ್ಲವೆಂದು ಭಾವಿಸು. ಈ ವಿಷಯದಲ್ಲಿ ಸಂಶಯವಿಲ್ಲವೆಂದು ಭದ್ರಕಾಳಿಯೊಡನೆ ಈಶ್ವರನು ಹೇಳಿದ ಈ ಮಾತನ್ನು ನಾರಾಯಣನು ಶೈಲೂಷನ ಸಂಗಡ ವಿವರಿಸಿ ಹೇಳಿ ಮತ್ತಿಂತೆಂದನು :—

೩೫-೩೬. ಶೈಲೂಷ! ಈ ರೀತಿ ಭದ್ರಕಾಳಿಗೆ ವರಪ್ರದಾನಮಾಡಿದ ಕೂಡಲೆ ಆ ಕಪಾಲಪಾಣಿಯು ಕಣ್ಣುಮುಚ್ಚುವುದರಲ್ಲಿ ಕಣ್ಮರೆಯಾಗಿ ಹೊರಟುಹೋದನು. ಈ ಪ್ರಕಾರವಾಗಿ ಬಲು ಜಂಭಗಾರನಾಗಿದ್ದ ದಕ್ಷನೂ ಸಹ ಶಿವನ ಮುಂದೆ ತನ್ನ ತಪ್ಪನ್ನೊಪ್ಪಿ ತಿದ್ದಿಕೊಂಡು ಆ ಮಹಾನುಭಾವನಿಂದ ವರವನ್ನು ಪಡೆದನು. ಇತ್ಯಾದಿಯಾದ ಮಹಿಮಾವಿಶೇಷಗಳಿಂದ ಕೂಡಿದ ಜಗನ್ನಿವಾಸನಾದ ಭಕ್ತಾನುಕಂಪಿಯೂ, ವರದನೂ, ಅಪವರ್ಗದಾಯಕನೂ ಆದ, ಅಪರ್ಣಾಪತಿಯ ಸಮಗ್ರವಾದ ಮಹಿಮೆ

ಕಸ್ಯಾಸ್ಯ ವಕ್ತುಂ ನೃಪವರ್ಯ ತಸ್ಯ
ಗುಣಾನ್ಪ್ರವಕ್ತುಂ ಸಕಲಾ ಹಿ ಶಕ್ತಿಃ ॥ ೩೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂ ಪ್ರತಿ ನಾರಾಯನ ವಾಕ್ಯೇ
ದಕ್ಷಯಜ್ಞವಿಧ್ವಂಸನೋ ನಾಮ ಪಂಚತ್ರಿಂಶದುತ್ತರ
ದ್ವಿಶತತಮೋಽಧ್ಯಾಯಃ.

---

(ಗುಣ) ಗಳನ್ನು ವರ್ಣಿಸಲು ಯಾವನಿಗೆ ತಾನೇ ಶಕ್ತಿಯಿದ್ದೀತು? ಇಂತೆಂದು ನಾರಾಯನರು ಶೈಲೂಷನಿಗೆ ಹೇಳಿದರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ದಕ್ಷಯಜ್ಞಧ್ವಂಸನ, ಶಿವವರಪ್ರದಾನಗಳೆಂಬ
ಹೆಸರಿನ ಇನ್ನೂರಮೂವತ್ತೈದನೆಯ ಅಧ್ಯಾಯ
ಮುಗಿದುದು.

---



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಷಟ್ತ್ರಿಂಶದುತ್ತರ ದ್ವಿಶತತಮೋಽಧ್ಯಾಯಃ ॥

॥ ನಾರಾಯಣ ಉವಾಚ ॥

**ಪ್ರಭಾವಮಪರಂ ತಸ್ಯ ಶೃಣು ದೇವಸ್ಯ ಶೂಲಿನಃ ।**
**ಯಥಾ ವಿನೋಕ್ಷಿತಸ್ತೇನ ಶ್ವೇತೋ ಮೃತ್ಯುವಶಂ ಗತಃ ॥೧॥**

**ಶ್ವೇತೋ ನಾಮ ಮಹಾತೇಜಾ ಋಷಿಃ ಪರಮಧಾರ್ಮಿಕಃ ।**
**ಪೂಜಯಾಮಾಸ ಸತತಂ ಲಿಂಗಂ ತ್ರಿಪುರಘಾತಿನಃ ॥ ೨ ॥**

---

### ಇನ್ನೂರಮೂವತ್ತಾರನೆಯ ಅಧ್ಯಾಯ.

೧. ನಾರಾಯಣನು ಪುನಃ ಶೈಲೂಷನನ್ನು ಕುರಿತು ಹೇಳುತ್ತಾನೆ :—
ಆ ಪರಮೇಶ್ವರನ ಇನ್ನೊಂದು ಪ್ರಭಾವವನ್ನು ಹೇಳುತ್ತೇನೆ, ಕೇಳು. ಶ್ವೇತನೆಂಬ ಋಷಿವರ್ಯನು ಸತ್ತುಹೋಗಿದ್ದವನು, ಈ ಪರಮೇಶ್ವರನ ಅಪಾರಕೃಪೆಯಿಂದ ಅದೆಂತು ಪುನಃ ಬದುಕಿಕೊಂಡನೆಂಬ ವೃತ್ತಾಂತವೇ ನಾನೀಗ ಹೇಳುವ ಸಂಗತಿ.

೨. ಮಹಾಧರ್ಮಾತ್ಮನಾದ ಶ್ವೇತನೆಂಬ ಅತ್ಯಂತ ತೇಜಸ್ವಿಯಾದ ಬ್ರಾಹ್ಮಣನೊಬ್ಬನಿದ್ದನು. ಅವನು ಪ್ರತಿದಿನವೂ ತಪ್ಪದೆ ಈಶ್ವರಲಿಂಗವನ್ನು ಪೂಜೆಮಾಡುತ್ತಲಿದ್ದನು.

ತಸ್ಯ ಪೂಜಾಪ್ರಸಕ್ತಸ್ಯ ಕದಾಚಿತ್ಪೃಥಿವೀಪತೇ ।
ಆಜಗಾಮ ತಮುದ್ದೇಶಂ ಕಾಲಃ ಪರಮದಾರುಣಃ ॥ ೩ ॥

ರಕ್ತವೃತ್ತತ್ರಿನಯನಃ ಸರ್ಪವೃಶ್ಚಿಕರೋಮವಾನ್ ।
ದಂಷ್ಟ್ರಾಕರಾಲೋ ವಿಕಟಃ ಚೂರ್ಣಿತಾಂಜನಸಪ್ರಭಃ ॥ ೪ ॥

ರಕ್ತವಾಸಾ ಮಹಾಕಾಯಃ ಸರ್ಪಾಭರಣಭೂಷಿತಃ ।
ಪಾಶಹಸ್ತಸ್ತಥಾಽಭ್ಯೇತ್ಯ ಶ್ವೇತೇ ಪಾಶಮಥಾಸೃಜತ್ ॥ ೫ ॥

ಕಂಠಾರ್ಪಿತೇನ ಪಾಶೇನ ಶ್ವೇತಃ ಕಾಲಮಥಾಬ್ರವೀತ್ ।
ಕ್ಷಣಮಾತ್ರಂ ಪ್ರತೀಕ್ಷಸ್ವ ಮಮ ತ್ರಿಭುವನಾಂತಕ ॥ ೬ ॥

---

೩. ಎಲೈ ಭೂಪತಿಯೇ! ಕೇಳು. ಶ್ವೇತನು ಹೀಗೆಯೇ ದಿನದಿನವೂ ಪೂಜೆ ಮಾಡುತ್ತಲಿರುವಲ್ಲಿ ಒಂದಾನೊಂದು ದಿವಸ, ಅವನಿದ್ದ ಮನೆಗೆ ಮಹಾಭಯಂಕರನಾದ ಯಮಧರ್ಮರಾಯನು ಬಂದನು.

೪. ಆ ಯಮಧರ್ಮರಾಯನು ಹೇಗಿದ್ದನೆಂಬುದನ್ನು ಸ್ವಲ್ಪ ವಿವರಿಸುತ್ತೇನೆ, ಕೇಳು. ಅವನಿಗೆ ಮೂರು ಕಣ್ಣುಗಳಿದ್ದುವು. ಅವು ಕೆಂಪಗೆ ಕೆಂಡದ ಮಂಡಲದಂತೆ, ಗಿರ್ರನೆ ತಿರುಗುತ್ತಿದ್ದುವು. ಅವನ ಮೈಮೇಲಿನ ಕೂದಲುಗಳೆಲ್ಲವೂ ಬರೀ ಹಾವುಗಳಾಗಿಯೂ, ಚೇಳುಗಳಾಗಿಯೂ ಇದ್ದುವು. ಅವನನ್ನು ನೋಡಿದರೆ ಭಯಂಕರವಾಗಿ ಕಾಣುತ್ತಲಿದ್ದನು ಅವನ ಹಲ್ಲುಗಳು ಕರಾಳವಾಗಿ ತೋರುತ್ತಿದ್ದುವು. ಅರೆದ ಕಾಡಿಗೆಯ ಬೆಟ್ಟದಂತೆ ಅವನ ಮುಖವು ಪ್ರಕಾಶಿಸುತ್ತಿದ್ದಿತು.

೫. ಅವನದು ಬಹು ದೊಡ್ಡ ಆಕಾರ. ಅವನು ಕೆಂಪು ಬಟ್ಟೆಯನ್ನು ಧರಿಸಿದ್ದನು. ಸರ್ಪಗಳನ್ನು ಮೈಕೈಗಳಿಗೆಲ್ಲಾ ಸುತ್ತಿಕೊಂಡಿದ್ದನು. ಕೈಯಲ್ಲಿ ಒಂದು ಹಗ್ಗ (ಕಾಲಪಾಶ) ವನ್ನು ಹಿಡಿದಿದ್ದನು. ಈ ವಿಧವಾದ ಆಕೃತಿಯಿಂದ ಕಾಣಿಸಿಕೊಂಡ ಆ ಯಮನು ಶ್ವೇತಮಹರ್ಷಿಯ ಮುಂದೆ ಬಂದು ನಿಂತು ತನ್ನ ಕೈಯಲ್ಲಿದ್ದ ಕಾಲಪಾಶವನ್ನು ಅವನ ಕತ್ತಿಗೆ ಹಾಕಿ ಎಳೆದನು.

೬. ಹೀಗೆ ತನ್ನ ಕತ್ತಿಗೆ ಹಗ್ಗವನ್ನು ಹಾಕಿ ಎಳೆದುದನ್ನು ನೋಡಿ ಆ ಶ್ವೇತ ಋಷಿಯು ಇವನು ತನ್ನನ್ನೆಳೆದುಕೊಂಡು ಹೋಗಲು ಬಂದಿರುವ ಮೃತ್ಯುದೇವತೆಯೇ ಎಂದು ನಿಶ್ಚಯಮಾಡಿಕೊಂಡವನಾದಾಗ್ಯೂ ಆ ಯಮನನ್ನು ಕುರಿತಿಂತೆಂದೆನು :—

**ನಿವರ್ತಯಾಮ್ಯಹಂ ಯಾವತ್ಪೂಜನಂ ಮನ್ಮಥದ್ವಿಷಃ ।**
**ತಮಬ್ರವೀತ್ತದಾ ಕಾಲಃ ಪ್ರಹಸನ್ವಸುಧಾಧಿಪ** ॥ ೭ ॥

**ನ ಶ್ರುತಂ ತು ತ್ವಯಾ ಮನ್ಯೇ ವೃದ್ಧಾನಾಂ ಶ್ವೇತ ಜಲ್ಪಿತಂ ।**
**ಶ್ವಃ ಕಾರ್ಯಮದ್ಯ ಕುರ್ವೀತ ಪೂರ್ವಾಹ್ಣೇ ಚಾಪರಾಹ್ಣಿಕಂ** ॥ ೮ ॥

**ನ ಹಿ ಪ್ರತೀಕ್ಷತೇ ಮೃತ್ಯುಃ ಕೃತಂ ವಾಸ್ಯಾಸ್ನ ವಾ ಕೃತಂ ।**
**ಗರ್ಭೇ ವಾಪ್ಯಥ ಬಾಲ್ಯೇ ವಾ ಯೌವನೇ ವಾರ್ಧಕೇಽಪಿ ವಾ** ॥ ೯ ॥

---

ತ್ರಿಭುವನವನ್ನೂ ನಾಶಗೊಳಿಸುವ ಶಕ್ತಿಯುಳ್ಳ ಶಮನ (ಯಮ) ನೇ! ಒಂದು ಕ್ಷಣ ಮಾತ್ರ ವಿಶ್ರಮಿಸಿಕೊಂಡು ಕುಳಿತು ನನ್ನ ಆಗಮನವನ್ನು ನಿರೀಕ್ಷಿಸುತ್ತಿರಯ್ಯಾ!

೭. ನಾನಿನ್ನೂ ಶಿವಲಿಂಗವನ್ನು ಪೂಜಿಸಿಲ್ಲ. ನಾನು ಲಿಂಗಪೂಜೆಯನ್ನು ಮಾಡಿಕೊಂಡು ಬಂದ ಬಳಿಕ ನನ್ನನ್ನು ಕರೆದುಕೊಂಡು ಹೋಗುವಿಯಂತೆ. ಎಂದು ಯಮನೊಡನೆ ಹೇಳಲು, ಆತನಿಗೆ ನಗು ಬಂದು ಶ್ವೇತನನ್ನು ಕುರಿತು ಈ ಮಾತನ್ನಾಡಿದನು.

೮. ಎಲೈ ಅವಿವೇಕಿಯಾದ ಶ್ವೇತಋಷಿಯೇ! ಹಿರಿಯರು ಹೇಳುವ ಮಾತುಗಳನ್ನು ನೀನಿನ್ನೂ ಕೇಳಿಲ್ಲವೆಂದು ನನಗೆ ಕಾಣಿಸುತ್ತಲಿದೆ. ಆ ಮಾತನ್ನೀಗ ಹೇಳುವೆನು, ಕೇಳು. ನಾಳೆಮಾಡುವ ಕೆಲಸವನ್ನಿಂದೇ ಮಾಡು. ಸಂಜೆಮಾಡಬೇಕಾದ ಕೆಲಸವನ್ನು ಹಗಲಿನಲ್ಲಿಯೇ ಮಾಡಿಬಿಡು.

೯. ಈ ಮನುಷ್ಯನು ಇಷ್ಟು ಕೆಲಸವನ್ನು ಮಾಡಿದ್ದಾನೆ. ಇನ್ನಿಷ್ಟು ಕೆಲಸ ಬಾಕಿ ಉಳಿದಿದೆ. ಈ ಕೆಲಸ ಮುಗಿಯುವವರಿಗೂ ಕಾದಿದ್ದು ಇವನನ್ನು ಕರೆದುಕೊಂಡು ಹೋಗೋಣವೆಂದು ಮೃತ್ಯುದೇವತೆಯು (ನಾನು)ಕಾದು ಕುಳಿತಿರುವನೇನು? ಹೊಟ್ಟೆಯ ಒಳಗಿದ್ದಾಗಲೋ ಅಥವಾ ಮಗುವಾಗಿದ್ದಾಗಲೋ, ಪ್ರಾಯದಲ್ಲೋ, ಮುಪ್ಪಿನಲ್ಲೋ ಹೇಗೋ ಎಂದೋ ಒಂದು ದಿನ ಅವರವರ ಕರ್ಮಾನುಸಾರವಾಗಿ ಆಯುಸ್ಸು ಮುಗಿಯಿತೆಂದ ಕೂಡಲೆ ಒಂದೇ ನಿಮಿಷವೂ ಸಾವಕಾಶಮಾಡದೆ ನಾನು (ಯಮನು) ಅಂಥವನನ್ನು ಕರೆದುಕೊಂಡು ಹೊರಟುಹೋಗುತ್ತೇನೆ.

ಆಯುಷ್ಯೇ ಕರ್ಮಣಿ ಕ್ಷೀಣೇ ಲೋಕೋಽಯಂ ನೀಯತೇ ಮಯಾ ।
ನೌಷಧಾನಿ ನ ಮಂತ್ರಾಶ್ಚ ನ ಹೋಮೋ ನ ಪುನರ್ಜಪಃ ॥ ೧೦ ॥

ತ್ರಾಯಂತಿ ಮೃತ್ಯುನೋಪೇತಂ ಜರಯಾ ವಾಪಿ ಮಾನವಂ ।
ಬಹೂನೀಂದ್ರಸಹಸ್ರಾಣಿ ಪಿತಾಮಹಶತಾನಿ ಚ ॥ ೧೧ ॥

ಮಯಾ ನೀತಾನಿ ಕರ್ತವ್ಯೋ ನಾತ್ರ ಮನ್ಯುಸ್ತ್ವಯಾಽನಘ ।
ವಿಫಲ್ನೇ ಪೂಜನಂ ಯಸ್ಯ ಮಹಾದೇವಸ್ಯ ಶೂಲಿನಃ ॥ ೧೨ ॥

ದೇಹನ್ಯಾಸಂ ಸ ಬಹುಧಾ ಮಯಾ ನ್ಯೈ ಶ್ವೇತ ಕಾರಿತಃ ।
ಸ್ವಯಂ ಪ್ರಭುರ್ನ ಚೈವಾಹಂ ಕರ್ಮಾಯತ್ತಾ ಮತಿರ್ಮಮ ॥ ೧೩ ॥

---

೧೦. ಈ ಮೇರೆ ಆಯುಸ್ಸು ಮುಗಿದವನನ್ನು ನಾನು (ಕಾಲ ಮೃತ್ಯುವು) ಕರೆಯಲು ಬಂದಾಗ ಆ ಮನುಷ್ಯನಿಗೆ ಯಾವ ಔಷಧವನ್ನು ಕೊಟ್ಟರೂ ಕೆಂದುವುದಿಲ್ಲ. ಯಾವ ಮಂತ್ರವೂ ಪ್ರಯೋಜನವಾಗುವುದಿಲ್ಲ ಹೋಮಮಾಡಿದರೇನು? ಜಪಮಾಡಿದರೇನು? ಅವನ ಮುಂದೆ ಕಾಲಪುರುಷನು ನಿಂತಿರುವಾಗ ಯಾವುವ ಕೆಲಸಕ್ಕೆ ಬರುವುದಿಲ್ಲ.

೧೧-೧೩. ಮುಪ್ಪಿನಿಂದ ಮುದುಕನಾದ ಮೇಲೆ ಅವನು ನನ್ನ ಅಧೀನಕ್ಕೆ ಎಂದಾದರೊಂದು ದಿವಸ ಬರಲೇಬೇಕು. ಅವನನ್ನು ಯಾರೂ ಬದುಕಿಸಿಕೊಳ್ಳಲಾರರು. ಎಷ್ಟೋ ಮಂದಿ ಸಾವಿರಾರು ಇಂದ್ರರನ್ನೂ ನೂರಾರು ಮಂದಿ ಬ್ರಹ್ಮರನ್ನೂ ನಾನಿದುವರಿಗೆ ನನ್ನ ಹಗ್ಗದಿಂದ ಕಟ್ಟಿ ಹೊತ್ತುಕೊಂಡು, ಯಾರನ್ನೂ ಹೇಳದೆ ಕೇಳದೆ ಹೊರಟುಹೋಗಿರುವಾಗ ನಿನ್ನನ್ನು ಈಗ ಅವಕಾಶಕೊಟ್ಟು ಬಿಟ್ಟು ಹೋಗುವನೆಂದು ತಿಳಿದಿದೀಯೇನಯ್ಯಾ ಶ್ವೇತ, ಆ ಮಾತನ್ನು ನನ್ನ ಮುಂದೆ ಕಟ್ಟಿಡು. ನನ್ನ ಮೇಲೆ ಸುಮ್ಮನೆ ಕೋಪಮಾಡಿಕೊಳ್ಳಬೇಡವಯ್ಯಾ, ನೀನು ಈಗ ಯಾವ ಈಶ್ವರನನ್ನು ಪೂಜಿಸಿಕೊಂಡು ಬೇಗ ಬಂದು ಬಿಡುತ್ತೇನೆಂದು ಹೇಳಿರುವಿಯೋ ಆ ಶೂಲಿಯು ದೇಹವನ್ನೇ ಎಷ್ಟೋ ಸಾರಿ ನಾನು ನನ್ನ ಅಧೀನಮಾಡಿಕೊಂಡಿದ್ದೇನೆ. ನಾನೇನು ಸ್ವತಂತ್ರನಾದ ದೊರೆಯಲ್ಲ. ನನ್ನ ಬುದ್ಧಿ ಕರ್ಮಾಧೀನವಾದುದು.

**ಕರ್ಮಣಾಂ ಹಿ ತಥಾ ನಾಶಂ ನಾಸ್ತಿ ಭೂತಸ್ಯ ಕಸ್ಯಚಿತ್ ।**
**ಕರ್ಮಮಾರ್ಗಾನುಸಾರೇಣ ಧಾತ್ರಾsಹಂ ಸಂಪ್ರಚೋದಿತಃ ॥ ೧೪ ॥**

**ನಯಾಮಿ ಸರ್ವಮಾಕ್ರಮ್ಯ ತ್ರೈಲೋಕ್ಯಂ ಸಚರಾಚರಂ ।**
**ಏವಮುಕ್ತಸ್ತು ಕಾಲೇನ ನೀಯಮಾನಸ್ತ್ರಿಲೋಚನಂ ॥ ೧೫ ॥**

**ಜಗಾಮ ಸರ್ವಭಾವೇನ ಶರಣಂ ಭಕ್ತವತ್ಸಲಂ ।**
**ಶ್ವೇತೇ ತು ತರಣಂ ಪ್ರಾಪ್ತೇ ಲಿಂಗಸ್ಯ ತ್ರಿಪುರಾಂತಕಃ ॥ ೧೬ ॥**

**ಭೂತಭವ್ಯಭವಿಷ್ಯದ್ಭಿಃ ಪ್ರಾದುರ್ಭಾವೈಸ್ತು ಶಾರ್ಙ್ಗಿಣಃ ।**
**ಆತ್ಮನಃ ಕವಚಂ ಕೃತ್ವಾ ಕೃತರಕ್ಷೋ ಮಹೇಶ್ವರಃ ॥ ೧೭ ॥**

೧೪. ಪ್ರಾಣಿಗಳು ಮಾಡುವ ಕರ್ಮ ಮಾತ್ರ ಎಂದೆಂದಿಗೂ ನಾಶವಾಗುವುದಿಲ್ಲ. ಅವರವರ ಕರ್ಮಾನುಸಾರವಾಗಿ ಜನನಮರಣಗಳನ್ನು ಕಲ್ಪಿಸಿ (ನಿರ್ಮಿಸಿ)ರುವ ಬ್ರಹ್ಮನ ಅಪ್ಪಣೆ (ಹಣೆಯ ಬರಹ-ವಿಧಿಲಿಖಿತ) ಯನ್ನನುಸರಿಸಿ ನಾನು ಎಲ್ಲಾ ಕೆಲಸವನ್ನೂ ಮಾಡುತ್ತಲಿರುವೆನು.

೧೫. ಪರಬ್ರಹ್ಮನ ಆಜ್ಞಾನುಸಾರವಾಗಿಯೇ ನಾನು ಸಚರಾಚರ ಪ್ರಪಂಚವನ್ನೂ ಆಕ್ರಮಿಸಿ ಹಗ್ಗದಿಂದ ಕಟ್ಟಿ ಕಟ್ಟಿ ಎಳೆದುಕೊಂಡು ಹೋಗುತ್ತಲೇ ಇರುತ್ತೇನೆ. ಹೀಗೆ ಯಮನು ಮಾತನಾಡುತ್ತಲಿದ್ದ ಹಾಗೆಯೇ ಆ ಶ್ವೇತನ ಪ್ರಾಣವನ್ನು ಎಳೆದು (ತೆಗೆದು) ಕೊಂಡೇಬಿಟ್ಟನು.

೧೬. ಮೃತ್ಯುವಶನಾದ ಆ ಶ್ವೇತಋಷಿಯು ಪರಮೇಶ್ವರನ ಪ್ರತ್ಯಕ್ಷಪೂಜೆಯನ್ನು ಮಾಡಲವಕಾಶವಿಲ್ಲದೆ ಪ್ರಾಣಹೋದುದಕ್ಕಾಗಿ ಚಿಂತಿಸುತ್ತಾ, ತನ್ನ ಸಕಲೇಂದ್ರಿಯಗಳನ್ನೂ, ಮನಸ್ಸನ್ನೂ, ಸಕಲ ಮನೋಭಾವಗಳನ್ನೂ ಭಕ್ತವತ್ಸಲನಾದ ಪರಮೇಶ್ವರನಲ್ಲಿ ಏಕಾಗ್ರ್ಯದಿಂದ ಸಿಲ್ಲಿಸಿ ಅವನನ್ನೇ ಶರಣಾಗತನಾಗಿ ಪ್ರಾರ್ಥಿಸಿಕೊಂಡನು.

೧೭. ಈರೀತಿ ಪರಮಭಕ್ತಿಯಿಂದ ತನ್ನನ್ನು ಶರಣುಹೊಂದಿದ ಶ್ವೇತನನ್ನು ನೋಡಿ ಭಗವಾನ್ ಭೂತಭಾವನನು, ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ನಾನಾವಿಧವಾದ ಅವತಾರಗಳನ್ನು ಮಾಡಿ ಲೋಕವನ್ನು ಸಲಹಿದ ಮುಚುಕುಂದ ವರದನ (ವಿಷ್ಣುವಿನ) ಕವಚವನ್ನು ಕೈಯಲ್ಲಿ ಧರಿಸಿ ಶ್ವೇತನು ಪೂಜಿಸುತ್ತಿದ್ದ ಲಿಂಗವನ್ನೊಡೆದು ಮೂಡಿದನು. ಮತ್ತು ಆ ಕವಚದಿಂದ ಅವನನ್ನು ರಕ್ಷಿಸಿದನು.

ಭಿತ್ತ್ವಾ ಲಿಂಗಂ ಸಮುತ್ತಸ್ಥೌ ಕ್ರೋಧವಿಸ್ಫಾರಿತೇಕ್ಷಣಃ ।
ತೃತೀಯಲೋಚನಜ್ವಾಲಾಪ್ರಕಾಶಿತಜಗತ್ತ್ರಯಃ ॥ ೧೮ ॥

ದೃಷ್ಟಮಾತ್ರಸ್ತದಾ ತಸ್ಯ ಕಾಲೋ ಜಜ್ವಾಲ ತೇಜಸಾ ।
ಸ ಶಾಂತೋ ಭಸ್ಮಭೂತಶ್ಚ ಸರ್ವಭೂತವಿಧಿರ್ಗ್ರಹಃ ॥ ೧೯ ॥

ಶ್ವೇತಸ್ಯ ದತ್ವಾ ಸಾಮೀಪ್ಯಂ ಗಣೇಶತ್ವಂ ತಥೈವ ಚ ।
ಕೃತ್ವಾ ವಿಧಿಗ್ರಹಂ ಕಾಲಂ ತತ್ರೈವಾಂತರಧೀಯತ ॥ ೨೦ ॥

ತತಃ ಪ್ರಭೃತಿ ರಾಜೇಂದ್ರ ಕಾಲಃ ಸ ಕಲಯನ್ಪ್ರಜಾಃ ।
ನ ಕೈಶ್ಚಿದ್ದೃಶ್ಯತೇ ಲೋಕೇ ವಿದೇಹತ್ವಾಜ್ಜಗತ್ರಯೇ ॥ ೨೧ ॥

---

೧೮. ಹೀಗೆ ಮಹಾಲಿಂಗೋದ್ಭವಮೂರ್ತಿಯು ಪ್ರತ್ಯಕ್ಷನಾಗಿ ನಿಂತು, ಶ್ವೇತನ ಪ್ರಾಣವನ್ನೆಳೆದೊಯ್ಯಲು ಪ್ರಯತ್ನಪಡುತ್ತಲಿದ್ದ ಯಮನ ಮೇಲೆ ಕ್ರೋಧ ವಿಸ್ಫಾರಿತ ನೇತ್ರಗಳಿಂದ ನೋಡುತ್ತಾ, ತನ್ನ ಮೂರನೆಯ ಕಣ್ಣನ್ನು ಜಗತ್ತನ್ನೇ ಸುಡುತ್ತಿರುವುದಕ್ಕಾಗಿ ತೆರೆದನೋ ಎಂಬ ತೆರದಿಂದ ತೆರೆದು ಆ ನೇತ್ರದ ತೀವ್ರದೃಷ್ಟಿಯಿಂದ ಯಮನನ್ನು ನೋಡಿದನು.

೧೯. ತ್ರಿನಯನನ ತೃತೀಯನೇತ್ರಜ್ವಾಲೆಯು ಯಮನನ್ನಾವರಿಸಿ ಆ ಕ್ಷಣವೇ ಅವನನ್ನು ಸುಟ್ಟುಬಿಟ್ಟಿತು. ಸಕಲ ಭೂತಗಳ ವಿಧಿ (ಮೃತ್ಯು) ರೂಪವಾದ ಆ ಯಮ (ಗ್ರಹ) ನು ಸುಟ್ಟುಬೂದಿಯಾದೊಡನೆಯೇ ಈಶ್ವರನು ಶಾಂತನಾಗಿ ತನ್ನ ತೃತೀಯನೇತ್ರವನ್ನು ಮುಚ್ಚಿಕೊಂಡನು. ಆ ಕೂಡಲೇ ಕ್ರೋಧವೂ ಶಾಂತವಾಯಿತು.

೨೦. ಆ ಬಳಿಕ ಪರಮೇಶ್ವರನು ಶ್ವೇತನೆದುರಿಗೆ ಬಂದು ನಿಂತುಕೊಂಡು ನಿನ್ನ ಭಕ್ತಿಭಾವಕ್ಕೆ ಮೆಚ್ಚಿ ನಿನಗೆ ವರಕೊಡುತ್ತೇನೆ. ನೀನು ಯಾವಾಗಲೂ ನನ್ನ ಸಮೀಪದಲ್ಲೇ ಇದ್ದುಕೊಂಡು ಗಣಗಳಿಗೆ ಒಡೆಯನಾಗುವಂತೆ ಅನುಗ್ರಹಮಾಡುತ್ತೇನೆಂದು ಹೇಳಿ, ಆ ಕಾಲನನ್ನು ಬ್ರಹ್ಮನ ಸಮೀಪಕ್ಕೆ ಕಳುಹಿಸಿ ತಾನು ಕೂಡಲೇ ಅಂತರ್ಧಾನನಾದನು.

೨೧. ಎಲೈ ಶೈಲೂಷರಾಜನೇ, ಕೇಳು. ಸುಟ್ಟು ಬೂದಿಯಾಗಿ ವಿದೇಹನಾದ (ದೇಹವನ್ನು ಕಳೆದುಕೊಂಡ) ಆ ಕಾಲನು ಅಂದಿನಿಂದಿಂದಿನವರಿಗೂ ಯಾರ

॥ ಶೈಲೂಷ ಉವಾಚ ॥

ವೈಷ್ಣವಂ ಕವಚಂ ಬ್ರಹ್ಮನ್ಸರ್ವಬಾಧಾನಿವಾರಣಂ ।
ತ್ವತ್ತೋಽಹಂ ಶ್ರೋತುಮಿಚ್ಛಾಮಿ ತತ್ರ ಮೇ ಸಂಶಯೋ ಮಹಾನ್ ॥ ೨೨ ॥

॥ ನಾಡಾಯನ ಉವಾಚ ॥

ಅದೃಶ್ಯಮೇತತ್ಪರಮಂ ಪವಿತ್ರಂ
ಪೂರ್ವೇರಿತಂ ಕಲ್ಮಷನಾಶನಂ ಚ ।
ದುಃಖಾಪಹಂ ತೇ ಕವಚಂ ಬ್ರವೀಮಿ
ರಕ್ಷಾ ಕೃತಾ ಯೇನ ಮಹೇಶ್ವರೇಣ ॥ ೨೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಕಾಲದಾರಣೋನಾಮ ಷಟ್ತ್ರಿಂಶದುತ್ತರ
ದ್ವಿಶತತಮೋಽಧ್ಯಾಯಃ.

---

ಕಣ್ಣುಗಳಿಗೂ ಕಾಣಿಸಿಕೊಳ್ಳದೆ ಮರೆಯಾಗಿ ಬಂದು ಪ್ರಾಣಿಗಳ ಪ್ರಾಣಗಳನ್ನು ಹಾರಿಸಿಕೊಂಡು ಹೋಗುತ್ತಲಿದ್ದಾನೆ.

೨೨. ಶೈಲೂಷನು ಕೇಳುತ್ತಾನೆ:—ಎಲೈ ನಾಡಾಯನನೇ! ವಿಷ್ಣುಕವಚದಿಂದ ಈಶ್ವರನು ಶ್ವೇತಋಷಿಯನ್ನು ಬದುಕಿಸಿದನೆಂದು ಹೇಳಿದೆಯಲ್ಲಾ? ಅಂತಹ ಸಕಲ ಬಾಧಾ (ಮೃತ್ಯು) ಪರಿಹಾರಕವಾದ ಆ ಕವಚದ ಸ್ವರೂಪವನ್ನು ತಿಳಿಯಬೇಕೆಂದು ನನಗೆ ಬಹಳ ಅಪೇಕ್ಷೆಯಾಗಿರುವುದರಿಂದ, ನನಗೆ ಆ ಕವಚದ ಸ್ವರೂಪವನ್ನು ತಿಳಿಸಿ ನನ್ನ ಸಂದೇಹ ಪರಿಹಾರಮಾಡಬೇಕೆಂದು ಕೇಳಿದನು.

೨೩. ನಾಡಾಯನನು ಶೈಲೂಷನನ್ನು ಕುರಿತು ಹೇಳುತ್ತಾನೆ:—

ಮಹೇಶ್ವರನಿಂದ ಮಾಡಲ್ಪಟ್ಟ ವಿಷ್ಣು (ರಕ್ಷಾ ಕವಚ (ಸ್ತೋತ್ರ) ವು ಯಾರಿಗೂ ತಿಳಿಯದು. ಇದು ಪರಮಪವಿತ್ರವಾದುದು, ಸಕಲ ಪಾಪ ಪರಿಹಾರಕವಾದುದು, ಸಕಲ ದುಃಖ ಪರಿಹಾರಕವಾದುದು. ಇದನ್ನು ಪೂರ್ವಿಕರು ಹೇಳುತ್ತಿದ್ದುದನ್ನು ನಾನು ಕೇಳಿ ತಿಳಿದುಕೊಂಡಿದ್ದೇನೆ. ಅದನ್ನು ಈಗ ನಿನಗೆ ತಿಳಿಸುತ್ತೇನೆ. ಕೇಳೆಂದು ನಾಡಾಯನರು ಶೈಲೂಷನನ್ನು ಕುರಿತು ಹೇಳಿದರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಕಾಲದಾರಣವೆಂಬ ಹೆಸರಿನ
ಇನ್ನೂರಮೂವತ್ತಾರನೆಯ ಅಧ್ಯಾಯವು
ಮುಗಿದುದು.

ಟಿಪ್ಪಣಿ: ಮೇಲಿನ ಅಧ್ಯಾಯದಲ್ಲಿ ಯಮನು ನಾನು ಸ್ವತಂತ್ರನಲ್ಲವೆಂದೂ ವಿಧಿಚೋದಿತನೆಂದೂ ಒಪ್ಪಿ ಹೇಳಿದನು. ಇಂತಹ ಎಷ್ಟೋ ಬ್ರಹ್ಮರನ್ನು ಕಾಲ ಪಾಶದಿಂದ ಕಟ್ಟಿ ಎಷ್ಟೋ ಸಾರಿ ಎಳೆದುಕೊಂಡು ಹೋಗಿರುವೆನೆಂದೂ ಸಹ ೧೧ನೇ ಶ್ಲೋಕದಲ್ಲಿ ಹೇಳಿದೆಯಷ್ಟೆ? ಇಲ್ಲಿ ವಾಚಕರಿಗೆ ಸಂದೇಹ ಬರಬಹುದು. ಬ್ರಹ್ಮನ ಆಜ್ಞಾನುಸಾರಿಯಾದ ಮೇಲೆ ಅವನನ್ನೇ ಕಾಲಪಾಶದಿಂದೆಳೆಯುವುದೂ, ರಾಜನ ಅಪ್ಪಣೆಯನ್ನು ಮೀರುವುದೂ ಒಂದೇ ಅಲ್ಲವೇ? ಈ ಪ್ರಶ್ನೆಗೆ ಇಲ್ಲೊಂದು ಸಮಾಧಾನ ವನ್ನು ಬರೆಯುತ್ತೇನೆ.

"ಮೃತ್ಯೋಸ್ಸಮೃತ್ಯುಮಾಪ್ನೋತಿ" ಎಂಬಉಪನಿಷತ್ತಿನವಚನವೊಂದುಂಟು. ಯಾವನು ಬ್ರಹ್ಮಜ್ಞಾನಿಯಾಗಿರುವನೋ ಅವನು ಮೃತ್ಯುವನ್ನೂ ಸಹ ಜಯಿಸ ಬಲ್ಲನೆಂದು ಇದರ ತಾತ್ಪರ್ಯ. ಆ ಬ್ರಹ್ಮನಾರೆಂದೂ, ಆಬ್ರಹ್ಮಜ್ಞಾನವೆಂತಹುದೆಂದೂ ತಿಳಿಸುವುದಕ್ಕಾಗಿ ಈ ಟಿಪ್ಪಣಿಯು ಆರಂಭವಾಗಿದೆ.

ಗುರು ಪ್ರಾರ್ಥನಾಕಾಲದಲ್ಲಿ ಹೇಳುವ ಒಂದು ಶ್ಲೋಕವಿದೆ:—

ಗುರುರ್ಬ್ರಹ್ಮಾ ಗುರುರ್ವಿಷ್ಣು ಗುರುರೇವ ಮಹೇಶ್ವರಃ ।
ಗುರುಸ್ಸಾಕ್ಷಾತ್ಪರಬ್ರಹ್ಮಾ ತಸ್ಮೈ ಶ್ರೀ ಗುರವೇ ನಮಃ ॥

ಅರ್ಥ:—ಗುರುವು ಬ್ರಹ್ಮರೂಪನಾಗಿಯೂ, ವಿಷ್ಣುರೂಪನಾಗಿಯೂ ಶಿವರೂಪ ನಾಗಿಯೂ ಮತ್ತು ಪರಬ್ರಹ್ಮ ಸ್ವರೂಪನಾಗಿಯೂ ಇದ್ದಾನೆ. ಅಂತಹ ಪರಬ್ರಹ್ಮನಿಗೆ ನಾನು ನಮಸ್ಕಾರಮಾಡುತ್ತೇನೆಂದು ಇದರ ತಾತ್ಪರ್ಯ.

ಹರಿಹರಬ್ರಹ್ಮಾದಿಗಳು ತ್ರಿಮೂರ್ತಿಗಳು. ಇವರಿಗೆ ಆಕಾರವುಂಟು. ಇವರನ್ನು ಧ್ಯಾನಿಸಿ ಪೂಜಿಸುವುದು ಸಾಕಾರಪೂಜೆಯೆನಿಸಿಕೊಳ್ಳುವುದು. ಯಾವಾಗ ಒಂದು ಆಕಾರವು ಉತ್ಪತ್ತಿಯಾಯಿತೋ ಆ ಆಕಾರಕ್ಕೆ ವಿಕಾರವೂ ಪರಿಣಾಮವೂ ಸ್ವತಸ್ಸಿದ್ಧ ವಾಗಿಯೇ ಇವೆ. ಇದು ಪರಮಾತ್ಮನೆನಿಸಿಕೊಳ್ಳುವುದಿಲ್ಲ. ಈ ಮೂರು ರೂಪ ಗಳಿಗೂ ಅತೀತವಾಗಿ ತ್ರಿಗುಣಾತ್ಮಕವಾಗಿದ್ದರೂ ತ್ರಿಗುಣಾತೀತವಾಗಿ ಅಚಿಂತ್ಯಾವ್ಯಕ್ತ ರೂಪನಿಂದಿದ್ದು ಸಮಸ್ತ ಜಗದಾಧಾರ ಸ್ವರೂಪವಾದ, ತನ್ನ ತೇಜಸ್ಸಿನಿಂದಲೇ ಸಕಲ (ಸೂರ್ಯಚಂದ್ರಾಗ್ನಿ) ತೇಜಸ್ಸುಗಳನ್ನೂ ಬೆಳಗಿಸುವ ನಿತ್ಯಪ್ರಕಾಶ ನಿತ್ಯಾನಂದ ಪರಿ ಪೂರ್ಣವಾದ ನಿರ್ವಿಕಾರವಾದ, ಆದಾವ ಅಣೋರಣೀಯವಾದ ಮಹತೋಮಹೀಯ ವಾದ ತೇಜೋಮೂರ್ತಿಯುಂಟೋ ಅದಕ್ಕೇ ಪರಬ್ರಹ್ಮನೆಂದು ಹೆಸರು. ಈ ಬ್ರಹ್ಮ ವಸ್ತುವಿನಿಂದಲೇ ಆಕಾಶಾದಿ ಪಂಚಭೂತಗಳೂ, ಪಂಚಭೂತಾತ್ಮಕವಾದ ಪ್ರಪಂಚವೂ,

ಆ ತೇಜೋಮೂರ್ತಿಯ ಸಂಕಲ್ಪಮಾತ್ರದಿಂದಲೇ ತ್ರಿಭುವನಗಳೂ, ತ್ರಿಮೂರ್ತಿಗಳೂ ಉತ್ಪತ್ತಿ ಸ್ಥಿತಿಲಯವನ್ನು ಹೊಂದುತ್ತಿರುತ್ತಾರೆ. ನಿತ್ಯನೂ, ಶಾಶ್ವತನೂ, ಶುದ್ಧನೂ, ಅಕ್ಷರನೂ, ಧ್ರುವನೂ, ಅವ್ಯಯನೂ ಆದ ಸಚ್ಚಿದಾನಂದರೂಪನಾದ ಪರಬ್ರಹ್ಮ ವಸ್ತುವೊಂದೇ ಅನಾದ್ಯಂತವೆನಿಸಿಕೊಳ್ಳುವುದು. ಭೀಷಾಸ್ಮಾದ್ವಾತಃ ಪವತೆ ಇತ್ಯಾದಿ ಉಪನಿಷದ್ವಾಕ್ಯಗಳಿಂದಲೂ, ತಸ್ಮಾದ್ವಾಏತಸ್ಮಾದಾತ್ಮನ ಆಕಾಶಸ್ಸಂಭೂತಃ ಎಂಬ ಅನೇಕಾನೇಕ ವೇದಾಂತೋಪನಿಷದ್ವಾಕ್ಯಗಳಿಂದಲೂ ಈ ಬ್ರಹ್ಮಸ್ವರೂಪವನ್ನು ತಿಳಿದು ಕೊಳ್ಳಬಹುದು. ಮನುಷ್ಯನ ಜೀವಮಾನದ ಗುರಿಯೂ ಸಹ ಬ್ರಹ್ಮವಿಚಾರವೆಂಬ ನಿಲುಗಡೆಗೆ ನಿಲ್ಲುವುದೇ ಆಗಿದೆ. ಇದರಿಂದ ಮೋಕ್ಷವು ಕರಗತವಾಗುವುದೇ ಆಗಿದೆ ಯಮನು ಸಾಕಾರಬ್ರಹ್ಮನ ಕೊನೆಯನ್ನು ನೋಡಬಲ್ಲನು. ಆದರೆ ನಿರಾಕಾರಿ ಯಾದ ಸಚ್ಚಿದಾನಂದ ಪರಬ್ರಹ್ಮನ ಅಧೀನನಾಗಿರುವನು. ಇದೇ ಬ್ರಹ್ಮಸ್ವರೂಪ ಲಕ್ಷಣವೆಂದು ಹೃದಯಾಂತರಾಳದಲ್ಲಿ ಹುಗಿದುಕೊಂಡು ಪ್ರೇರಿಸಿದ ಪರಮಾತ್ಮಸ್ವರೂಪೀ ಸದಾಶಿವಬ್ರಹ್ಮೇಂದ್ರರು ಈ ತತ್ವವಿಚಾರವನ್ನು ಈ ನನ್ನ ಲೇಖನಿಯಿಂದ ಹೊರಗೆಡ ಹಿರುವರು.

ಮತ್ತೊಂದು ವಿಶೇಷವಾದ ಟಿಪ್ಪಣಿ:—ಮಾರ್ಕಂಡೇಯರು ಮೃತ್ಯುವನ್ನು ಗೆದ್ದು ಪರಮಾತ್ಮನ ದಯೆಗೆ ಪಾತ್ರರಾಗಿ ಚಿರಂಜೀವಿಗಳಾದ ಕಥೆಯು ಲೋಕವಲ್ಲಿ ಪ್ರಚಾರವಾಗಿದೆ. ಈ ವೃತ್ತಾಂತವು ಮಾರ್ಕಂಡೇಯ ಪುರಾಣದಲ್ಲಿ ವಿಶೇಷವಾಗಿ ನಿರೂಪಿತವಾಗಿದೆ. ಇದರಂತೆ ಎಷ್ಟೋ ಮಂದಿ ಮಹಾನುಭಾವರು ಮೃತ್ಯುವನ್ನು ಗೆದ್ದಿದ್ದರೆಂಬ ಸಂಗತಿಯನ್ನು ತಿಳಿಸುವುದಕ್ಕಾಗಿಯೇ ಈ ಶ್ವೇತಋಷಿಯ ಕಥೆಯನ್ನು ಮಾರ್ಕಂಡೇಯರು ವಜ್ರಮಹಾರಾಜನಿಗೆ ವಿವರಿಸಿರುತ್ತಾರೆ. ಲೋಕದಲ್ಲಿ ಅಕಾಲ ಮೃತ್ಯು, ಕಾಲಮೃತ್ಯುವೆಂಬ ಎರಡು ವಿಧ ಮೃತ್ಯುಗಳುಂಟು. ಅಕಾಲಮೃತ್ಯುವನ್ನು ಗೆಲ್ಲಬಹುದು. ಇದನ್ನು ಔಷಧಿ, ಧ್ಯಾನ, ಜಪ, ಹೋಮ, ಪಾರಾಯಣ ಮುಂತಾದ ಸತ್ಕರ್ಮಾನುಷ್ಠಾನಗಳಿಂದಲೂ ನವಗ್ರಹಾರಾಧನೆ, ದೇವತಾರಾಧನೆ ಮೃತ್ಯುಂಜಯ ಜಪ, ಪುರಾಣಲೇಖನ, ಪುರಾಣ-ಪ್ರಕಟನಾದಿಗಳಿಂದಲೂ ಗೆಲ್ಲಬಹುದು. ಕಾಲ ಮೃತ್ಯುವನ್ನು ಗೆಲ್ಲಲು ಯಾರಿಂದಲೂ ಸಾಧ್ಯವಿಲ್ಲ. ಜರಾದಿಗಳಿಂದ ಜೀರ್ಣವಾದ ಅವಯವವು ಇದ್ದರೂ ಒಂದೇ, ಹೋದರೂ ಒಂದೇ. ಹಳೆಯ ಬಟ್ಟೆ ಹರಿದುಹೋದ ಮೇಲೆ ಹೊಸ ಬಟ್ಟೆಯನ್ನು ಹೊದಿಯುವಂತೆಯೇ ಮರಣವೂ ಜನನವೂ ಒಂದಾದ ಮೇಲೊಂದು ಬರುತ್ತಲೇ ಇರುತ್ತವೆ. ಈ ಜನನ ಮರಣಗಳ ಬಾಧೆಯನ್ನು ಕಳೆದು ಕೊಂಡು ಪರಮಾತ್ಮನಲ್ಲಿ ಐಕ್ಯವಾಗುವುದೇ ಮೋಕ್ಷಸ್ವರೂಪ. ಈ ಮೋಕ್ಷಸ್ವರೂಪ ವನ್ನು ವಿವರಿಸುವುದೇ ವೇದಶಾಸ್ತ್ರ ಪುರಾಣಗಳ ಮುಖ್ಯ ಗುರಿಯಾಗಿದೆ. ಈಗ

ಮುಂದೆ ಬರೆಯುವ ವಿಷ್ಣುರಕ್ಷಾಕವಚವನ್ನು ಪ್ರತಿದಿನವೂ ಪಾರಾಯಣಮಾಡುತ್ತಾ ಬಂದವರು ಖಂಡಿತವಾಗಿಯೂ ಅಪಮೃತ್ಯುವಿಗೊಳಗಾಗುವುದಿಲ್ಲವಾದುದರಿಂದ ಸಕಲರೂ ಈ ಸ್ತೋತ್ರದ ಪ್ರಯೋಜನವನ್ನು ಹೊಂದಲಿ. ಲೋಕವೆಲ್ಲವೂ ಸುಖವಾಗಿ ರಲಿ. ಎಂದು ಭಗವಂತನಾದ ಮಹಾವಿಷ್ಣುವನ್ನು ಪ್ರಾರ್ಥಿಸಿ ಮುಂದಿನ ಅಧ್ಯಾಯದ ವಿಷ್ಣುರಕ್ಷಾಕವಚವನ್ನು ಲಿಪಿಬದ್ಧಮಾಡಿ ಕನ್ನಡನಾಡಿನಲ್ಲಿ ಹೊರಗೆಡವುವೆನು.



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತತ್ರಿಂಶದುತ್ತರದ್ವಿಶತತಮೋಽಧ್ಯಾಯಃ ॥

॥ ಮಹೇಶ್ವರ ಉವಾಚ ॥

**ಪ್ರಣಮ್ಯಾಜರಮೀಶಾನಮಜಂ ನಿತ್ಯಮನಾಮಯಂ ।**
**ದೇವಂ ಸರ್ವೇಶ್ವರಂ ವಿಷ್ಣುಂ ಸರ್ವವ್ಯಾಪಿನಮವ್ಯಯಂ** ॥ ೧ ॥

**ಬಧ್ನಾಮ್ಯಹಂ ಪ್ರತಿಸರಂ ನಮಸ್ಕೃತ್ಯ ಜನಾರ್ದನಂ ।**
**ಅಮೋಘಮಪ್ರತಿಹತಂ ಸರ್ವದುಷ್ಟನಿವಾರಣಂ** ॥ ೨ ॥

ಇನ್ನೂರಮೂವತ್ತೇಳನೆಯ ಅಧ್ಯಾಯವು.
ವಿಷ್ಣುರಕ್ಷಾ ಕವಚ ಸ್ತೋತ್ರವು.

೧. ಈಶ್ವರನು ಹೇಳುತ್ತಾನೆ, ಶ್ವೇತನಿಗೆ. —ನಾರಾಯಣನು ಹೇಳುತ್ತಾನೆ ಶೈಲೂಷನಿಗೆ. —ಮಾರ್ಕಂಡೇಯನು ಹೇಳುತ್ತಾನೆ ವಜ್ರರಾಜನಿಗೆ. —ನಾನು ಕನ್ನಡಿಸುತ್ತೇನೆ ಸಕ್ಕದದಿಂದ ಕನ್ನಡಕ್ಕೆ. —ಕೇಳಿರೈ, ಶ್ರೋತೃಗಳಿರಾ!

ಮುಪ್ಪೂ, ಮರಣವೂ ಇಲ್ಲದ, ಹುಟ್ಟುಸಾವೂ ಇಲ್ಲದ, ರೋಗರುಜಿನಾದಿಗಳಿಲ್ಲದ, ಸರ್ವೇಶ್ವರನೂ, ಸರ್ವವ್ಯಾಪಿಯೂ, ಅವ್ಯಯನೂ ಆದ ಮಹಾವಿಷ್ಣುವನ್ನು ಮೊದಲು ನಾನು ನಮಸ್ಕಾರವನ್ನು ಮಾಡುತ್ತೇನೆ.

೨. ಈಮೇರೆ ಜನಾರ್ದನಸ್ವಾಮಿಯನ್ನು ಮೊದಲು ಮಣಿದು, ಅಮೋಘವೂ, ಅಪ್ರತಿಹತವೂ, ಸರ್ವದುಷ್ಟಗ್ರಹನಿವಾರಕವೂ, ಸಕಲ ದುಃಖಪರಿಹಾರಕವೂ ಆದ ಈ ಪ್ರತಿಸರ (ರಕ್ಷಾಬಂಧನ ಅಥವಾ ಕಂಕಣಧಾರಣ) ವನ್ನು ಈಗ ಲೋಕದಲ್ಲಿ ಕಟುತ್ತೇನೆ. (ಲೋಕೋಪಕಾರಕ್ಕಾಗಿ ಬರೆಯುತ್ತೇನೆಂದು ಅರ್ಥ.)

ವಿಷ್ಣುರ್ಮಾಮಗ್ರತಃ ಪಾತು ಕೃಷ್ಣೋ ರಕ್ಷತು ಪೃಷ್ಠತಃ ।
ಹರಿರ್ಮೇ ರಕ್ಷತು ಶಿರೋ ಹೃದಯಂ ಚ ಜನಾರ್ದನಃ ॥ ೩ ॥

ಮನೋ ಮಮ ಹೃಷೀಕೇಶೋ ಜಿಹ್ವಾಂ ರಕ್ಷತು ಕೇಶವಃ ।
ಪಾತು ನೇತ್ರೇ ವಾಸುದೇವಃ ಶ್ರೋತ್ರೇ ಸಂಕರ್ಷಣಸ್ತಥಾ ॥ ೪ ॥

ಪ್ರದ್ಯುಮ್ನಃ ಪಾತು ಮೇ ಘ್ರಾಣಮನಿರುದ್ಧೋ ಮುಖಂ ಮಮ ।
ವನಮಾಲೀ ಗಲಂ ಪಾತು ಶ್ರೀವತ್ಸೋ ರಕ್ಷತಾತ್ಪುರಃ ।
ಪಾರ್ಶ್ವಂ ತು ಪಾತು ಮೇ ಚಕ್ರಂ ವಾಮಂ ದೈತ್ಯನಿವಾರಣಂ ॥ ೫ ॥

ದಕ್ಷಿಣಂ ತು ಗದಾದೇವೀ ಸರ್ವಾಸುರನಿವಾರಿಣೀ ।
ಉದರಂ ಮುಸಲೀ ಪಾತು ಪೃಷ್ಠಂ ಪಾತು ಚ ಲಾಂಗಲೀ ॥ ೬ ॥

೩. ನನ್ನ ದೇಹದ ಮುಂಭಾಗದಲ್ಲಿ ವಿಷ್ಣುವು ನಿಂತು ನನ್ನನ್ನು ಕಾಪಾಡಲಿ. ಹಿಂಭಾಗದಲ್ಲಿ ಕೃಷ್ಣನು ನಿಂತು ಕಾಪಾಡಲಿ. ನನ್ನ ತಲೆಯಮೇಲೆ ಹರಿಯು ನಿಂತು ತನ್ನ ಪಾದಕ್ಕೆ ಬೀಳುವಂತೆ ನನ್ನನ್ನು ರಕ್ಷಿಸಲಿ. ನನ್ನ ಹೃದಯದಲ್ಲಿ ಜನಾರ್ದನನು ಸರ್ವದಾ ನಿಂತು ಸಲಹಲಿ.

೪. ನನ್ನ ಮನಸ್ಸನ್ನು ಹೃಷೀಕೇಶನು ಭಕ್ತಿಪರವಶವಾಗಿ ಮಾಡಿ ಕಾಪಾಡಲಿ. ನನ್ನ ನಾಲಿಗೆಯು ಯಾವಾಗಲೂ ಹರಿನಾಮವನ್ನುಚ್ಚರಿಸುತ್ತಾ ಶಾಶ್ವತವಾಗಿರಲೆಂದು ಕೇಶವನು ಕಾಪಾಡಿಕೊಂಡು ಬರಲಿ. ನನ್ನ ಕಣ್ಣುಗಳು ಎಂದೆಂದಿಗೂ ಮುಕುಂದ ನನ್ನು ನೋಡುತ್ತಿರಲೆಂದು ಹೇಳಿ ವಾಸುದೇವನು ಕಾಪಾಡಲಿ. ನನ್ನ ಕಿವಿಗಳು ಸರ್ವದಾ ಹರಿಕಥೆಗಳನ್ನು ಕೇಳುತ್ತಾ ಉಳಿದುಕೊಂಡಿರಲೆಂದು ಹಾರೈಸಿ ಸಂಕರ್ಷಣನು ಕಾಪಾಡಲಿ.

೫. ನನ್ನ ಮೂಗು ಯಾವಾಗಲೂ ಹರಿಪಾದಾರ್ಪಿತಪುಷ್ಪಗಳ ವಾಸನೆಯನ್ನು ಸವಿಯುತ್ತಾ ಸುಖವಾಗಿರಲೆಂದು ಪ್ರದ್ಯುಮ್ನನು ಕಾಪಾಡಲಿ. ನನ್ನ ಮುಖವನ್ನು ಅನಿರುದ್ಧನು ಸಂರಕ್ಷಿಸಲಿ. ವನಮಾಲಿಯು ನನ್ನ ಕತ್ತನ್ನು ಕಾಪಾಡಲಿ. ನನ್ನ ಮುಂಭಾಗವನ್ನು ಶ್ರೀವತ್ಸನಾದ ಶ್ರೀ ವಿಷ್ಣುವು ಕಾಪಾಡಲಿ.

೬. ಮಹಾವಿಷ್ಣುವಿನ ಕೈಯಲ್ಲಿರುವ ಸಕಲ ರಾಕ್ಷಸಸಂಹಾರಿಣಿಯಾದ ಗದಾದೇವಿಯು ನನ್ನ ಬಲಭಾಗವನ್ನು ಸಲಹಲಿ. ನನ್ನ ಹೊಟ್ಟೆಯನ್ನು ಮುಸಲಿಯು ಕಾಪಾಡಲಿ. ಹಿಂಭಾಗವನ್ನು ಲಾಂಗಲಿಯು ಕಾಪಾಡಲಿ.

ಊರೂ ರಕ್ಷತು ಶಾರ್ಙ್ಗೀ ಮೇ ಜಂಘೇ ರಕ್ಷತು ಚರ್ಮಕೀ ।
ಪಾಣೀ ರಕ್ಷತು ಶಂಖೀ ಚ ಪಾದೌ ಮೇ ಚರಣಾವುಭೌ ।
ಸರ್ವಕಾರ್ಯಾರ್ಥಸಿದ್ಧ್ಯರ್ಥಂ ಪಾತು ಮಾಂ ಗರುಡಧ್ವಜಃ ॥ ೭ ॥

ವರಾಹೋ ರಕ್ಷತು ಜಲೇ ವಿಷಮೇಷು ಚ ವಾಮನಃ ।
ಅಟವ್ಯಾಂ ನರಸಿಂಹಸ್ತು ಸರ್ವತಃ ಪಾತು ಕೇಶವಃ ॥ ೮ ॥

ಹಿರಣ್ಯಗರ್ಭೋ ಭಗವಾನ್ಹಿರಣ್ಯಂ ಮೇ ಪ್ರಯಚ್ಛತು ।
ಸಾಂಖ್ಯಾಚಾರ್ಯಸ್ತು ಕಪಿಲೋ ಧಾತುಸಾಮ್ಯಂ ಕರೋತು ಮೇ ॥ ೯ ॥

ಶ್ವೇತದ್ವೀಪನಿವಾಸೀ ಚ ಶ್ವೇತದ್ವೀಪಂ ನಯತ್ವಜಃ ।
ಸರ್ವಾನ್ಶತ್ರೂನ್ಸೂದಯತು ಮಧುಕೈಟಭಸೂದನಃ ॥ ೧೦ ॥

---

೭. ನನ್ನ ತೊಡೆಗಳನ್ನು ಶಾರ್ಙಪಾಣಿಯು ಕಾಯಲಿ. ಚರ್ಮಕಿಯು ನನ್ನ ಮೊಣಕಾಲುಗಳನ್ನು ಕಾಪಾಡಲಿ. ನನ್ನೆರಡು ಕೈಗಳನ್ನೂ ಎರಡು ಕಾಲುಗಳನ್ನೂ ಶಂಖಿ (ಪಾಂಚಜನ್ಯ ಶಂಖಧಾರಿ) ಯು ಸಲಹಲಿ. ನನ್ನ ಸಕಲ ಕಾರ್ಯಸಿದ್ಧಿಗೋಸ್ಕರ ಗರುಡಧ್ವಜನು ನನ್ನನ್ನು ಸಂರಕ್ಷಿಸಲಿ.

೮. ನೀರಿನಲ್ಲಿದ್ದಾಗ ನನ್ನನ್ನು ವರಾಹಮೂರ್ತಿ (ಕೃಷ್ಣನು) ಸಲಹಲಿ. ಕಷ್ಟಕಾಲದಲ್ಲಿ ವಾಮನಮೂರ್ತಿಯು ಸಲಹಲಿ. ಕಾಡಿನಲ್ಲಿದ್ದಾಗ ನರಸಿಂಹಸ್ವಾಮಿಯು ಸಂರಕ್ಷಿಸಲಿ. ಎಲ್ಲಾ ಕಡೆಗಳಲ್ಲಿಯೂ ನನ್ನನ್ನು ಕೇಶವಮೂರ್ತಿಯು ಕಾಪಾಡಲಿ.

೯. ಹಿರಣ್ಯಗರ್ಭನೆನಿಸಿದ ಭಗವಂತನು ನನಗೆ ಯಥೇಚ್ಛವಾಗಿ ಹಿರಣ್ಯ (ಚಿನ್ನ) ವನ್ನು ದಯಪಾಲಿಸಲಿ. ಸಾಂಖ್ಯಾಚಾರ್ಯನಾದ ಕಪಿಲನು ನನ್ನನ್ನು ಬ್ರಹ್ಮನ ಸಮಕ್ಕೆ ತರಲಿ (ಒಯ್ಯಲಿ). ಶ್ವೇತದ್ವೀಪನಿವಾಸಿಯಾದ ಅಜನು ಶ್ವೇತದ್ವೀಪಕ್ಕೆ ನನ್ನನ್ನು ಕರೆದುಕೊಂಡು ಹೋಗಿ ಬಿಡಲಿ.

೧೦-೧೧. ಮಧುಕೈಟಭರನನ್ನು ಕೊಂದ ಮಧುಸೂದನನು ನನ್ನ ಸಮಸ್ತ ಶತ್ರು (ದ್ವೇಷಿ ಅಸೂಯಾಪರ, ಕೆಡಕಿ) ಗಳನ್ನೂ ಸಾಯಬಡಿಯಲಿ. ನನ್ನ ಹೊಟ್ಟೆಯಲ್ಲಿ ತುಂಬಿರುವ ಸಕಲ ವಿಧವಾದ ಪಾಪಶೇಷಗಳನ್ನೂ ಮಹಾವಿಷ್ಣುವು ಆಕರ್ಷಿಸಿ

ವಿಕರ್ಷತು ಸದಾ ವಿಷ್ಣುಃ ಕಿಲ್ಬಿಷಂ ಮಮ ವಿಗ್ರಹಾತ್ ।
ಹಂಸೋ ಮತ್ಸ್ಯಸ್ತಥಾ ಕೂರ್ಮಃ ಪಾತು ಮಾಂ ಸರ್ವತೋ ದಿಶಂ ॥

ತ್ರಿವಿಕ್ರಮಸ್ತು ಮೇ ದೇವಃ ಸರ್ವಾನ್ಪಾಶಾನ್ನಿಕೃಂತತು ।
ನರನಾರಾಯಣೋ ದೇವೋ ಬುದ್ಧಿಂ ಪಾಲಯತಾಂ ಮಮ ॥ ೧೨ ॥

ಶೇಷೋಽಶೇಷಾಮಲಜ್ಞಾನಃ ಕರೋತ್ವಜ್ಞಾನನಾಶನಂ ।
ವಡವಾಮುಖೋ ನಾಶಯತು ಕಲ್ಮಷಂ ಯನ್ಮಯಾ ಕೃತಂ ॥ ೧೩ ॥

ವಿದ್ಯಾಂ ದದಾತು ಪರಮಾಮಶ್ವಮೂರ್ಧಾ ಮಮ ಪ್ರಭುಃ ।
ದತ್ತಾತ್ರೇಯಃ ಪಾಲಯತು ಸಪುತ್ರಪಶುಬಾಂಧವಂ ॥ ೧೪ ॥

ಸರ್ವಾನ್ರೋಗಾನ್ನಾಶಯತು ರಾಮಃ ಪರಶುನಾ ಮಮ ।
ರಕ್ಷೋಘ್ನೋ ಮೇ ದಾಶರಥಿಃ ಪಾತು ನಿತ್ಯಂ ಮಹಾಭುಜಃ ॥ ೧೫ ॥

---

(ಹೊರಕ್ಕೆಳೆದು)ಅಟ್ಟಲಿ. ಹಂಸರೂಪಿಯೂ ಮತ್ಸ್ಯಧಾರಿಯೂ ಕೂರ್ಮಾವತಾರಿಯೂ ಸಹ ನನ್ನನ್ನು ಸಕಲ ದಿಕ್ಕುಗಳಲ್ಲೂ ಸಂರಕ್ಷಿಸಲಿ.

೧೨. ತ್ರಿವಿಕ್ರಮಸ್ವಾಮಿಯು ನನ್ನ ಸಕಲ ಪಾಶ (ಬಂಧನ ಕಷ್ಟ) ಗಳನ್ನೂ ಚೂರು ಚೂರಾಗಿ ಕತ್ತರಿಸಲಿ. ನರನಾರಾಯಣಸ್ವಾಮಿಯು ನನ್ನ ಬುದ್ಧಿಯೊಳಗೆ ಹೊಕ್ಕು ಕಾಪಾಡಲಿ. (ಸಾತ್ವಿಕಭಾವವನ್ನು ವೃದ್ಧಿಗೊಳಿಸಲಿ)

೧೩. ಸಕಲ ವಿಧವಾದ ನೈರ್ಮಲ್ಯದಿಂದಲೂ ಜ್ಞಾನದಿಂದಲೂ ಪ್ರಕಾಶಿಸುತ್ತಿರುವ ಆದಿಶೇಷನು ನನ್ನ ಅಜ್ಞಾನ (ಕತ್ತಲೆ) ವನ್ನು ನಾಶಮಾಡಿ ಜ್ಞಾನದಾನ ಮಾಡಲಿ. ಬಡಬಾಮುಖ (ಯಜ್ಞೇಶ್ವರ) ನು ನನ್ನಿಂದ ಮಾಡಲ್ಪಟ್ಟ ಸಕಲ ಪಾಪ ರಾಶಿಯನ್ನೂ ಬೂದಿಮಾಡಿಬಿಡಲಿ.

೧೪. ನನ್ನ ಪ್ರಭುವಾದ ಹಯಗ್ರೀವನು ನನಗೆ ಸಕಲ ವಿದ್ಯೆ (ಶಾಸ್ತ್ರ) ಗಳನ್ನೂ ಅತ್ಯುತ್ತಮ ಪಾಂಡಿತ್ಯವನ್ನೂ ಅನುಗ್ರಹಿಸಿ ವಿದ್ವಾಂಸರೊಳಗೆ ಅಗ್ರಗಣ್ಯನೆನಿಸುವಂತೆ ಮಾಡಲಿ. ನನ್ನ ಮಕ್ಕಳನ್ನೂ ನನ್ನ ಪಶುಗಳನ್ನೂ ನನ್ನಾಪ್ತಬಂಧುಗಳನ್ನೂ ದತ್ತಾತ್ರೇಯನು ಕಾಪಾಡಲಿ.

೧೫. ಪರಶುರಾಮನು ನನ್ನ ಹತ್ತಿರದಲ್ಲಿಯೇ ಇದ್ದುಕೊಂಡು ಕೊಡಲಿಯನ್ನು

ರಿಪೂನ್ಹಲೇನ ಮೇ ಹನ್ಯಾದ್ರಾಮೋ ಯಾದವನಂದನಃ ।
ಪ್ರಲಂಬಕೇಶಿಚಾಣೂರಪೂತನಾಕಂಸನಾಶನಃ ॥ ೧೬ ॥

ಕೃಷ್ಣೋ ಯೋ ಬಾಲಭಾವೇನ ಸ ಮೇ ಕಾಮಾನ್ಪ್ರಯಚ್ಛತು ।
ಅಂಧಕಾರಂ ತಮೋ ಘೋರಂ ಪುರುಷಂ ಕೃಷ್ಣಪಿಂಗಲಂ ॥ ೧೭ ॥

ಪಶ್ಯಾಮಿ ಭಯಸಂತಸ್ತಃ ಪಾಶಹಸ್ತಮಿವಾಂತಕಂ ।
ತತೋಽಹಂ ಪುಂಡರೀಕಾಕ್ಷಮಚ್ಯುತಂ ಶರಣಂ ಗತಃ ॥ ೧೮ ॥

ಯೋಗೀಶಮತಿರೂಪಸ್ಥಂ ಶುಭಶೀತಾಂಶುನಿರ್ಮಲಂ ।
ಧನ್ಯೋಽಹಂ ವಿಜಯೀ ನಿತ್ಯಂ ಯಸ್ಯ ಮೇ ಭಗವಾನ್ಹರಿಃ ॥ ೧೯ ॥

---

ಬಿಡದ, ನನಗೆ ಇರುವ ಹೃದ್ರೋಗ, ದೇಹಗತರೋಗಗಳನ್ನು ನಾಶಮಾಡಿಬಿಡು ವುದಲ್ಲದೆ ಮುಂದೆಯೂ ಸಹ ಯಾವ ರೋಗವೂ ಬರದಂತೆ ಸಂರಕ್ಷಿಸಲಿ. ಸಕಲ ರಾಕ್ಷಸ ಸಂಹಾರಕನಾದ ಮಹಾಬಲ ಪರಾಕ್ರಮಶಾಲಿಯಾದ ದಶರಥರಾಮನು ನನ್ನನ್ನು ಸರ್ವದಾ ಸಂರಕ್ಷಿಸಲಿ.

೧೬. ಯದುನಂದನನಾದ ಬಲರಾಮನು ನೇಗಿಲನ್ನು ನನ್ನ ಮುಂದೆ ಹಿಡಿದು ನಿಂತುಕೊಂಡು ನನ್ನ ಶತ್ರುಗಳನ್ನು ಆ ನೇಗಿಲಿನಿಂದ ನಾಶಮಾಡಿಬಿಡಲಿ. ಮಗು ವಾಗಿದ್ದಾಗಲೇ ಪ್ರಲಂಬಾಸುರ ಕೇಶಿದೈತ್ಯ ಚಾಣೂರ ಪೂತನಾ ಕಂಸಾದಿಗಳನ್ನು ಕೊಂದ ಬಾಲಕೃಷ್ಣನು ನನಗೆ ಸಕಲೇಷ್ಟಾರ್ಥಗಳನ್ನೂ ಕೊಟ್ಟು ಕಾಪಾಡಲಿ.

೧೭-೧೮. ಭಯಂಕರನಾದ ಕತ್ತಲೆಯನ್ನು ನೋಡಿದಾಗಲೆಲ್ಲಾ ಕೃಷ್ಣಪಿಂಗಲ ರೂಪನಾದ ಯಮನು ಹಗ್ಗವನ್ನು ಹಿಡಿದು ನನ್ನ ಪ್ರಾಣಗಳನ್ನೆಲ್ಲಾ ಎಲ್ಲಿಗೆ ಎಳೆದು ಕೊಂಡು ಹೋಗುವನೋ ಎಂದು ಬಹಳ ದಿಗಿಲುಂಟಾಗುತ್ತದೆ. ಈ ದಿಗಿಲು ಸರ್ವದಾ ನನ್ನ ಮನಸ್ಸಿನಲ್ಲಿ ಹೊಕ್ಕಿರುವುದರಿಂದ ಪುಂಡರೀಕಾಕ್ಷನಾದ ಅಚ್ಯುತನನ್ನು ಶರಣುಹೊಂದಿರುತ್ತೇನೆ.

೧೯. ಆ ಭಗವಾನ್ ಮಹಾವಿಷ್ಣುವು ನನ್ನ ಕಣ್ಣಿಗೆ ಗೋಚರನಾದೊಡನೆ ನಾನು ಧನ್ಯನಾಗುವೆನು, ವಿಜಯಿಯೆಂದು ತಿಳಿಯುವೆನು. ಆ ಯೋಗೀಶ್ವರನಾದ ಕೃಷ್ಣನ ಶುಭಶೀತಾಂಶುವಿನಂತೆ ನಿರ್ಮಲವಾದ ಮನೋಹರರೂಪವು ನನಗೆ ದರ್ಶನ ವನ್ನು ದಯಪಾಲಿಸಲಿ.

ಸ್ಮೃತ್ವಾ ನಾರಾಯಣಂ ದೇವಂ ಸರ್ವೋಪದ್ರವನಾಶನಂ ।
ವೈಷ್ಣವಂ ಕವಚಂ ಬದ್ಧ್ವಾ ವಿಚರಾಮಿ ಮಹೀತಲೇ ॥ ೨೦ ॥

ಅಪ್ರಧೃಷ್ಯೋಸ್ಮಿ ಭೂತಾನಾಂ ಸರ್ವಂ ವಿಷ್ಣುಮಯೋಹ್ಯಹಂ ।
ಸ್ಮರಣಾದ್ದೇವದೇವಸ್ಯ ವಿಷ್ಣೋರಮಿತತೇಜಸಃ ॥ ೨೧ ॥

ಸಿದ್ಧಿರ್ಭವತು ಮೇ ನಿತ್ಯಂ ತಥಾ ಮಂತ್ರ ಉದಾಹೃತಃ ।
ಯೋ ಮಾಂ ಪಶ್ಯತಿ ಚಕ್ಷುರ್ಭ್ಯಾಂ ಯಂ ಚ ಪಶ್ಯಾಮಿ ಚಕ್ಷುಷಾ ॥ ೨೨ ॥

ಸರ್ವಾಸಾಂ ಸಮುದೃಷ್ಟೀನಾಂ ವಿಷ್ಣುರ್ಬಧ್ನಾತು ಚಕ್ಷುಷಾ ।
ವಾಸುದೇವಸ್ಯ ಯಚ್ಚಕ್ರಂ ತಸ್ಯ ಚಕ್ರಸ್ಯ ಯೇ ಅರಾಃ ॥ ೨೩ ॥

೨೦. ನಾನು ಈ ರೀತಿಯಾಗಿ ಭಗವಾನ್ ನಾರಾಯಣನನ್ನು ಸ್ಮರಿಸುತ್ತಾ ಸರ್ವೋಪದ್ರವನಾಶಕವಾದ, ಈ ವೈಷ್ಣವಕವಚವನ್ನು ಧರಿಸಿಕೊಂಡು, ಇನ್ನು ಮುಂದೆ ಈ ಭೂಮಂಡಲದಲ್ಲಿ ಸಂಚಾರಮಾಡುತ್ತೇನೆ.

೨೧-೨೨ ನಾನು ಯಾವ ಪ್ರಾಣಿ (ಭೂತ) ಗಳಿಗೂ ಹೆದರುವವನಲ್ಲ. ಸಕಲ ಚರಾಚರ ಪ್ರಪಂಚವೂ ವಿಷ್ಣುಮಯವೇ ಆಗಿರುವುದರಿಂದ ನಾನೂ ಸಹ ವಿಷ್ಣುಮಯವೇ ಆಗಿದ್ದೇನೆ. ಮಿತಿಮೀರಿದ ತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಮಹಾವಿಷ್ಣುವನ್ನು ಸ್ಮರಿಸಿದ ಮಾತ್ರದಿಂದಲೇ ನನಗೆ ಸಕಲ ಸಿದ್ಧಿಗಳೂ ಲಭಿಸಲಿ. ಇದಕ್ಕಾಗಿ ನಾನೊಂದು ಮಂತ್ರವನ್ನುಚ್ಚಾರಮಾಡುತ್ತೇನೆ.

೨೩. ಹೀಗೆಂದು ಮನಸ್ಸಿನಲ್ಲಿ ಮಾಡಿಕೊಂಡು ಈಗ ನಾನು ಬರೆಯುತ್ತಿರುವ ಸಂಸ್ಕೃತದ ಯೋಮಾಂಪಶ್ಯತಿ ಎಂಬ ಶ್ಲೋಕದಿಂದಾರಂಭಿಸಿ ೨೮ನೇ ಶ್ಲೋಕ ಪೂರ್ತಿಯಾಗಿ ಅನಾದ್ಯತಜ್ಞ ಜಗದ್ಬೀಜಂ - ಪದ್ಮನಾಭನಮೋಸ್ತುತೇ, ಎನ್ನುವವರಿವಿಗೂ ಬಾಯಿಯಲ್ಲಿ ಉಚ್ಚರಿಸಬೇಕು. ಇವರ ಅರ್ಥವನ್ನು ಇಲ್ಲಿ ಬರೆಯುತ್ತೇನೆ.

ಯಾರು ನನ್ನನ್ನು ತಮ್ಮ ಕಣ್ಣುಗಳಿಂದ ನೋಡುತ್ತಾರೆಯೋ, ನಾನು ಯಾರನ್ನು ನನ್ನ ಕಣ್ಣುಗಳಿಂದ ನೋಡುತ್ತಿರುವೆನೋ, ಈರೀತಿ ಸಮುದೃಷ್ಟಿಯುಳ್ಳ ಸಕಲರನ್ನೂ ಮಹಾವಿಷ್ಣುವು ತನ್ನ ನೇತ್ರಕಿರಣಗಳಿಂದ ಕಟ್ಟಲಿ.

ಶೇ ಚ ಚ್ಛಿಂದಂತು ನೋ ಪಾಪಂ ಮಾ ಮೋ ಹಿಂಸಂತು ಹಿಂಸಕಾಃ ।
ರಾಕ್ಷಸೇಷು ಪಿಶಾಚೇಷು ಕಾಂತಾರೇಷ್ವಟವೀಷು ಚ ॥ ೨೪ ॥

ವಿವಾದೇ ರಾಜಮಾರ್ಗೇಷು ದ್ಯೂತೇಷು ಕಲಹೇಷು ಚ ।
ನದೀಸಂತರಣೇ ಘೋರೇ ಸಂಪ್ರಾಪ್ತೇ ಪ್ರಾಣಸಂಶಯೇ ॥ ೨೫ ॥

ಅಗ್ನಿ ಚೋರನಿಪಾತೇ ಚ ಸರ್ವಗ್ರಹನಿವಾರಣೇ ।
ವಿದ್ಯುತ್ಸರ್ಪವಿಷೋದ್ಯೋಗೇ ಖಾತೋದೇ ರಿಪುಸಂಕಟೇ ॥ ೨೬ ॥

ತಥ್ಯಮೇತಜ್ಜಪೇನ್ನಿತ್ಯಂ ಶರೀರೇ ಭಯ ಆಗತೇ ।
ಅಯಂ ಭಗವತೋ ಮಂತ್ರೋ ಮಂತ್ರಾಣಾಂ ಪರಮೋ ಮಹಾನ್ ।
ವಿಖ್ಯಾತಂ ಕವಚಂ ಗುಹ್ಯಂ ಸರ್ವಪಾಪಪ್ರಣಾಶನಂ ॥ ೨೭ ॥

---

೨೪. ವಾಸುದೇವನ ಯಾವ ಸುದರ್ಶನವೆಂಬ ಚಕ್ರವುಂಟೋ, ಆ ಚಕ್ರದ ಯಾವ ಹರಿತವಾದ ಅಲಗುಗಳುಂಟೋ ಅವುಗಳು ನನ್ನ ಸಕಲ ಪಾಪರಾಶಿಗಳನ್ನೂ, ನನ್ನನ್ನು ಹಿಂಸೆಮಾಡುತ್ತಿರುವ ಹಿಂಸಕರ ಸಮುದಾಯವನ್ನೂ ಚೂರುಚೂರಾಗಿ ಕತ್ತರಿಸಿಬಿಡಲಿ.

೨೫-೨೮. ನನ್ನನ್ನೇನಾದರೂ ರಾಕ್ಷಸರಾಗಲೀ, ಪಿಶಾಚಿಗಳಾಗಲೀ ಹಿಂಸೆ ಮಾಡುವುದಾದರೆ, ಭಯಂಕರವಾದ ಕಾಡಿನಲ್ಲಿಯೂ ವನದುರ್ಗಗಳಲ್ಲಿಯೂ ನನಗೇನಾದರೂ ವಿಪತ್ತು ಒದಗುವುದಾದರೆ, ನನಗೆ ಯಾರೊಡನೆಯಾದರೂ ಜಗಳ ಹುಟ್ಟುವುದಾದರೆ ; ಅರಮನೆಯ ಬಾಗಿಲಿನಲ್ಲಿ ರಾಜನನ್ನು ನೋಡಲು ಹೋಗುವಾಗ ನನ್ನನ್ಯಾರಾದರೂ ತಡೆಯುವುದಾದರೆ ; ಜೂಜಿನಲ್ಲಿ, ಕದನದಲ್ಲಿ, ನದೀ ದಾಟುವ ಸಮಯದಲ್ಲಿ ಭಯಂಕರವಾದ ಸಂಕಟವು ಪ್ರಾಪ್ತವಾಗಿ ಪ್ರಾಣಗಳೇ ಹೋಗುವ ಸ್ಥಿತಿ ಬರುವುದಾದರೆ ; ಬೆಂಕಿಯಿಂದಲೂ, ಕಳ್ಳಕಾಕರಿಂದಲೂ ಏನಾದರೂ ಕೇಡು ಪ್ರಾಪ್ತವಾಗುವುದಾದರೆ, ಸಕಲ ಗ್ರಹಬಾಧೆಗಳೂ ನಿವಾರಣೆಯಾಗಬೇಕಾದರೆ, ಮಿಂಚು, ಹಾವು, ಮಾಟ, ವಿಷಪ್ರಯೋಗಗಳಿಂದಲಾಗಲೀ, ಭಾವಿಗೆ ಬಿದ್ದು ಪ್ರಾಣ ಹೋಗುವ ಸ್ಥಿತಿಯೊದಗಿದ ಸಮಯದಲ್ಲಿಯಾಗಲೀ, ಈ ಶರೀರಕ್ಕೆ ಎಂತಹ ಅನರ್ಥಕಾರಿಯಾದ ಭಯವುಂಟಾಗುವ ಸಮಯದಲ್ಲಿಯಾಗಲೀ, ಮುಂದೆ ಬರೆಯುವ ಭಗವನ್ಮಂತ್ರವು ನಮ್ಮನ್ನು ಕಾಪಾಡುವುದು. ಈಗ ಬರೆಯುವ ಮಂತ್ರವು ಎಲ್ಲಾ ಮಂತ್ರಗಳಿಗಿಂತಲೂ ಪರಮ

ಸ್ವಮಾಯಾಕೃತನಿರ್ಮಾಣಂ ಕಲ್ಪಾಂತಗೃಹಲೋಪಕೃತ್ ।
ಅನಾದ್ಯಂ ತಜ್ಜಗದ್ಬೀಜಂ ಪದ್ಮನಾಭ ನಮೋಸ್ತು ತೇ ॥ ೨೮ ॥

ಓಂ ಕಾಲಾಯ ಸ್ವಾಹಾ । ಓಂ ಕಾಲಪುರುಷಾಯ ಸ್ವಾಹಾ । ಓಂ ಪ್ರಚಂಡಾಯ ಸ್ವಾಹಾ । ಓಂ ಪ್ರಚಂಡಪುರುಷಾಯ ಸ್ವಾಹಾ । ಓಂ ಸರ್ವಾಯ ಸ್ವಾಹಾ । ಓಂ ಸರ್ವಸರ್ವಾಯ ಸ್ವಾಹಾ । ಓಂ ನಮೋ ಭುವನೇಶಾಯ ತ್ರಿಲೋಕಧಾಮ್ನೇ ಇತಿಟಿಪಿರಿಟಿ ಸ್ವಾಹಾ । ಓಂ ಉತ್ತಮೇನ ಅಷ್ಟೇತುಮೇ ಮಾಯುತುಮೇ ಯೇ ಸತ್ವಾಃ ಪಾಪಾನುಚಾರಾಸ್ತೇಷಾಂ ದೈತ್ಯದಾನವಯಕ್ಷ ರಾಕ್ಷಸಭೂತಪ್ರೇತಪಿಶಾಚಕೂಷ್ಮಾಂಡಾಪಸ್ಮಾರೋನ್ಮಾದ ನ ಜ್ವ ರಾ ಣಾಂ ಏಕಾಹಿಕದ್ವಿತೀಯಕತಾರ್ತೀಯಕಚಾತುರ್ಥಿಕಮೌಹೂ ರ್ತಿ ಕ ದಿ ನ ಜ್ವ ರ ರಾತ್ರಿಜ್ವರಸತತಜ್ವರಸಂಧ್ಯಾಜ್ವರಸರ್ವಜ್ವರಾದೀನಾಮುತ್ಸಾದನಲೂತಾಕೀಟ ಕಕಂಟಕಕಟಪೂತನಾಭುಜಗಸ್ಥಾವರವಿಷವಿಷಮವಿಷಾದೀನಾಮಿದಂ ಶರೀ

---

ಶ್ರೇಷ್ಠವಾದುದು. ಇದು ಬಹು ರಹಸ್ಯವಾದ ಸರ್ವಪಾಪ ಪ್ರಣಾಶಕವಾದ ವಿಷ್ಣು ಕವಚವೆಂಬ ಹೆಸರಿನಿಂದ ಸುಪ್ರಸಿದ್ಧವಾಗಿದೆ. ಈ ಕವಚಕ್ಕೆ ಕಲ್ಪಾಂತ್ಯದಲ್ಲೊದಗುವ ಪ್ರಳಯಭಯವನ್ನೂ ಸಹ ನಾಶಮಾಡತಕ್ಕ ಶಕ್ತಿಯಿದೆ. ಇದು ಪರಮಾತ್ಮನ ಮಾಯೆ (ರಮಾದೇವಿ) ಯಿಂದ ಕಲ್ಪಿತವಾದುದು. ಅದನ್ನು ಮುಂದೆ ಬರೆಯುತ್ತೇನೆ.

೨೯. ಈ ಇಪ್ಪತ್ತೊಂಭತ್ತನೇ ಶ್ಲೋಕಕ್ಕೆ ಬದಲಾಗಿ ಇಪ್ಪತ್ತು ಶ್ಲೋಕಗಳಷ್ಟು ವಿಸ್ತಾರವುಳ್ಳ ವಿಷ್ಣು ಕವಚ ಮಂತ್ರವನ್ನು ಹೇಳಿದ್ದಾರೆ. ಇದರ ಮೂಲವು ಮೇಲುಗಡೆ ಶ್ಲೋಕಗಳ ಸ್ಥಾನದಲ್ಲಿ ಬರೆಯಲ್ಪಟ್ಟಿದೆ. ಇದನ್ನು ತಾವೇ ಪಾರಾಯಣಮಾಡಿದರೂ ಸರಿ. ಅಥವಾ ಮಂತ್ರವೇತ್ತರಾದ ನೈಷ್ಠಿಕ ಬ್ರಾಹ್ಮಣರನ್ನಾಗಲೀ ಕರೆದು ಸಂಕಲ್ಪಪೂರ್ವಕವಾಗಿ ಅವರಿಂದ ಹೇಳಿಸಿ ವಿಭೂತಿಯನ್ನು ಮಂತ್ರಿಸಿ, ಆ ವಿಭೂತಿಯನ್ನು ಸರ್ವಾಂಗಗಳಿಗೂ ಲೇಪಿಸಬೇಕು. ರೋಗಾರ್ತನ ಅಥವಾ ಕಷ್ಟಕ್ಕೊಳಗಾದವನ ಸಮೀಪದಲ್ಲಿ ಇದನ್ನು ಪಠಿಸಬೇಕು. ಅಥವಾ ಮೌಹೂರ್ತಿಕರನ್ನಾಗಲೀ ಮಂತ್ರವಾದಿಗಳನ್ನಾಗಲೀ ಕರೆಯಿಸಿ ಇದನ್ನು ತಾಮ್ರದ, ಬೆಳ್ಳಿಯ ಅಥವಾ ಚಿನ್ನದ ತಗಡಿನ ಮೇಲೆ ಬರೆಯಿಸಿ ಅದನ್ನು ತಾಯಿತಿಯಲ್ಲಿ ಭದ್ರಪಡಿಸಿ, ಆ ತಾತಿಯನ್ನು ವಿಪನ್ನನ ಕತ್ತಿಗಾಗಲೀ, ತೋಳಿಗಾಗಲೀ ಕಟ್ಟಬೇಕು. ಹೀಗೆ ಮಾಡಿದರೆ ಈ ಮಂತ್ರ

**ರಂ ಮಮಾಪ್ರಧೃಷ್ಯಂ ಭವತು ಓಂ ಸುಕಾರೇ ಪ್ರಕಾರೋತ್ಕಟಿಕ ವಿಕಟ ದ್ರಂಷ್ಟ್ರಪೂರ್ವತೋ ರಕ್ಷ । ಓಂ ಹೈಂ ಹೈಂ ಹೈಂ ಹೈಂ ದಿನಕರಸಹಸ್ರ ಕಾಂತಸಮೋಗ್ರತೇಜಃ ಪಶ್ಚಿಮತೋ ರಕ್ಷರಕ್ಷ । ಓಂ ನಿರಿನಿರಿಪ್ರದೀಪ್ತಜ್ವಲ ನಜ್ವಾಲಾಕಾಲಮಹಾಕಪಿಲಜಟಿಲ ಉತ್ತರತೋರಕ್ಷ । ಓಂ ಚಿಲಿಚಿಲಿಮಿಲಿ ಮಿಲಿಚೇಕಡಿ ಗೌರಿಗಾಂಧಾರಿ ವಿಷೋಹನಿ ವಿಷಂ ಮಾಂ ಮೋಹಯತು ಸ್ವಾಹಾ । ದಕ್ಷಿಣತೋ ರಕ್ಷ ಮಾಮಮುಕಸ್ಯ ಸರ್ವಭೂತ ಭಯೋಪ ದ್ರವೇಭ್ಯಃ ಸ್ವಾಹಾ । ಜಯತಿ ವಿಜಯದಾನಂ ಜಾಯತಾಂ ರಿಪುಪುರಹಾಸ ಸುನವಧ್ಯತೇ ಭಯಹೃದಯಭಯದೋಭಯೋಭಯಂ ದಿಶತು ಮಮಾಯ**

---

ಸಿದ್ಧಿಕ್ರಮದಂತೆ ಸಕಲ ಸಂಕಟಗಳೂ ಪರಿಹಾರವಾಗುವುವು. ಈ ಮಹಾಮಂತ್ರವು ಮೇಲೆ ಒಂದು ಬಾರಿ ಬರೆಯಲ್ಪಟ್ಟಿರುವುದರಿಂದ ಇಲ್ಲಿ ಪುನಃ ಬರೆಯಬೇಕಾದ ಕಾರಣ ವಿರುವುದಿಲ್ಲ. ಇದರಿಂದುಂಟಾಗುವ ಫಲವು ಈ ಮಂತ್ರದಲ್ಲಿಯೇ ಉಕ್ತವಾಗಿದೆ. ಆದರ ಸಾರಾಂಶವನ್ನು ಮಾತ್ರ ಇಲ್ಲಿ ಬರೆಯುವೆನು.

ಈ ಕವಚ ಪಾರಾಯಣದಿಂದ, ಈ ಕವಚಬಂಧನದಿಂದ ಇದರ ಕೆಳಗೆ ಬರೆದ ರೋಗಗಳೆಲ್ಲವೂ ಪರಿಹಾರವಾಗುವುವು. ದೈತ್ಯದಾನವ ಯಕ್ಷರಾಕ್ಷಸ ಭೂತಪ್ರೇತ ಪಿಶಾಚ ಕೂಷ್ಮಾಂಡಾಪಸ್ಮಾರೋನ್ಮಾದ ನವಜ್ವರಾದಿಗಳೂ, ಏಕಾಹಿಕ ದ್ವಿತೀಯಕ ತಾರ್ತೀಯಕ ಚಾತುರ್ಥಿಕ ಮೌಹೂರ್ತಿಕ ದಿನಜ್ವರ, ರಾತ್ರಿಜ್ವರ ಸಂತತಜ್ವರ ಸಂಧ್ಯಾ ಜ್ವರ ಸರ್ವ ಜ್ವರಗಳೂ ಪರಿಹಾರವಾಗಿ ಆರೋಗ್ಯವುಂಟಾಗುವುದು. ಈ ರೋಗ ಮುಖವಾದ ದೇಹಕ್ಕೆ ಬರುವ ಸಕಲ ವಿಧ ರೋಗಗಳೂ ಸಂಕಟಗಳೂ ಪರಿಹಾರವಾಗಿ ಈ ದೇಹವು ವಜ್ರಕಾಯವಾಗುವುದು. ಈ ಮಂತ್ರಕವಚವು ನಮ್ಮನ್ನು ಎಲ್ಲಾ ದಿಕ್ಕುಗಳಲ್ಲೂ ಎಲ್ಲಾ ಕಡೆಗಳಲ್ಲಿಯೂ ಸಂರಕ್ಷಿಸುವ ಶಕ್ತಿಯುಳ್ಳದು.

ಸಂಕಲ್ಪ ಹೇಳುವಾಗ ಇಂಥಾ ಗೋತ್ರದ ಇಂಥಾ ರಾಶಿಯ ಇಂಥಾ ಯಜಮಾನನ ದೇಹದಲ್ಲಿರುವ ಸಕಲ ಭೂತ ಭಯೋಪದ್ರವಾದಿಗಳೂ ಪರಿಹಾರವಾಗಲೆಂದು ಪರಮಾತ್ಮನ ಮರೆಹೊಕ್ಕು ಈಶ್ವರಪ್ರೀತಿಯಾಗಲೆಂದು ಇಂತಹ ಶಾಂತಿಕರ್ಮವನ್ನು ಮಾಡುತ್ತೇನೆಂದು ಹೇಳಿಕೊಳ್ಳಬೇಕು. ಈರೀತಿ ಮಾಡಿ ಕಡೆಯಲ್ಲಿ ಓಂ ತತ್ಸತ್

ಮುದಾರಮುಚ್ಯುತಃ । ಯಮುದರಮಖಿಲಂ ವಿಶಂತಿ ರಶ್ಮಯಃ । ಆದ್ಯಂತವಂತಃ ಕವಯಃ ಪುರಾಣಾಃ ಸೂಕ್ಷ್ಮಾ ಬೃಹಂತೋ ಹ್ಯನುಶಾಸಿತಾರಃ । ಸರ್ವಜ್ವರಾರ್ಘ್ನಂತು ಮಮಾನಿರುದ್ಧಪ್ರದ್ಯುಮ್ನಸಂಕರ್ಷಣವಾಸುದೇವಾಃ।

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂ ಪ್ರತಿ ನಾಡಾಯನ ವಾಕ್ಯೇ
ವಿಷ್ಣುಕವಚಂ ನಾಮ ಸಪ್ತತ್ರಿಂಶದುತ್ತರ
ದ್ವಿಶತತಮೋಽಧ್ಯಾಯಃ.

---

---

ಶ್ರೀಕೃಷ್ಣಾರ್ಪಣಮಸ್ತು ಎಂದು ಹೇಳಿ ರೋಗಾರ್ತನನ್ನು ಬ್ರಾಹ್ಮಣರಿಂದ ಆಶೀರ್ವಾದ ಮಾಡಿಸಬೇಕು. ಇದು ಪ್ರಯೋಗಕ್ರಮ. ಇಷ್ಟು ಕೆಲಸ ಮಾಡಿದಮೇಲೆ ' ಜಯತಿ ವಿಜಯದಾನಂ ' ಎಂದು ಆರಂಭಮಾಡಿ ' ಪ್ರದ್ಯುಮ್ನ ಸಂಕರ್ಷಣ ವಾಸುದೇವಾಃ ' ಎಂದು ಮೇಲೆ ಬರೆದಿರುವ ಶ್ಲೋಕವನ್ನು ಸಂಪೂರ್ಣವಾಗಿ ಉಚ್ಚರಿಸಬೇಕು. ಇದು ವಿಷ್ಣುಕವಚದ ಮಹಿಮೆ.

ಇಲ್ಲಿಗೆ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದ ರೂಪವಾದ ವಿಷ್ಣುಕವಚ
ವೆಂಬ ಹೆಸರಿನ ಇನ್ನೂರಮೂವತ್ತೇಳನೆಯ
ಅಧ್ಯಾಯವು ಮುಗಿದುದು.



ಶ್ರೀ

# ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ಅಷ್ಟತ್ರಿಂಶದುತ್ತರದ್ವಿಶತತಮೋऽಧ್ಯಾಯಃ

॥ ವಜ್ರ ಉವಾಚ ॥

**ಶ್ರುತ್ವಾ ಕಾಲಾಂಗದಹನಂ ಬ್ರಾಹ್ಮಣೇನ ಸಮೀರಿತಂ ।**
**ಕಿಂ ಪಪ್ರಚ್ಛ ತದಾ ಬ್ರಹ್ಮನ್ಶೈಲೂಷೋ ಮತ್ಕುಚೋದಿತಃ ॥ ೧ ॥**

## ಇನ್ನೂರಮೂವತ್ತೆಂಟನೆಯ ಅಧ್ಯಾಯವು.

**ಪೂರ್ವಕಥಾ ಸೂಚನಾ :—**

೧. ಈ ಪುರಾಣವನ್ನು ಮಾರ್ಕಂಡೇಯನು ವಜ್ರಮಹಾರಾಜನಿಗೆ ಹೇಳುತ್ತಿ ದ್ದಾನೆಂದು ಎಲ್ಲರಿಗೂ ಗೊತ್ತೇ ಆಗಿದೆಯಷ್ಟೆ? ಮಧ್ಯದಲ್ಲಿ ಎಷ್ಟೆಷ್ಟೋ ಬೇರೆಬೇರೆ ಸಂವಾದಗಳು ಬರುತಲಿವೆಯೆಂದು ಎಲ್ಲರೂ ಇದುವರಿಗೆ ಮನಗಂಡಿರುವಷ್ಟೆ? ಈ ಮಧ್ಯದಲ್ಲಿ ನಾಡಾಯನನು ಭರತನ ಸಂಗಡ ವಿರೋಧಮಾಡಿಕೊಳ್ಳಬೇಡವೆಂದು ನಾನಾವಿಧ ನೀತಿಗಳನ್ನು ಶೈಲೂಷನೆಂಬ ಗಂಧರ್ವರಾಜನಿಗೆ ಹೇಳುತ್ತಾ ಇರುವ ಸಂದ ರ್ಭವನ್ನು ಈಗ ನಾವು ಬರೆಯುತ್ತಾ ಇರುವೆನಷ್ಟೆ? ಇಂತಹ ಅದ್ಭುತ ಕಥಾನಕವು ಕನ್ನಡನಾಡಿನಲ್ಲಿ ಹರಡಿ ಇದರಿಂದ ನಮ್ಮ ದೇಶದ ಜನರು ಧರ್ಮಾತ್ಮರೂ, ಸತ್ಯ ಸಂಧರೂ, ವರ್ಣಾಶ್ರಮಾಚಾರನಿರತರೂ, ಭಗವದ್ಭಕ್ತರೂ ಆಗಿ ಆನಂದಿಸುತ್ತಾ ನಮ್ಮ ಮೈಸೂರು ದೇಶವು ರಾಜನ್ವತಿಯೆನಿಸಿಕೊಂಡು ಭೂಮಂಡಲ ಮಧ್ಯದಲ್ಲಿ ರಾರಾಜಿಸ ಲೆಂದು ನಮ್ಮ ಮಹಾರಾಜರು ಸಂಕಲ್ಪಿಸುವರಷ್ಟೆ? ಈ ಪುರಾಣವು ಸರಸಣಿಯಂತೆ ಉದ್ದವಾಗಿ ಹೋಗುತ್ತಾ ಇದೆ. ಅದರ ಕೊಂಡಿಗೆ ಸೇರಿಸಿದ ಬೇರೆಬೇರೆ ವಿಚಿತ್ರ

॥ ಮಾರ್ಕಂಡೇಯ ಉವಾಚ ॥
ಶ್ರುತ್ವಾ ಕಾಲಾಂಗದಹನಂ ಬ್ರಾಹ್ಮಣೇನ ಸಮೀರಿತಂ ।
ರಾವಣಸ್ಯೈವ ಚರಿತಂ ಭೂಯಃ ಪಪ್ರಚ್ಛ ತಂ ತದಾ ॥ ೨ ॥

ವೃತ್ತಾಂತಗಳು ಕಥಾಸರಣಿಯಲ್ಲಿ ಭಿನ್ನಭಿನ್ನವಾಗಿ ಸೇರಿಕೊಂಡಿವೆ. ಹಿಂದುಮುಂದಿನ ಸಂದರ್ಭಗಳನ್ನು ವಾಚಕರು ಗಮನವಿಟ್ಟು ಓದುತ್ತಾ ಬರದೆ ಹೋದರೆ ಕಥೆಯು ಮನಸ್ಸಿಗೆ ಹಿಡಿಯುವುದಿಲ್ಲ. ಆದ್ದರಿಂದ ಸಾವಧಾನಮನಾಃ ಶೃಣು ಎಂದು ಪದೇ ಪದೇ ಇದರಲ್ಲಿ ಬರುತ್ತಲೇ ಇರುತ್ತದೆ. ಇದು ಸ್ವಲ್ಪ ಪಾಠಕರ ಗಮನದಲ್ಲಿರಬೇಕೆಂದೇ ಈ ಸಣ್ಣಸೂಚನೆಯನ್ನು ಕೊಟ್ಟಿರುವೆನೇ ಹೊರ್ತು ಇನ್ನಾವ ಉದ್ದೇಶದಿಂದಲೂ ಈ ಟಿಪ್ಪಣಿಯನ್ನು ಬರೆದಿಲ್ಲ.

ಈರೀತಿಯಾಗಿ ಶೈಲೂಷನನ್ನು ಕುರಿತು ನಾಡಾಯನನು ಹೇಳುತ್ತಿರುವ ರಾವಣ ದಿಗ್ವಿಜಯ ಕಥಾಸಂದರ್ಭದಲ್ಲಿ ಮಧ್ಯೆಮಧ್ಯೆ ಅನೇಕ ವೃತ್ತಾಂತಗಳು ಬಂದು ಪ್ರಸಕ್ತಾನುಪ್ರಸಕ್ತಿಯಿಂದ ಲೋಕೋದ್ಧಾರಕವಾದ ವಿಷ್ಣುಕವಚವನ್ನು ಪರಮೇಶ್ವರನು ಅಪಮೃತ್ಯುಪೀಡಾಪರಿಹಾರ್ಥವಾಗಿ ಶ್ವೇತಮಹರ್ಷಿಗೆ ಉಪದೇಶಿಸಿ ಮೃತ್ಯುಭಯದಿಂದ ಬಿಡುಗಡೆ ಮಾಡಿಸಿದ ಅದ್ಭುತವೃತ್ತಾಂತವನ್ನು ಕೇಳಿ ಪರಮಾನಂದಭರಿತನಾದ ವಜ್ರ ಮಹಾರಾಜನು ಮಾರ್ಕಂಡೇಯನ ಚರಿತ್ರೆಯಂತೆಯೇ ಮೃತ್ಯುವನ್ನು ಜಯಿಸಿದ ಶ್ವೇತವಿಪ್ರನ ವೃತ್ತಾಂತವನ್ನು ಕೇಳಿ ಪರಮಾನಂದಭರಿತನಾಗಿ ಮಾರ್ಕಂಡೇಯನನ್ನು ಕುರಿತು ಪ್ರಶ್ನೆಮಾಡುತ್ತಾನೆ.

ಸ್ವಾಮಿ ! ಮಾರ್ಕಂಡೇಯ ಮಹರ್ಷಿಗಳೇ ! ನಾಡಾಯನನು ಶೈಲೂಷನಿಗೆ ಶ್ವೇತಋಷಿಯ ವಿಷಯವನ್ನು ಹೇಳುತ್ತಾ ಕಾಲ (ಯಮ) ದಹನ ವೃತ್ತಾಂತವನ್ನು ಹೇಳಿದನಷ್ಟೆ. ಈ ಕಾಲದಹನ ವೃತ್ತಾಂತವನ್ನು ಕಿವಿಯಿಂದ ಕೇಳಿದ ಶೈಲೂಷನು ತನಗೂ ಹೀಗೆ ಭರತನಿಂದ ಮೃತ್ಯುಸಮೀಪವಾಗಿದೆಯೆಂದು ತಿಳಿದುಕೊಂಡನೋ ಅಥವಾ ತನ್ನ ಪಟಮಾರಿತನವನ್ನು ಮುಂದುಮಾಡಿದನೋ ಆ ವಿಚಾರವನ್ನು ಸ್ವಲ್ಪ ಹೇಳಿ ಸ್ವಾಮಿ ! ಇದನ್ನು ಎಷ್ಟು ಬೇಗ ಕೇಳೇನೋ ಎಂದು ನನ್ನ ಮನಸ್ಸು ತಲ್ಲಣಿತ್ತಿದೆಯೆಂದು ಪ್ರಶ್ನೆಮಾಡಿದನು.

೨. ಈ ಮೇರೆ ತನ್ನನ್ನು ಕುರಿತು ಪ್ರಶ್ನೆಮಾಡಿದ ವಜ್ರಮಹಾರಾಜನನ್ನು ಕುರಿತು ಮಾರ್ಕಂಡೇಯನು ಹೇಳಿದುದೇನೆಂದರೆ :— ವಜ್ರಮಹಾರಾಜ ! ನಿನ್ನ

॥ ಶೈಲೂಷ ಉವಾಚ ॥

**ಚರಿತಸ್ಯಾವಶೇಷಂ ಯುದ್ಧಶಗ್ರೀವಸ್ಯ ರಕ್ಷಸಃ ।**
**ತದಹಂ ಶ್ರೋತುಮಿಚ್ಛಾಮಿ ತತ್ರ ಮೇ ಸಂಶಯೋ ಮಹಾನ್ ॥ ೩ ॥**

॥ ನಾಡಾಯನ ಉವಾಚ ॥

**ತಸ್ಯೋಽಸ್ಯ ನಗರಂ ಭೂಯಃ ಪರಿಚಕ್ರಾಮ ರಾವಣಃ ।**
**ಸ ದದರ್ಶ ತದಾ ತತ್ರ ಪ್ರಾಸಾದಂ ಸರ್ವಕಾಂಚನಂ ॥ ೪ ॥**

---

ಪುರಾಣಶ್ರವಣದ ಏಕಾಗ್ರ್ಯವನ್ನು ಕೇಳಿ ನನಗೆ ಬಹು ಸಂತೋಷವಾಯಿತಯ್ಯಾ; ಮುಂದೆ ನಡೆದ ಸಂಗತಿಯನ್ನು ಏಕಾಗ್ರಚಿತ್ತನಾಗಿ ಕೇಳಿ ಧನ್ಯನಾಗಯ್ಯಾ; ಹೀಗೆಂದು ಹೇಳಿ ಕಥೆಯನ್ನು ಮುಂಬರಿಸಿದನದೆಂತೆನೆ :—

ಶೈಲೂಷನು ಪೂರ್ವೋಕ್ತವಾದ ಬ್ರಾಹ್ಮಣನಿಂದ ಹೇಳಲ್ಪಟ್ಟ ಕಾಲಾಂಗದಹನ ವೃತ್ತಾಂತವನ್ನೂ ರಾವಣನ ಚರಿತ್ರೆಯನ್ನೂ ಕೇಳುತ್ತಿರುವಾಗ ಮಧ್ಯದಲ್ಲಿ ನಾಡಾಯನನನ್ನು ಕುರಿತು ಹೇಳಿದುದೇನೆಂದರೆ :—

೩. ಶೈಲೂಷನು ನಾಡಾಯನನನ್ನು ಕುರಿತು ಹೇಳುತ್ತಾನೆ:— ಅಯ್ಯಾ ! ಬ್ರಾಹ್ಮಣ ! ನೀನು ಹೇಳುತ್ತಿದ್ದ ರಾವಣನ ಕಥೆಯು ಮಧ್ಯದಲ್ಲಿಯೇ ನಿಂತು ಹೋಯಿತು. ಮಧ್ಯೆಮಧ್ಯೆ ಯಾವಯಾವುದೋ ಸಂಗತಿಗಳನ್ನು ಹೇಳುತ್ತಾ ಬಹಳ ಕಾಲವನ್ನು ಕಳೆದುಬಿಟ್ಟೆ. ಇನ್ನುಮುಂದಾದರೂ ಉಪಕಥೆಗಳನ್ನು ನಿಲ್ಲಿಸಿ, ರಾವಣನು ಮಾಡಿದ ಕೆಲಸಗಳೇನೆಂಬುದನ್ನು ತಿಳಿಸಿ ಈ ಕಥೆಯನ್ನು ಮುಗಿಸಿಬಿಡು. ನನಗೆ ಇದರಲ್ಲಿ ಬಹಳ ಸಂಶಯವುಂಟಾಗಿದೆಯಾದುದರಿಂದ ರಾವಣಾಸುರನ ಚರಿತ್ರೆಯನ್ನು ಕೇಳಬೇಕೆಂದು ಬಹಳ ಕುತೂಹಲವುಂಟಾಗಿದೆ.

೪. ನಾಡಾಯನನು ಶೈಲೂಷನನ್ನು ಕುರಿತು, ನಿನ್ನ ಮನಸ್ಸಿನ ಅಭಿಪ್ರಾಯವು ತಿಳಿಯಿತಯ್ಯಾ ಶೈಲೂಷ ! ಮುಂದೆ ನಡೆದ ಅದ್ಭುತ ವೃತ್ತಾಂತವನ್ನು ಈಗ ಹೇಳುವೆನು, ಕೇಳು.

ಟಿಪ್ಪಣಿ: ೨೧೨ನೆ ಅಧ್ಯಾಯದಿಂದಾರಂಭಿಸಿ ಇದುವರಿಗೆ ಬರೆದಿರುವ ೨೬ ಅಧ್ಯಾಯಗಳೂ ಸಹ ನಾಡಾಯನ ನೀತಿಯೆಂದು ಪ್ರಸಿದ್ಧವಾಗಿವೆ. ಈ ನೀತಿಯ ಮಧ್ಯದಲ್ಲಿ ತ್ರಿಲೋಕಾಧಿಪತಿಯಾದ ರಾವಣನೇ ಮಹಾವಿಷ್ಣುವಿನಿಂದ ಹತನಾಗಿರು

ಮುಕ್ತಾಜಾಲಪರಿಕ್ಷಿಪ್ತಂ ತಥಾ ವಿದ್ರುಮತೋರಣಂ ।
ಗಾರುಡೇನ ಚ ರತೇನ ಸಮಂತಾತ್ಕೃತವೇದಿಕಂ ॥ ೫ ॥

ವೈಡೂರ್ಯರುಚಿರಸ್ತಂಭಂ ಪದ್ಮರಾಗಪ್ರಭೋಜ್ಜ್ವಲಂ ।
ಇಂದ್ರನೀಲಪ್ರಭಾಚ್ಛನ್ನಂ ನಿರ್ಯೂಹಶತಶೋಭಿತಂ ॥ ೬ ॥

ಮಹಾಭುವನಸಂಬಾಧಂ ಮಹೋದ್ಯಾನವಿಭೂಷಿತಂ ।
ಸುಖಾರೋಹಣಸೋಪಾನಂ ದೀರ್ಘಿಕಾಶತಸಂಕುಲಂ ॥ ೭ ॥

---

ವಲ್ಲಿ, ನಿನ್ನಂತಹವನ ಪಾಡೇನು ? ಈಗಲೂ ಭರತನೊಡನೆ ಸಂಧಿಮಾಡಿಕೊಳ್ಳುವುದು ಯುಕ್ತವೆಂದು ಹೇಳುವ ಸಂದರ್ಭದಲ್ಲಿ ಶೈಲೂಷನನ್ನು ಕುರಿತು ನಾಡಾಯನನು ಹೇಳುತ್ತಿರುವನೆಂದು ಇಲ್ಲಿ ಅಭಿಪ್ರಾಯ.

ರಾವಣನು ಪಾತಾಳಲೋಕವನ್ನು ಜಯಿಸಲು ಹೊರಟನಷ್ಟೆ? ಪಾತಾಳದಲ್ಲಿ ಕಂಡ ಒಂದಾನೊಂದು ಮಹಾನಗರಿಗೆ ಹೋಗಿ ಆ ಊರಿನಲ್ಲೆಲ್ಲಾ ಸುತ್ತಾಡಿದನು. ಹೀಗೆ ನೋಡುತ್ತಿರುವಲ್ಲಿ ರಾವಣನ ಕಣ್ಣಿಗೆ ಚಿನ್ನದಿಂದಲೇ ಕಟ್ಟಲ್ಪಟ್ಟಿದ್ದ ಒಂದು ಎತ್ತರವಾದ ದಿವ್ಯಭವನವು ದೃಗ್ಗೋಚರವಾಯಿತು.

೫. ಆ ಮನೆಯ ಮುಂದುಗಡೆ ಹವಳದ ತೋರಣವನ್ನು ಕಟ್ಟಿದ್ದರು. ಎಲ್ಲೆಲ್ಲಿಯೂ ಮುತ್ತುಗಳ ಜಾಲರಿಯನ್ನು ಬಿಟ್ಟಿದ್ದರು. ಎಲ್ಲೆಲ್ಲಿಯೂ ಕೆಂಪುಗಳಿಂದ ಕೆತ್ತಿದ ಜಗುಲಿಯು ಕಂಗೊಳಿಸುತ್ತಿತ್ತು. ಎತ್ತ ನೋಡಿದರೂ ಗಾರುತ್ಮತರತ್ನವನ್ನೇ ಕೆತ್ತಿದ್ದಂತೆ ಕಾಣುತ್ತಿತ್ತು.

೬. ಆ ಅರಮನೆಯ ಕಂಭಗಳೆಲ್ಲಾ ವೈಡೂರ್ಯರತ್ನಮಯವಾಗಿದ್ದುವು. ಪದ್ಮರಾಗವನ್ನು ಆ ಗೋಡೆಗೆ ಕೆತ್ತಿದ್ದುದರಿಂದ ಅದರ ಕಾಂತಿಯು ಎಲ್ಲೆಲ್ಲಿಯೂ ವಿಶೇಷವಾಗಿ ಪ್ರಸರಿಸಿತ್ತು. ಇಂದ್ರನೀಲ ಮಣಿಗಳಿಂದ ವ್ಯಾಪ್ತವಾದ ಅನೇಕ ಕಿರುಮನೆಗಳು ಅಲ್ಲಿ ಗೋಚರವಾದುವು.

೭. ಆ ಮಹಾಪ್ರಾಸಾದಕ್ಕೆ ಸೇರಿದಂತೆ ದೊಡ್ಡದೊಂದು ಉದ್ಯಾನವನವು ಶೋಭಿಸುತ್ತಿತ್ತು. ಅಲ್ಲಿ ಎಷ್ಟೋ ಪುಷ್ಕರಿಣಿಗಳು ದಿವ್ಯ ಸೋಪಾನಗಳಿಂದ ಕೂಡಿ ವಿರಾಜಿಸುತ್ತಿದ್ದುವು.

**ಸರ್ವರ್ತುಕುಸುಮೈರ್ವೃಕ್ಷೈಃ ಸಮಂತಾದುಪಶೋಭಿತಂ ।**
**ಸರ್ವಾಸನಯುತಂ ರಮ್ಯಂ ಮಹೇಂದ್ರಭವನಾಧಿಕಂ ॥ ೮ ॥**

**ತಂತು ದೃಷ್ಟ್ವಾ ಗೃಹಂ ರಾಜನ್ಪ್ರಹಸ್ತಂ ವಾಕ್ಯಮಬ್ರವೀತ್ ।**
**ಪ್ರಹಸ್ತ ಶೀಘ್ರಂ ಜಾನೀಹಿ ಕಸ್ಯೇದಂ ಭವನೋತ್ತಮಂ ॥ ೯ ॥**

**ಏವಮುಕ್ತಃ ಪ್ರಹಸ್ತಸ್ತು ಪ್ರವಿವೇಶ ಗೃಹೋತ್ತಮಂ ।**
**ಸಂಪ್ರಾಪ್ತಾಯಾಂ ಚ ಕಕ್ಷ್ಯಾಯಾಂ ಭಿನ್ನಾಂಜನಚಯೋಪಮಂ ॥ ೧೦ ॥**

**ಸರ್ವಾಭರಣಸಂವೀತಂ ಸರ್ವಲಕ್ಷಣಲಕ್ಷಿತಂ ।**
**ಗೃಹೀತ್ವಾ ಲೋಹಮುಸಲಂ ದ್ವಾರದೇಶೇ ವ್ಯವಸ್ಥಿತಂ ॥ ೧೧ ॥**

---

೮. ಸಮಸ್ತ ಋತುಗಳಲ್ಲಿಯೂ ಬಿಡುವ ಹೂವುಗಳೂ ಆ ಉದ್ಯಾನವನದಲ್ಲಿ ಸರ್ವದಾ ಫಲಪುಷ್ಪಗಳಿಂದ ನಿಬಿಡವಾಗಿ ಪ್ರಕಾಶಿಸುತ್ತಲಿದ್ದವು. ಆ ಉದ್ಯಾನವನವು ಇಂದ್ರನ ನಂದನ ವನದಂತೆ ಕಂಗೊಳಿಸುತ್ತಾ ಇದ್ದಿತು. ಆ ಉದ್ಯಾನವನದಲ್ಲಿ ಕುಳಿತು ಕೊಳ್ಳಲರ್ಹವಾದ ವಿವಿಧವಾದ ಆಸನಗಳು ಸಿದ್ಧವಾಗಿದ್ದುವು.

೯. ಇಂತಹ ತ್ರಿಭುವನ ಮೋಹಕವಾದ ಪ್ರಾಸಾದವನ್ನು ನೋಡಿ ರಾವಣನು ತನ್ನ ಮಂತ್ರಿಯಾದ ಪ್ರಹಸ್ತನನ್ನು ಕುರಿತು, ಪ್ರಹಸ್ತ ! ಇದು ಯಾರ ಮನೆಯೆಂಬು ದನ್ನು ಜಾಗ್ರತೆಯಾಗಿ ತಿಳಿದುಕೊಂಡು ಬಾರೆಂದು ಹೇಳಿದನು.

೧೦. ರಾವಣನಿಂದಾಜ್ಞಪ್ತನಾದ ಪ್ರಹಸ್ತನು ಆ ಕೂಡಲೆ ಆ ಭುವನದೊಳಕ್ಕೆ ಪ್ರವೇಶಮಾಡಿದನು. ಆ ಮನೆಗೆ ಏಳು ಅಂತಸ್ತುಗಳಿದ್ದುವು. ಪ್ರಹಸ್ತನು ಆ ಮನೆಗೆ ಪ್ರವೇಶಿಸಿದ ಒಡನೆ ರಾವಣನು ತಾನೂ ಸಹ ಪ್ರವೇಶಮಾಡಿದನು.

೧೧. ಪ್ರತಿಯೊಂದು ಅಂತಸ್ತಿಗೆ ಪ್ರವೇಶಿಸುವಾಗಲೂ ಬಾಗಿಲ ಬಳಿಯಲ್ಲಿ ಒಬ್ಬ ಮನುಷ್ಯನು ಕೈಯಲ್ಲಿ ಒಂದು ಕಬ್ಬಿಣದ ಒನಕೆಯನ್ನು ಹಿಡಿದುಕೊಂಡು ನಿಂತಿದ್ದುದನ್ನು ರಾವಣನು ನೋಡಿದನು. ಆ ಮನುಷ್ಯನು ಸರ್ವಾಭರಣಭೂಷಿತ ನಾಗಿ ಕಾಡಿಗೆಯ ಬೆಟ್ಟದಂತೆ ನೀಲವರ್ಣದಿಂದ ಪ್ರಕಾಶಿಸುತ್ತಲಿದ್ದನು. ನೋಡು ವುದಕ್ಕೆ ಆತನು ಬಹಳ ಲಕ್ಷಣವಾಗಿದ್ದನು.

ದದರ್ಶ ಪುರುಷಂ ಭೀಮಂ ಜ್ವಾಲಾಮಂಡಲದುರ್ದಶಂ ।
ತಂ ತು ದೃಷ್ಟ್ವಾ ತಥಾ ಭೂತಂ ಸ ವಿವೇಶ ದಶಾನನಃ ॥ ೧೨ ॥

ಸಮಾಪ್ತಾಯಾಂ ಚ ಕಕ್ಷ್ಯಾಯಾಂ ಸ ದದರ್ಶ ತಮೇವ ಹಿ ।
ತಮುವಾಚ ಮಹಾತೇಜಾ ನಿಶಾಚರಗಣೇಶ್ವರಃ ॥ ೧೩ ॥

ಯುದ್ಧಾರ್ಥಮಹಮನುಪ್ರಾಪ್ತೋ ಯುದ್ಧಾತಿಥ್ಯಂ ಪ್ರಯಚ್ಛ ಮೇ ।
ಅಥ ವಾ ತಸ್ಯ ಶಂಸ ತ್ವಂ ಗೃಹೇ ಯೋಽಸ್ಮಿನ್ವ್ಯವಸ್ಥಿತಃ ॥ ೧೪ ॥

ತತೋ ರಾಕ್ಷಸರಾಜಸ್ಯ ಪುರುಷೋ ವಾಕ್ಯಮಬ್ರವೀತ್ ।
ತಿಷ್ಠತ್ಯಸ್ಮಿನ್ಗೃಹೇ ರಾಜಾ ದಾನವಾನಾಂ ಬಲಿರ್ಬಲೀ ॥ ೧೫ ॥

ತೇನ ಚೇದ್ಯೋತ್ಸ್ಯಸೇ ವೀರ ಪ್ರವಿಶೇದಂ ಗೃಹೋತ್ತಮಂ ।
ಯೋದ್ಧುಂ ನಾರ್ಹಸಿ ತೇನ ತ್ವಂ ಸ ಮಹಾತ್ಮಾ ಮಹಾಬಲಃ ॥ ೧೬ ॥

---

೧೨. ಈ ಪ್ರಕಾರವಾಗಿ ಏಳು ಅಂತಸ್ತುಗಳ ಬಾಗಿಲುಗಳಲ್ಲೂ ಒಂದೇ ವಿಧವಾದ ಮುಸಲಧಾರಿಯಾಗಿ ನಿಂತಿದ್ದ ಆ ಮನುಷ್ಯನನ್ನು ರಾವಣೇಶ್ವರನು ನೋಡಿ, ಜ್ವಾಲಾಮಂಡಲದಂತೆ ಹೊಳೆಯುತ್ತಿರುವ ಆ ಭಯಂಕರ ವೀರಪುರುಷನನ್ನು ಕುರಿತು ಈ ಮಾತನ್ನು ಕೇಳಿದನು.

೧೩-೧೪. ನೀನಾರಯ್ಯ! ವೀರಪುರುಷನಂತೆ ತೋರುತ್ತಿರುವೆ. ಪ್ರತಿಯೊಂದು ಅಂತಸ್ತಿನ ಬಾಗಿಲಿನಲ್ಲಿಯೂ ಒಂದೇ ವಿಧವಾದ ಆಕಾರವನ್ನು ತಳೆದು ನಿಂತಿರುತ್ತೀಯೆ! ನಾನು ನಿನ್ನೊಡನೆ ಯುದ್ಧಮಾಡಿ ಗೆಲ್ಲಬೇಕೆಂದು ಅಪೇಕ್ಷೆಪಡುತ್ತಿರುವೆನಾದ್ದರಿಂದ ನನಗೆ ಯುದ್ಧಾತಿಥ್ಯವನ್ನು ಕೊಡಯ್ಯಾ! ಅಥವಾ ಈ ಮನೆಯಲ್ಲಿ ನೀನು ಹೊರತು ಮತ್ತಾರಾದರೂ ವಾಸಮಾಡುತ್ತಿರುವರೋ ಅದನ್ನಾದರೂ ತಿಳಿಸೆಂದು ಪ್ರಶ್ನೆಮಾಡಿದನು.

೧೫. ಏಳನೇ ಅಂತಸ್ತಿನಲ್ಲಿ ನಿಂತಿದ್ದ ಆ ಮಹಾಪುರುಷನು ರಾವಣನನ್ನು ಕುರಿತಿಂತೆಂದನು :—ಈ ಮನೆಯಲ್ಲಿ ದಾನವರಿಗೆಲ್ಲಾ ರಾಜನಾದ ಬಹು ಬಲಶಾಲಿಯಾದ ಬಲಿಚಕ್ರವರ್ತಿಯು ವಾಸಮಾಡುತ್ತಿರುವನು.

೧೬. ನಿನಗೆ ಅವನೊಡನೆ ಯುದ್ಧಮಾಡುವ ಶಕ್ತಿಯೇನಾದರೂ ಇದ್ದರೆ ಈ

**ಬ್ರಹ್ಮಣ್ಯಶ್ಚ ಶರಣ್ಯಶ್ಚ ಶೂರಃ ಸತ್ಯಪರಾಕ್ರಮಃ ।**
**ವೀರೋ ಬಹುಗುಣೋಪೇತೋ ಬಲವಾನ್ದೃಢವಿಕ್ರಮಃ ।**
**ಬಾಲಾರ್ಕ ಇವ ತೇಜಸ್ವೀ ಸಮರೇಷ್ವನಿವರ್ತಕಃ** ॥ ೧೭ ॥

**ಪ್ರಿಯಂವದಃ ಸಂವಿಭಾಗೀ ಗೂಢಸಾಕ್ಷ್ಯಾಯ ತತ್ಪರಃ ।**
**ಏವಮುಕ್ತೋ ದಶಗ್ರೀವಃ ಪ್ರವಿವೇಶ ಗೃಹೋತ್ತಮಂ** ॥ ೧೮ ॥

**ಅಥ ಸಂದರ್ಶನಾದೇವ ಬಲಿನಾ ಸುಮಹಾತ್ಮನಾ ।**
**ಶೀಘ್ರಮುತ್ಸಂಗಮಾರೋಪ್ಯ ಪೃಷ್ಟಸ್ತ್ವಾಗಮನಂ ತತಃ** ॥ ೧೯ ॥

**ತಸ್ಯೋವಾಚ ಮಹಾತೇಜಾ ರಾವಣೋ ರಾಕ್ಷಸಾಧಿಪಃ ।**
**ಶ್ರುತಂ ಮಯಾ ಮಹಾಭಾಗ ಬದ್ಧಸ್ತ್ವಂ ಕಿಲ ವಿಷ್ಣುನಾ** ॥ ೨೦ ॥

---

ಮನೆಯೊಳಕ್ಕೆ ಹೋಗು. ಆದರೆ ಈ ಬಲೀಂದ್ರನು ಮಹಾತ್ಮನೂ ಪರಾಕ್ರಮಿಯೂ ಆದುದರಿಂದ ನೀನು ಅವನೊಡನೆ ಯುದ್ಧಮಾಡಿ ಖಂಡಿತವಾಗಿಯೂ ಗೆಲ್ಲಲಾರೆಯೆಂದು ತೋರುತ್ತದೆ.

೧೭. ಈ ಬಲಿಮಹಾರಾಜನು ಒಳ್ಳೇ ಬ್ರಹ್ಮನಿಷ್ಠನು. ಶರಣಾಗತಪರಿಪಾಲಕನು. ಮಹಾಸತ್ಯಸಂಧನು, ಅತಿ ಬಲಶಾಲಿಯು, ಈ ವೀರನು ಬಹಳ ಸದ್ಗುಣದಿಂದ ಕೂಡಿದವನು, ಇದ್ದ ಸಂಗತಿಯನ್ನು ನಿನಗೆ ಮರೆಮಾಚದೆ ತಿಳಿಸಿರುತ್ತೇನೆ, ನೋಡೆಂದು ಆ ದ್ವಾರಪಾಲಕನು ರಾವಣನಿಗೆ ತಿಳಿಸಿದನು.

೧೮. ದ್ವಾರಪಾಲಕನು ಬಲಿಚಕ್ರವರ್ತಿಯ ಗುಣಗಣಗಳನ್ನು ಪ್ರಶಂಸಿಸಿ, ನೀನು ಅವನೊಡನೆ ಯುದ್ಧಮಾಡಲಾರೆಯೆಂದೂ, ಗೆಲ್ಲಲಾರೆಯೆಂದೂ ಎಷ್ಟೋ ಬಗೆಯಲ್ಲಿ ಹೇಳಿದಾಗ್ಯೂ ಸಹ ರಾವಣನು ಅದನ್ನು ಲಕ್ಷ್ಯಕ್ಕೆ ತಾರದೆ ಆ ಭುವನವನ್ನು ಪ್ರವೇಶಿಸಿಯೇ ಬಿಟ್ಟನು.

೧೯. ಆರೀತಿ ಒಳಗೆ ಪ್ರವೇಶಿಸಿದ ರಾವಣನನ್ನು ಒಳಗೆ ಸಿಂಹಾಸನದ ಮೇಲೆ ಮಂಡಿಸಿದ್ದ ಬಲಿಚಕ್ರವರ್ತಿಯು ನೋಡಿದೊಡನೆಯೇ ಬಲು ಬೇಗ ಎದ್ದುಬಂದು ಅವನನ್ನು ಬಾಚಿ ತಬ್ಬಿಕೊಂಡು ತೊಡೆಯ ಮೇಲೆ ಕೂರಿಸಿಕೊಂಡವನಾಗಿ, ಮಗು ! ಸುಖವಾಗಿ ಬಂದೆಯಾ ? ಎಂದು ಕೇಳಿದನು.

೨೦. ಈ ಮೇರೆ ತನ್ನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಪ್ರಶ್ನೆ

**ಸೋಽಹಂ ಮೋಚಯಿತುಂ ಶಕ್ತೋ ಬಂಧನಾತ್ತ್ವಾಂ ನ ಸಂಶಯಃ ।**
**ಏವಮುಕ್ತಸ್ತತೋ ಹಾಸಂ ಬಲಿರ್ಮುಕ್ತ್ವೇದಮಬ್ರವೀತ್ ॥ ೨೧ ॥**

**ಏತೇ ಮೇ ಕುಂಡಲೇ ದಿವ್ಯೇ ಮಹಾರತ್ನೋಪಶೋಭಿತೇ ।**
**ಅನಯೋರೇಕಮಾನೀಯ ಚಾತ್ರೋಪವಿಶ ಮಾ ಚಿರಂ ॥ ೨೨ ॥**

**ಅತ್ರೋಪವಿಷ್ಟಸ್ಯ ಚ ತೇ ವ್ಯಾಖ್ಯಾಸ್ಯೇ ವಿಷ್ಣುವಿಕ್ರಮಂ ।**
**ಏವಮುಕ್ತೋ ದಶಗ್ರೀವಃ ಕುಂಡಲಾನಯನೇ ತತಃ ॥ ೨೩ ॥**

---

ಮಾಡಿದ ಬಲಿಚಕ್ರವರ್ತಿಯನ್ನು ನೋಡಿ ಮಹಾವೀರ್ಯಶಾಲಿಯಾದ ರಾವಣನು, ನೀನೇಯೋ? ಬಲಿಚಕ್ರವರ್ತಿಯೆನ್ನುವವನು! ನಾನು ನಿನ್ನ ವಿಚಾರವನ್ನು ಬಹು ಜನರ ಬಾಯಿಯಲ್ಲಿ ಕೇಳಿದ್ದೆನು. ನಿನ್ನನ್ನು ವಿಷ್ಣುವು ಪಾತಾಳಲೋಕದಲ್ಲಿ ಬಂಧನ ದಲ್ಲಿಟ್ಟಿರುವನೆಂಬ ವಿಚಾರವೂ ಸಹ ನನ್ನ ಕಿವಿಗೆ ಬಿದ್ದಿತ್ತು. ಅದೇ ಬಲಿಯೇನಯ್ಯಾ! ನೀನು.

೨೧. ಅಯ್ಯೋ, ಪಾಪ! ನೀನು ಇಂತಹ ಅವಸ್ಥೆಯಲ್ಲಿ ಬಿದ್ದಿರುವುದನ್ನು ನೋಡಿ ನನಗೆ ಬಹು ದುಃಖವಾಗುತ್ತಲಿದೆ. ನಾನು ಹೇಗೂ ಈಗ ನಿನ್ನ ಸಮೀಪಕ್ಕೆ ಬಂದಿದ್ದೇನೆ. ನಿನ್ನನ್ನು ಈ ಬಂಧನದಿಂದ ಬಿಡಿಸಿಬಿಡುತ್ತೇನೆ. ನಿನ್ನನ್ನು ಬಿಡುಗಡೆ ಮಾಡುವ ಶಕ್ತಿಯು ನನಗುಂಟೆಂದು ಹೇಳಿದ ರಾವಣನ ಮಾತನ್ನು ಕೇಳಿ, ಬಲಿಚಕ್ರವರ್ತಿಯು ಕಿಲಕಿಲನೆ ನಕ್ಕು ಹಾಸ್ಯಮಾಡುತ್ತಾ ರಾವಣನೊಡನಿಂತೆಂದನು.

೨೨. ಮಗು! ರಾವಣ! ನಿನಗೇನೂ ತಿಳಿಯದು. ಏನೋ ಜಂಭದ ಮಾತನಾಡುತ್ತಿದ್ದೀಯೆ! ಹೇಗೋ ನೀನು ನನ್ನ ಮನೆಯೊಳಕ್ಕೆ ಬಂದುಬಿಟ್ಟಿದ್ದೀಯೆ! ಬಂದ ಮೇಲೆ ಹಾಗೇ ಹೋಗಬಾರದು. ನನ್ನ ಕಿವಿಗಳಲ್ಲಿ ವಜ್ರಖಚಿತವಾದೆರಡು ಕುಂಡಲ (ಕಡಕು) ಗಳಿವೆ. ಅದರಲ್ಲಿ ಒಂದನ್ನು ನನ್ನ ಕಿವಿಯಿಂದ ಕಳಚಿಕೊಂಡು ಬಂದು ಸ್ವಲ್ಪ ಹೊತ್ತು ಇಲ್ಲಿಯೇ ಕುಳಿತು ವಿಶ್ರಮಿಸಿಕೋ.

೨೩. ನೀನು ಸುಖವಾಗಿ ಕುಳಿತುಕೊಂಡ ಬಳಿಕ ಆ ವಿಷ್ಣುವೆಂಬುವವನಾರು? ಆವನ ಮಹಿಮೆಯೆಂತಹುದೆಂಬುದನ್ನು ನಿನಗೆ ನಾನು ವಿವರವಾಗಿ ತಿಳಿಸುತ್ತೇನೆಂದು ಹೇಳಲು, ಅದೇ ಮೇರೆ ರಾವಣನು ಬಲಿಚಕ್ರವರ್ತಿಯ ಕಿವಿಯಲ್ಲಿದ್ದ ವಜ್ರದ ಕಡ ಕನ್ನು ಕಳಚಲು ಪ್ರಯತ್ನಮಾಡಿದನು.

ಚಕಾರ ಪರಮಂ ಯತ್ನಂ ನ ಶಶಾಕ ಚ ಶತ್ರುಹಾ ।
ಯದಾ ಚಾಲಯಿತುಂ ಸ್ಥಾನಾನ್ನ ಶಶಾಕ ಸ ಕುಂಡಲಂ ॥ ೨೪ ॥

ಪ್ರಸ್ವಿನ್ನಸರ್ವಗಾತ್ರಸ್ತು ಸಂದಷ್ಟದಶನಚ್ಛದಃ ।
ಭ್ರುಕುಟೀಸಂಕಟಮುಖಃ ಪರಂ ವಿಸ್ಮಯಮಾಗತಃ ॥ ೨೫ ॥

ಉತ್ಸಂಗೇ ತದವಸ್ಥೇ ತು ಬಲಿಃ ಕೃತ್ವೇದಮಬ್ರವೀತ್ ।
ಹಿರಣ್ಯಕಶಿಪುರ್ನಾಮಾಭವನ್ಮೇ ಪ್ರಪಿತಾಮಹಃ ॥ ೨೬ ॥

ಯದಾ ಬಭೂವ ತಸ್ಯೇಮೇ ಕುಂಡಲೇ ವೈ ಬಭೂವತುಃ ।
ಏತಾಭ್ಯಾಂ ಕುಂಡಲಾಭ್ಯಾಂ ತು ಸೋಽಭೂತ್ಪೂರ್ವಂ ವಿಭೂಷಿತಃ ॥

---

೨೪. ಎಷ್ಟೋ ಪ್ರಯತ್ನಗಳನ್ನು ಮಾಡಿದಾಗ್ಯೂ ಆ ಕಡಕುಗಳನ್ನು ತೆಗೆಯಲು ರಾವಣನ ಕೈಯಿಂದ ಸಾಧ್ಯವಾಗಲೇ ಇಲ್ಲ. ರಾವಣನ ಪ್ರಯತ್ನಗಳೆಲ್ಲಾ ನಿಷ್ಫಲವಾಗಿ ಹೋದುವು. ಕೈಸೋತುಹೋಯಿತು.

೨೫. ಮೈಯಲ್ಲಿ ಬೆವರು ಹರಿಯಲಾರಂಭಿಸಿತು. ಹಲ್ಲುಮುಡಿ ಕಚ್ಚಿದನು, ಮುಕ್ಕರಿಸಿದನು, ಹುಬ್ಬು ಗಂಟಿಕ್ಕಿದನು. ಎಷ್ಟೆಷ್ಟೋ ಅಂಗವಿಕಾರಗಳನ್ನು ಮಾಡಿದರೂ, ಉಹು! ಏನೇನೂ ಸಾಗಲಿಲ್ಲ.

೨೬. ರಾವಣನನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡು ಅವನನ್ನು ಇಂತಹ ದುರವಸ್ಥೆಗೆ ಗುರಿಮಾಡಿದ ಬಲಿಯು ನಗುನಗುತ್ತಾ ರಾವಣನೊಡನಿಂತೆಂದನು: ಮಗು! ಏನೋ ಯಾರೋ ಮಹಾವಿಷ್ಣುವಂತೆ! ನಿನ್ನನ್ನು ಬಂಧನದಲ್ಲಿಟ್ಟಿರುವನಂತೆ! ನಾನು ಬಿಡಿಸಿಕೊಂಡು ಹೋಗುತ್ತೇನೆಂದು ಬರೀ ಬಾಯಲ್ಲಿ ಪರುಶವಣೆ ಕೊಚ್ಚಿಕೊಂಡೆಯಲ್ಲಪ್ಪ! ಸ್ವಲ್ಪ ಕೇಳು. ಆ ಮಹಾವಿಷ್ಣುವಿನ ಮಹಿಮೆಯೆಂತಹುದೆಂಬುದನ್ನು ನಿನಗೆ ಸ್ವಲ್ಪ ವಿವರಿಸುವೆನು. ಮಗು, ರಾವಣ! ಬಹಳ ಕಾಲದ ಹಿಂದೆ ನನ್ನ ಮುತ್ತಾತ (ಪ್ರಪಿತಾಮಹ) ಹಿರಣ್ಯಕಶಿಪುವೆಂಬ ರಾಕ್ಷಸನಿದ್ದನೆಂದು ನೀನು ಕೇಳಿದೀಯಷ್ಟೆ?

೨೭. ಆ ಹಿರಣ್ಯಕಶಿಪುವು ಈ ಮಹಾರತ್ನಗಳಿಂದ ಕೆತ್ತಲ್ಪಟ್ಟು ಥಳಥಳನೆ ಹೊಳೆಯುತ್ತಿರುವ ಈ ಕುಂಡಲಗಳನ್ನು ತಾನು ಬದುಕಿದ್ದಾಗ ತನ್ನ ಕಿವಿಗಳಲ್ಲಿ ಧರಿಸುತ್ತಿದ್ದನು.

ಊರ್ವೋರಾರೋಪ್ಯ ನಖರೈಃ ಕರೈಸ್ತೇನ ವಿದಾರಿತಃ ।
ಕಥಮುದ್ಯ ಮಹಾಭಾಗಂ ತಂ ತ್ವಂ ಜೇತುಂ ವ್ಯವಸ್ಯಸಿ ॥ ೨೮ ॥

ಸ ಏವ ಪುರುಷಃ ಶ್ಯಾಮೋ ದ್ವಾರಿ ತಿಷ್ಠತಿ ನಿತ್ಯಶಃ ।
ಏತೇನ ದಾನವೇಂದ್ರಾಶ್ಚ ತಥಾನ್ಯೇ ಬಲದರ್ಪಿತಾಃ ॥ ೨೯ ॥

ವಶಂ ನೀತಾ ಬಲವತಾ ಪೂರ್ವಪೂರ್ವತರಾಶ್ಚ ಯೇ।
ಬದ್ಧಶ್ಚಾಹಮನೇನೈವ ಕಾಲೋಯಂ ದುರತಿಕ್ರಮಃ ॥ ೩೦ ॥

ಕ ಏನಂ ಪುರುಷಂ ಲೋಕೇ ವಂಚಯಿಷ್ಯತಿ ರಾಕ್ಷಸ ।
ಲೋಕತ್ರಯಸ್ಯ ಸರ್ವಸ್ಯ ಕರ್ತಾ ಹರ್ತಾ ತಥೈವ ಚ ॥ ೩೧ ॥

---

೨೮. ಅಂತಹ ವೀರನಾದ ನನ್ನ ಮುತ್ತಾತ (ಹಿರಣ್ಯಕಶ್ಯಪು) ನನ್ನು ಮಹಾವಿಷ್ಣುವು ನರಸಿಂಹಸ್ವಾಮಿಯ ಅವತಾರವನ್ನು ತಳೆದು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು, ತನ್ನ ಉಗುರುಗಳಿಂದ ಅವನ ಎದೆಯನ್ನು ಬಗೆದು ಅವನ ಕರುಳನ್ನು ಮಾಲೆ ಹಾಕಿಕೊಂಡುಬಿಟ್ಟನು. ಆಹ! ನಿನ್ನ ಪೆಚ್ಚುಮೋರೆಗೆ ನಾನೇನು ತಾನೇ ಹೇಳಲಿ, ಅಂತಹ ಆ ಮಹಾವಿಷ್ಣುವನ್ನು ನೀನು, — ತೀರ ಅಶಕ್ತನಾದ ಕಡಕುಗಳನ್ನು ಸಹ ಕಳಚಲಾರದ ಹೇಡಿಯಾದ ನೀನು,— ಜಯಿಸಿ ನನ್ನನ್ನು ಬಿಡಿಸಿಕೊಳ್ಳುವಿಯಾ? ನೀನವೆಂತು ಇದನ್ನು ಯೋಚಿಸಿದೆಯಯ್ಯಾ!

೨೯. ರಾವಣ! ಕೇಳು. ನೀನು ಏಳು ಅಂತಸ್ತಿನ ಬಾಗಿಲುಗಳನ್ನೂ ತಟಹಾದು ಒಳಗೆ ಬರುವಾಗಲೆಲ್ಲಾ ಪ್ರತಿ ಬಾಗಿಲಲ್ಲೂ ಒಬ್ಬ ನೀಲಮೇಘಶ್ಯಾಮವಿಗ್ರಹನನ್ನು ನೋಡಿದೆಯಷ್ಟೆ? ಅವನು ನಿತ್ಯವೂ ಹೀಗೆಯೇ ಅಲ್ಲಿಯೇ ನಿಂತಿರುತ್ತಾನೆ. ಕೊಬ್ಬಿದ ರಾಕ್ಷಸರೂ, ಇತರ ದುರಹಂಕಾರಿಗಳಾದ ದುಷ್ಟರೂ ಸಹ ಇವನಿಂದಲೇ ಹತರಾಗಿದ್ದಾರೆ. ಅವನನ್ನೇ ಮಹಾವಿಷ್ಣುವನ್ನಾಗಿ ತಿಳಿದುಕೋ.

೩೦. ನಮ್ಮ ಪೂರ್ವಿಕರಾದ ಮಹಾಪರಾಕ್ರಮಶಾಲಿಗಳೆನಿಸಿಕೊಂಡಿದ್ದವರೆಲ್ಲರೂ ಈ ಮಹಾಪುರುಷನಿಂದಲೇ ಮುಕ್ತಿಯನ್ನು ಹೊಂದಿರುತ್ತಾರೆ. ನಾನೂ ಕೂಡ ಈ ಮಹಾವಿಷ್ಣುವಿನಿಂದ ಬದ್ಧನಾಗಿ ಇಲ್ಲಿ (ಪಾತಾಳದಲ್ಲಿ) ವಾಸಮಾಡುತ್ತಲಿದ್ದೇನೆ. ಕಾಲಗತಿಯನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ.

೩೧. ಎಲೋ, ದುರುಳ ರಾವಣ! ಕೇಳು. ಈ ಮಹಾ ಪ್ರಭುವನ್ನು

**ಸಂಹರತ್ಯೇಷ ಭೂತಾನಿ ಸ್ಥಾವರಾಣಿ ಚರಾಣಿ ಚ ।**
**ಪುನಶ್ಚ ಸೃಜತೇ ಸರ್ವಮನಾದ್ಯಂತೋ ಮಹೇಶ್ವರಃ ॥ ೩೨ ॥**

**ಇಷ್ಟಂ ಚೈವ ಹುತಂ ಚೈವ ತಪಸ್ತಪ್ತಂ ತಥೈವ ಚ ।**
**ಸರ್ವಸ್ಯೈವ ಹಿ ಲೋಕೇಶೋ ಧಾತಾ ಗೋಪ್ತಾ ನ ಸಂಶಯಃ ॥ ೩೩ ॥**

**ಸರ್ವದೇವಮಯಶ್ಚೈವ ಸರ್ವಭೂತಮಯಸ್ತಥಾ ।**
**ಸರ್ವಲೋಕಮಯಶ್ಚೈವ ಸರ್ವಜ್ಞಾನಮಯಸ್ತಥಾ ॥ ೩೪ ॥**

**ಸರ್ವರೂಪೀ ಮಹಾರೂಪೀ ಮಹಾಬಾಲೋ ಮಹಾಭುಜಃ ।**
**ಸ್ಮೃತ್ವಾ ಸ್ತುತ್ವಾ ತಥೇಷ್ಟ್ವಾ ಚ ಸರ್ವಮಸ್ಮಾದವಾಪ್ನುಯಾತ್ ॥ ೩೫ ॥**

---

ವಂಚಿಸಲಾಗಿಂದಲೂ ಸಾಧ್ಯವಿಲ್ಲ. ಈ ತ್ರಿಲೋಕವನ್ನು ಸೃಷ್ಟಿಸುವವನೂ ಅವನೇ. ಸಂರಕ್ಷಿಸುವವನೂ ಅವನೇ. ಸಂಹರಿಸುವವನೂ ಅವನೇ.

೩೨. ಸ್ಥಾವರ ಜಂಗಮಾತ್ಮಕವಾದೀ ಸಕಲ ಜಗತ್ತನ್ನೂ ಈ ಮಹಾನುಭಾವನೇ ಸಂಹರಿಸುತ್ತಾನೆ. ಮತ್ತೂ ಮತ್ತೂ ನಿರ್ಮಿಸುತ್ತಾನೆ. ಈ ಪರಮೇಶ್ವರನು (ಮಹಾವಿಷ್ಣುವು) ತುದಿ ಮೊದಲಿಲ್ಲದವನೆಂದು ತಿಳಿದುಕೋ !

೩೩. ಸಕಲ ಯಜ್ಞಗಳಿಗೂ, ಹೋಮಗಳಿಗೂ, ತಪಸ್ಸುಗಳಿಗೂ, ಈ ಯಜ್ಞಪುರುಷನೇ ಯಜಮಾನನು, ಸಕಲ ಲೋಕಗಳಿಗೂ ಇವನೇ ನಿಯಾಮಕನು. ಹುಟ್ಟಿಸುವವನೂ ಬದುಕಿಸುವವನೂ ಸಹ ಇವನೇ.

೩೪. ಈ ಮಹಾ ವಿಷ್ಣುವೇ ಸಕಲ ದೇವತಾಸ್ವರೂಪನೆಂದು ತಿಳಿದುಕೋ! ಸಕಲ ಭೂತಗಳಲ್ಲೂ ಅಂತರ್ಯಾಮಿಯಾಗಿರುವವನೂ ಈ ಸ್ವಾಮಿಯೇ ಎಂದು ತಿಳಿದುಕೋ ! ಸರ್ವಲೋಕಸ್ವರೂಪನೂ ಸರ್ವಜ್ಞಾನಸ್ವರೂಪನೂ ಸಹ ಇವನೇ.

೩೫. ಸರ್ವರೂಪಿಯಾಗಿಯೂ, ಮಹಾರೂಪಿಯಾಗಿಯೂ, ಮಹಾಬಲನಾಗಿಯೂ, ಪ್ರಳಯಪಯೋಧಿಯಲ್ಲಿ ಪುಟ್ಟಮಗುವಾಗಿ ಮಲಗಿಯೂ ಇರುವ ಈ ಭಗವಂತನನ್ನು ಸ್ಮರಿಸಿದರೆ, ಪೂಜಿಸಿದರೆ, ಸ್ತುತಿಸಿದರೆ, ಜಪಿಸಿದರೆ, ಅಂತಹ ಭಕ್ತರಿಗೆಲ್ಲರಿಗೂ ಈ ಮಹಾನುಭಾವನು ಸಕಲೇಷ್ಟಾರ್ಥಗಳನ್ನೂ ಕೊಟ್ಟು ಕಾಪಾಡುವನು.

ಏತಚ್ಛ್ರುತ್ವಾ ಚ ವಚನಂ ರಾವಣೋ ನಿರ್ಯಯೌ ತದಾ ।
ನ ಚ ತಂ ಪುರುಷಂ ತತ್ರ ದದರ್ಶ ರಜನೀಚರಃ ॥ ೩೬ ॥

ಸಮೇತ್ಯ ರಕ್ಷೋಽಧಿಪತಿಃ ಸಹಾಯು
ಶ್ಚಚಾರ ಭೂಯಃ ಪೃಥಿವೀಂ ಸಮಗ್ರಾಂ ।
ನ ಚಾಪ್ಯಸೌ ಕಂಚಿದಪಶ್ಯತಾನ್ಯಂ
ಲೋಕೇಷು ಧೀರಂ ತ್ರಿದಶಾರಿಮುಖ್ಯಃ ॥ ೩೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂ ಪ್ರತಿ ನಾರಾಯನ ವಾಕ್ಯೇ
ಬಲಿರಾವಣ ಸಮಾಗಮೋ ನಾಮಾಷ್ಟ ತ್ರಿಂಶದುತ್ತರ
ದ್ವಿಶತತಮೋಽಧ್ಯಾಯಃ.

೩೬. ಬಲಿಚಕ್ರವರ್ತಿಯು ತನ್ನನ್ನು ತೊಡೆಯ ಮೇಲೆ ಕೂರಿಸಿಕೊಂಡು ಕಡಕಿನ ನೆವಮಾಡಿ ಹೇಳಿದ ಈ ಮಾತನ್ನು ಕೇಳಿ ರಾವಣನು, ಆ ವಜ್ರದ ಕಡಕಿನ ಆಶೆಯನ್ನು ಬಿಟ್ಟು, ಅದನ್ನು ಕಳಚಿಕೊಳ್ಳಲಾರದೆ ಯಾವ ಮಾತನ್ನೂ ಆಡದೆ ಯಾರಿಗೂ ಹೇಳದೆ ಕೇಳದೆ ಬಂದ ದಾರಿಯಲ್ಲೇ ಹಿಂತಿರುಗಿ ಹೊರಟುಹೋದನು. ಆಗ ಆ ಮಹಡಿಯ ಏಳು ಅಂತಸ್ತನ್ನೂ ಕಳೆದು ಇಳಿದು ಬಂದಾಗ ಬಾಗಿಲಿನಲ್ಲಿ ಮೊದಲು ಕಂಡ ಮನುಷ್ಯನನ್ನು ಮಾತ್ರ ಕಾಣಲಿಲ್ಲ.

೩೭. ರಾವಣನು ಇಷ್ಟಾದ ಬಳಿಕ ತನ್ನ ಸಹಾಯಕರೊಡನೆ ತನ್ನ ಊರಿಗೆ ಹೋಗಿ ಸೇರಿಕೊಂಡನು. ಪುನಃ ಭೂಮಂಡಲವನ್ನು ಎಷ್ಟೋ ಬಾರಿ ಸುತ್ತಾಡಿದನು. ಆದರೆ ಪಾತಾಳಲೋಕದಲ್ಲಿ ಬಲಿಚಕ್ರವರ್ತಿಯ ಮನೆಯ ಬಾಗಿಲಿನಲ್ಲಿ ಕಂಡ ಮಹಾನುಭಾವನಂತಹ ಮತ್ತೊಬ್ಬ ಮನುಷ್ಯನನ್ನು ಮಾತ್ರ ಪುನಃ ಎಲ್ಲಿಯೂ ಅವನು ಕಾಣಲೇ ಇಲ್ಲ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಬಲಿರಾವಣಸಮಾಗಮವೆಂಬ ಹೆಸರಿನ
ಇನ್ನೂರಮೂವತ್ತೆಂಟನೆಯ ಅಧ್ಯಾಯವು
ಮುಗಿದುದು.

ಶ್ರೀ

# ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ಏಕೋನಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

॥ ನಾಡಾಯನ ಉವಾಚ ॥

**ಸ ಕದಾಚಿನ್ಮಹೀಂ ಸರ್ವಾಂ ವಿಚರನ್ಧನದಾನುಜಃ ।**
**ಪಶ್ಚಿಮೇ ಸಾಗರದ್ವೀಪೇ ದದರ್ಶ ಪುರುಷಂ ಶುಭಂ ॥ ೧ ॥**

**ಜಾಂಬೂನದಸಮಪ್ರಖ್ಯಂ ಜ್ವಲಿತಾನಲಸುಪ್ರಭಂ ।**
**ವಿಶ್ವರೂಪಧರಂ ದೇವಂ ವರದಂ ಕಾಮರೂಪಿಣಂ ॥ ೨ ॥**

---

### ಇನ್ನೂರಮೂವತ್ತೊಂಭತ್ತನೆಯ ಅಧ್ಯಾಯವು.

೧. ನಾಡಾಯನನು ಪುನಃ ಶೈಲೂಷನನ್ನು ಕುರಿತು ಹೇಳುತ್ತಾನೆ:—
ಕೇಳಯ್ಯಾ, ಶೈಲೂಷ! ಹೀಗೆಯೇ ರಾವಣನು ಇಲ್ಲಿ ಅಲ್ಲಿ ಭೂಮಂಡಲದಲ್ಲೆಲ್ಲಾ ಸಂಚರಿಸುತ್ತಲಿರುವ ಸಮಯದಲ್ಲಿ ಪಶ್ಚಿಮಸಾಗರದ ಒಂದಾನೊಂದು ದ್ವೀಪದಲ್ಲಿ ಮಂಗಳಕರನಾದ ಒಬ್ಬ ಪುರುಷನನ್ನು ನೋಡಿದನು.

೨. ಆ ಮಹಾತ್ಮನು ಸುವರ್ಣದಂತೆ ಪ್ರಕಾಶಮಾನನಾಗಿಯೂ, ತೇಜೋಯುಕ್ತವಾದ ಮುಖದಿಂದ ಕೂಡಿದವನಾಗಿಯೂ, ಕಾಮರೂಪಿಯಾಗಿಯೂ ವರಪ್ರದನಾಗಿಯೂ, ವಿಶ್ವರೂಪಧಾರಿಯಾಗಿಯೂ ಕಾಣಿಸಿದನು.

ಧರ್ಮಸ್ತಸ್ಯ ತಪಶ್ಚೈವ ಜಗತಃ ಸಿದ್ಧಿಹೇತುಕೇ ।
ಊರೂ ಚಾಶ್ರಿತ್ಯ ತತ್ಸ್ಥಾನೇ ಮನ್ಮಥಃ ಶಿಶ್ನಮಾಶ್ರಿತಃ ॥ ೩ ॥

ವಿಶ್ವೇದೇವಾಃ ಕಟೀಭಾಗೇ ಮರುತೋ ಬಸ್ತಿಶೀರ್ಷಕೇ ।
ಪಾದಯೋಶ್ಚ ಧರಾ ದೇವೀ ಪಿಶಾಚಾಶ್ಚ ನಖಾಶ್ರಿತಾಃ ॥ ೪ ॥

ಮಧ್ಯೇಽಷ್ಟೌ ವಸವಸ್ತಸ್ಯ ಸಮುದ್ರಾಃ ಕುಕ್ಷಿಮಾಶ್ರಿತಾಃ ।
ಪಾರ್ಶ್ವೇಷು ಚ ದಿಶಃ ಸರ್ವಾಃ ಸರ್ವಸಂಧಿಷು ಮಾರುತಃ ॥ ೫ ॥

ಪಿತರಶ್ಚಾಶ್ರಿತಾಃ ಪೃಷ್ಠೇ ಹೃದಯೇ ಚ ಪಿತಾಮಹಃ ।
ಗೋದಾನಾನಿ ಪವಿತ್ರಾಣಿ ಭೂಮಿದಾನಾನಿ ಯಾನಿ ಚ ॥ ೬ ॥

ಸುವರ್ಣಸ್ಯ ಚ ದಾನಾನಿ ಯಕೃಲ್ಲೋಮಾಂತರಾಣಿ ಚ ।
ಅಸ್ಥಿಭಾಗೇಷು ಶೈಲಾಶ್ಚ ಸಿರಾಸು ಸರಿತಸ್ತಥಾ ॥ ೭ ॥

---

೩. ಪ್ರಪಂಚದಲ್ಲಿ ಸಿದ್ಧಿಗೆ ಕಾರಣಗಳಾದ ಧರ್ಮವೂ, ತಪಸ್ಸೂ, ಆತನ ತೊಡೆಗಳನ್ನು ಆಶ್ರಯಿಸಿಕೊಂಡು ವಾಸಮಾಡುತ್ತಿದ್ದುವು. ಮನ್ಮಥನು ಆತನ ಶಿಶ್ನವನ್ನಾಶ್ರಯಿಸಿಕೊಂಡು ಕುಳಿತಿದ್ದನು.

೪. ವಿಶ್ವೇದೇವತೆಗಳು ಸೊಂಟವನ್ನಾಶ್ರಯಿಸಿಕೊಂಡಿದ್ದರು. ಸಪ್ತಮರುತ್ತುಗಳೂ ಶಿರಸ್ಸನ್ನಾಶ್ರಯಿಸಿಕೊಂಡು ವಿರಾಜಿಸುತ್ತಿದ್ದರು. ಭೂದೇವಿಯು ಆತನ ಪಾದಗಳಲ್ಲಿ ವಾಸವಾಗಿದ್ದಳು. ಆತನ ಉಗುರುಗಳಲ್ಲಿ ಪಿಶಾಚಿಗಳು ವಾಸಿಸುತ್ತಿದ್ದುವು.

೫. ಮಧ್ಯಭಾಗದಲ್ಲಿ ಅಷ್ಟವಸುಗಳೂ, ಆತನ ಹೊಕ್ಕುಳಲ್ಲಿ ಸಪ್ತಸಮುದ್ರಗಳೂ ವಾಸವಾಗಿದ್ದುವು. ಉಭಯ ಪಾರ್ಶ್ವಗಳಲ್ಲೂ ಸಕಲ ದಿಕ್ಕುಗಳೂ ವಾಸವಾಗಿದ್ದುವು. ಸಕಲ ಸಂಧಿಗಳನ್ನೂ ವಾಯುವು ಆಶ್ರಯಿಸಿಕೊಂಡಿದ್ದನು.

೬-೭. ಬೆನ್ನಿನ ಹಿಂಭಾಗದಲ್ಲಿ ಪಿತೃದೇವತೆಗಳು ವಾಸವಾಗಿದ್ದರು. ಹೃದಯದಲ್ಲಿ ಬ್ರಹ್ಮನು ವಾಸವಾಗಿದ್ದನು. ಪವಿತ್ರವಾದ ಗೋದಾನ, ಭೂದಾನ, ಸುವರ್ಣದಾನಾದಿಗಳಾವುವುಂಟೋ ಅವುಗಳೆಲ್ಲವೂ ಮಾಂಸಖಂಡಗಳನ್ನೂ, ರೋಮಗಳನ್ನೂ ಆಶ್ರಯಿಸಿಕೊಂಡಿದ್ದುವು.

**ಮಣಿವೃಕ್ಷೋಽಭವತ್ತಸ್ಯ ಶರೀರೇ ದ್ವಾರವಸ್ಥಿತಾ ।**
**ಕೃಕಾಟಿಕಾಯಾಂ ಸಂಧ್ಯಾಶ್ಚ ತಲವಾಹಾಶ್ಚ ಯೇ ಘನಾಃ** ॥ ೮ ॥

**ಬಾಹೂ ಧಾತಾ ವಿಧಾತಾ ಚ ಭಗಃ ಪೂಷಾ ತಥಾ ಕರೌ ।**
**ನಾಗಾ ಘೋರವಿಷಾಃ ಸರ್ವೇ ಕರಜೇಷು ವ್ಯವಸ್ಥಿತಾಃ** ॥ ೯ ॥

**ಅಗ್ನಿರಾಸ್ಯಮಭೂತ್ತಸ್ಯ ಸ್ಕಂಧೌ ರುದ್ರೈರಧಿಷ್ಠಿತೌ ।**
**ದಂತಾ ಮಾಸರ್ತವಶ್ಚೈವ ದಂಷ್ಟ್ರಾಸ್ತಸ್ಯ ತು ವತ್ಸರಃ** ॥ ೧೦ ॥

**ನಾಸಾಯಾಂ ಚಾಪ್ಯಮಾವಾಸ್ಯಾ ತಚ್ಛಿದ್ರೇಷು ಚ ವಾಸರಾಃ ।**
**ಗ್ರೀವಾ ತಸ್ಯಾಭವದ್ವೇದೀ ವಾಣೀ ಚಾಥ ಸರಸ್ವತೀ** ॥ ೧೧ ॥

**ನಾಸತ್ಯೌ ಶ್ರವಣೌ ಚೋಭೌ ನೇತ್ರೇ ಶಶಿದಿವಾಕರೌ ।**
**ವೇದಾಂಗಾನಿ ಚ ಯಜ್ಞಾಶ್ಚ ತಾರಾರೂಪಾಣಿ ಯಾನಿ ಚ** ॥ ೧೨ ॥

---

೮. ಮೂಳೆಮೂಳೆಗಳಲ್ಲಿಯೂ ಸಕಲ ಪರ್ವತಗಳೂ, ತಲೆಯ ಕೂದಲು ಗಳಲ್ಲಿ ಸಕಲ ನದಿಗಳೂ ವಾಸವಾಗಿದ್ದುವು. ಆತನ ದೇಹದ ಮಣಿಕಟ್ಟು, ಎದೆಗಳೇ ಆಕಾಶರೂಪವಾಗಿ ಕಾಣಿಸುತ್ತಿದ್ದುವು.

೯. ಆತನ ಹೆಗ್ಗತ್ತಿನಲ್ಲಿ ಸಂಧ್ಯಾಕಾಲಗಳೂ, ತಲಭಾಗದಲ್ಲಿ ಮೇಘಗಳೂ' ಬಾಹುಯುಗ್ಮಗಳಲ್ಲಿ ಧಾತೃ ವಿಧಾತೃಗಳೂ, ಕರಗಳಲ್ಲಿ ಭಗ, ಮತ್ತು ಪೂಷನೂ ಘೋರ ವಿಷವುಳ್ಳ ಸಕಲ ಹಾವುಗಳು ನಖಗಳಲ್ಲೂ ವಾಸವಾಗಿದ್ದುವು.

೧೦. ಆತನ ಮುಖವು ಅಗ್ನಿಸ್ವರೂಪವಾಗಿತ್ತು. ಎರಡು ಕಡೆಗಳ ಕತ್ತು ಗಳೂ ಏಕಾದಶರುದ್ರರಿಂದ ವ್ಯಾಪ್ತವಾಗಿದ್ದುವು. ಹಲ್ಲುಗಳೇ ಮಾಸಋತುಸ್ವರೂಪ ವಾಗಿದ್ದುವು. ಕೋರೆ (ದವಡೆ) ಹಲ್ಲುಗಳು ವರ್ಷಸ್ವರೂಪವಾಗಿದ್ದುವು.

೧೧. ಮೂಗಿನಲ್ಲಿ ಅಮಾವಾಸ್ಯೆಯೂ, ಮೂಗಿನ ಹೊಳ್ಳೆಗಳಲ್ಲಿ ವಾರಗಳೂ ವಾಸವಾಗಿದ್ದುವು. ಆತನ ಕಂಠವು ಯಜ್ಞವೇದಿಯಾಗಿತ್ತು. ಆತನ ವಾಣಿಯೇ ಸರಸ್ವತೀದೇವಿಯಾಗಿದ್ದಳು.

೧೨. ಅಶ್ವಿನೀದೇವತೆಗಳೇ ಎರಡು ಕಿವಿಗಳಾಗಿದ್ದರು. ಎರಡು ಕಣ್ಣು ಗಳೆಂಬುದೇ ಸೂರ್ಯಚಂದ್ರರು. ವೇದಾಂಗಗಳೂ, ಯಜ್ಞಗಳೂ, ಸಕಲ ನಕ್ಷತ್ರ

ಏತಾನಿ ನರರೂಪಸ್ಯ ತಸ್ಯ ದೇಹಾಶ್ರಿತಾನಿ ವೈ ।
ತೇನಾತಿಕಾಯೇನ ತದಾ ರಾಕ್ಷಸಃ ಪಾಣಿಪೀಡಿತಃ ॥ ೧೩ ॥

ಮುಮೂರ್ಛ ಸಚಿವಾಶ್ಚಾಸ್ಯ ಪಲಾಯಂತ ದಿಶೋ ದಶ ।
ಋಗ್ವೇದಪ್ರತಿಮಃ ಶ್ರೇಷ್ಠಃ ಪದ್ಮಮಾಲಾವಿಭೂಷಿತಃ ॥ ೧೪ ॥

ಕ್ರಮೇಣ ಚ ವಿವೇಶಾಥ ಪಾತಾಲಂ ಗಿರಿಸನ್ನಿಭಃ ।
ಉತ್ಥಾಯ ಚ ದಶಗ್ರೀವಶ್ಚಾಹೂಯ ಸಚಿವತ್ರಯಂ ॥ ೧೫ ॥

ಕ್ವ ಗತಃ ಸಹಸಾ ಬ್ರೂತ ಪ್ರಹಸ್ತಶುಕಸಾರಣಾಃ ।
ಏವಮುಕ್ತೇ ರಾಕ್ಷಸೇಂದ್ರೇ ರಾಕ್ಷಸಾಸ್ತಮಥಾಬ್ರುವನ್ ॥ ೧೬ ॥

---

ಗಳೂ ಇವೇ ಮೊದಲಾದುವೆಲ್ಲವೂ ಮನುಷ್ಯಾಕಾರವನ್ನು ಧರಿಸಿದ್ದ ಆ ಪರಮಪುರುಷನ ದೇಹವನ್ನಾಶ್ರಯಿಸಿಕೊಂಡಿದ್ದುವು.

೧೩. ಈ ವಿಶ್ವರೂಪಧರನಾದ ಆ ಮಹಾತ್ಮನು (ಮಹಾವಿಷ್ಣುವು) ಈ ರಾವಣನನ್ನು ಹಿಡಿದುಕೊಂಡು ಎರಡು ಕೈಗಳ ಮಧ್ಯದಲ್ಲಿ ಸೇರಿಸಿಕೊಂಡು ಅವುಕಿಬಿಟ್ಟನು. ಈ ರೀತಿಯಿಂದ ವಿಶ್ವರೂಪಿಯು ರಾವಣನನ್ನು ಎರಡು ಕೈಗಳಿಂದ ಔಕಿದೊಡನೆ ಆ ರಾವಣನ ದೇಹವು ಜಜ್ಜಿಹೋಗಿ ಮೂರ್ಛೆಬಂದು ಕೆಳಕ್ಕೆ ಬಿದ್ದುಬಿಟ್ಟನು.

೧೪. ರಾವಣನ ಅವಸ್ಥೆಯನ್ನು ನೋಡಿ, ಅವನ ಮಂತ್ರಿಗಳು ಆ ವಿಶ್ವಮೂರ್ತಿಗೆ ಹೆದರಿಕೊಂಡು ದಿಕ್ಕಾಪಾಲಾಗಿ ಓಡಿಹೋಗಿಬಿಟ್ಟರು. ಈ ರೀತಿ ಅವರುಗಳು ಹೊರಟುಹೋದ ಬಳಿಕ ಋಗ್ವೇದಪ್ರತಿಮನಾದ ಆ ಪದ್ಮನಾಭನು ಮಹಾಪರ್ವತೋಪಮವಾದ ದೇಹವಂ ಧರಿಸಿದವನಾಗಿ ಪಾತಾಳಕ್ಕೆ ಪ್ರವೇಶಿಸಿದನು.

೧೫. ಆ ಬಳಿಕ ರಾವಣನು ಮೂರ್ಛೆ ತಿಳಿದೆದ್ದವನಾಗಿ, ಪ್ರಹಸ್ತ, ಶುಕ, ಸಾರಣರೆಂಬ ಹೆಸರಿನ ತನ್ನ ಮೂವರು ಮಂತ್ರಿಗಳನ್ನು ಕುರಿತು ಎಲೈ ಮಂತ್ರಿಗಳಿರಾ! ನಮ್ಮನ್ನು ಈ ಅವಸ್ಥೆಗೆ ಗುರಿಮಾಡಿದ ಈ ವ್ಯಕ್ತಿಯು ಎಲ್ಲಿ ಹೋದನು? ಜಾಗ್ರತೆಯಾಗಿ ಹೇಳಿರೆಂದನು.

೧೬. ಈ ಪ್ರಕಾರವಾಗಿ ರಾವಣನು ಕೇಳಿದೊಡನೆಯೇ ಅವರು ಹೇಳಿದುದೇ

ಪ್ರವಿಷ್ಟಃ ಸ ನರೋತ್ರ್ಯೈವ ದೇವದಾನವದರ್ಪಹಾ
ತಲೇನ ತೇನೈವ ತತಃ ಪ್ರವಿವೇಶ ನಿಶಾಚರಃ ॥ ೧೭ ॥

ಏತ ಏಷ ಮಹಾತೇಜಾ ವರದಾನಾತ್ಸ್ವಯಂಭುವಃ ।
ಪ್ರವಿಶ್ಯ ದದೃಶೇ ತತ್ರ ಸರ್ವಾಭರಣಭೂಷಿತಾನ್ ॥ ೧೮ ॥

ನಿತ್ಯೋತ್ಸವಾಂಚ್ಛಾಂತಭಯಾನ್ನಿಷ್ಕಲಾನ್ಪಾವಕಪ್ರಭಾನ್ ।
ಚತುರ್ಭುಜಾನ್ಮಹಾರೂಪಾನ್ಶ್ರೀವತ್ಸಕೃತಲಾಂಛನಾನ್ ॥ ೧೯ ॥

ಏಕರೂಪಧರಾನ್ಸರ್ವಾನ್ರಕ್ತಮಾಲ್ಯಾನುಲೇಪನಾನ್ ।
ರಾಗದ್ವೇಷವಿನಿರ್ಮುಕ್ತಾನ್ಸರ್ವಶಕ್ತೀನ್ಜಗತ್ಪ್ರಭೂನ್ ॥ ೨೦ ॥

ನೃತ್ಯೇನ ಗೀತವಾದ್ಯೇನ ಸೇವಮಾನಾನ್ಜನಾರ್ದನಂ ।
ಮಾನುಷ್ಯೇ ಪೂಜನಂ ಕೃತ್ವಾ ದೇವದೇವಸ್ಯ ಚಕ್ರಿಣಃ ॥ ೨೧ ॥

ನಂದರೆ :— ದೇವದಾನವರ ದರ್ಪವನ್ನು ಮುರಿಯಲು ಸಮರ್ಥನಾದ ಆ ಮಹಾತ್ಮನು ಇದೇ ದಾರಿಯಾಗಿ ಪಾತಾಳಕ್ಕೆ ಹೊರಟುಹೋವನೆಂದು ತಿಳಿಸಲು ರಾವಣನೂ ಸಹ ತನ್ನ ಮಂತ್ರಿಗಳನ್ನು ಅಲ್ಲಿಯೇ ಬಿಟ್ಟು ತಾನೂ ಸಹ ಪಾತಾಳವಂ ಪ್ರವೇಶಿಸಿದನು.

೧೭-೨೧. ಬ್ರಹ್ಮನ ವರಬಲದಿಂದ ಮಹಾತೇಜಸ್ಸನ್ನು ಸಂಪಾದಿಸಿದ್ದ ರಾವಣನು ಪಾತಾಳಕ್ಕೆ ಒಬ್ಬನೇ ಇಳಿದು ಅಲ್ಲಿ ನೋಡಿದುದೇನು ? ಬಲ್ಲಿರಾ ? ಸರ್ವಾಭರಣಭೂಷಿತರಾಗಿಯೂ, ನಿತ್ಯೋತ್ಸವಗಳಿಂದ ಆನಂದಿತರಾಗಿಯೂ, ಭಯದ ಹೆಸರನ್ನೇ ಕಾಣದವರಾಗಿಯೂ, ಯಜ್ಞೇಶ್ವರನಂತೆ ಜಾಜ್ವಲ್ಯಮಾನರಾಗಿಯೂ, ಚತುರ್ಭುಜಧಾರಿಗಳಾಗಿಯೂ, ಶ್ರೀವತ್ಸವೆಂಬ ಮಚ್ಚೆಯನ್ನು ಧರಿಸಿ ಮಹಾಸೌಂದರ್ಯರೂಪವನ್ನು ಧರಿಸಿದವರಾಗಿಯೂ, ಒಂದೇ ವಿಧವಾದ ರೂಪವುಳ್ಳವರಾಗಿಯೂ, ಕೆಂಪು ಹೂವಿನ ಮಾಲೆಯನ್ನು ಧರಿಸಿ ಗಂಧವನ್ನು ಲೇಪನಮಾಡಿಕೊಂಡವರಾಗಿಯೂ ರಾಗದ್ವೇಷಗಳ ಹೆಸರನ್ನೇ ಅರಿಯದವರಾಗಿಯೂ, ಸರ್ವ ಶಕ್ತರಾಗಿಯೂ, ಜಗನ್ನಾಯಕರಾಗಿಯೂ, ಜನಾರ್ದನನನ್ನು ನೃತ್ಯಗೀತವಾದ್ಯಗಳಿಂದ ಸೇವಿಸುತ್ತಲಿರುವವರಾಗಿಯೂ ಇದ್ದುಕೊಂಡು ಮಹಾವಿಷ್ಣುವಿನ ಒಂದಾನೊಂದು ಮನುಷ್ಯರೂಪವನ್ನು

**ಸಮೀಪಂ ಸಮನುಪ್ರಾಪ್ತಾಸ್ತಸ್ಯೈವ ಪರಮೇಷ್ಠಿನಃ ।**
**ದೃಷ್ಟ್ವಾಃ ಕೋಟ್ಯಃ ಸಹಸ್ರಾಣಾಂ ದೃಷ್ಟ್ವಾ ಚ ರಜನೀಚರಃ　　॥ ೨೨ ॥**

**ಊರ್ಧ್ವರೋಮಾಸ್ತತಸ್ತಸ್ಮಾದ್ದೇಶಾದ್ದೇಶಮುಪಾಸರತ್ ।**
**ಜಗಾಮ ದದೃಶೇಪ್ಯತ್ರಾಪ್ಯನೌಪಮ್ಯಗುಣಂ ಗೃಹಂ　　॥ ೨೩ ॥**

**ದದರ್ಶ ಚ ತದಾ ತತ್ರ ಪುರುಷಂ ಶಯನೇ ಸ್ಥಿತಂ ।**
**ಪಾಂಡುರೇಣ ಮಹಾರ್ಘೇಣ ಶಯನಾಸನವಾಸಸಾ　　॥ ೨೪ ॥**

**ಶೇತೇ ಸ ಪುರುಷವ್ಯಾಘ್ರಃ ಪಾವಕೇನಾವಗುಂಠಿತಃ ।**
**ದಿವ್ಯಗಂಧಾನುಲಿಪ್ತಾಂಗೋ ದಿವ್ಯಾಭರಣಭೂಷಿತಃ　　॥ ೨೫ ॥**

---

ಪೂಜಿಸುತ್ತಿರುವುದನ್ನು ನೋಡಿದನು. ಈ ರೀತಿಯಾಗಿ ಆ ಪರಬ್ರಹ್ಮ (ರಾಮ) ಮೂರ್ತಿಯನ್ನು ಸಮೀಪದಲ್ಲಿ ಕುಳಿತು ಪೂಜಿಸುತ್ತಿದ್ದ ಒಂದೇ ವಿಧವಾದ ರೂಪವುಳ್ಳ ಸಾವಿರಾರು ಕೋಟಿ ವನಮಾಲಿಗಳನ್ನು ಆ ರಾವಣನು ನೋಡುತ್ತಲೂ ಏನೇನೂ ತೋರದೆ, ರೋಮಾಂಚನವುಳ್ಳವನಾಗಿ ಮೈಕೂದಲುಗಳು ನವಿರೇಳುತ್ತಿರಲು ಇಲ್ಲಿಂದ ಲ್ಲಿಗೆ ಅಲ್ಲಿಂದಿಲ್ಲಿಗೆ ಓಡುವುದಕ್ಕಾರಂಭಿಸಿದನು. ಹೀಗೆ ಓಡಿಯೋಡಿ ಸುತ್ತಿ ಸಾಕಾಗಿ ದಣಿದ ಆ ರಾವಣನು ಅಲ್ಲೊಂದು ಅನುಪಮವಾದ ಶ್ರೇಷ್ಠ ಮಂದಿರವನ್ನು ನೋಡಿದನು.

೨೪. ಮೇಲೆ ವಿವರಿಸಿದ ನರಾಕಾರನಾದ ಮನುಷ್ಯನು ಆ ಮನೆಯಲ್ಲಿ ಮಲಗಿದ್ದುದನ್ನು ನೋಡಿದನು. ಅವನು ಬಹು ಶುಭ್ರವೂ ಮನೋಹರವೂ ಆದ ವಸ್ತ್ರಗಳನ್ನು ಧರಿಸಿ ಸುಂದರವಾದ ಶಯನಾಸನ (ಹಾಸಿಗೆ) ದಲ್ಲಿ ಪವಡಿಸಿದ್ದನು.

೨೫. ಆರೀತಿ ಮಲಗಿದ್ದ ಮಹಾತ್ಮನು ಯಜ್ಞೇಶ್ವರನಿಂದ ಅವಕುಂಠಿತನಾಗಿದ್ದನು. (ಅಂದರೆ ಅಗ್ನಿಯಂತೆ ಪ್ರಜ್ವಲಿತರೂಪದಿಂದಿದ್ದನೆಂದು ತಾತ್ಪರ್ಯ) ಆ ಪರಮಪುರುಷನು ದಿವ್ಯಗಂಧವನ್ನು ಮೈಗೆ ಲೇಪಿಸಿಕೊಂಡು ದಿವ್ಯಪರಿಮಳಯುಕ್ತವಾದ ಪುಷ್ಪಗಳ ಹಾರವನ್ನೂ, ದಿವ್ಯಾಭರಣಗಳನ್ನೂ ಧರಿಸಿದ್ದನು.

ದಿವ್ಯಾಂಬರಧರಾ ಸಾಧ್ವೀ ತ್ರೈಲೋಕ್ಯಸ್ಯೈಕಭೂಷಣಂ ।
ವಾಲವ್ಯಜನಹಸ್ತಾ ವೈ ರೂಪೇಣಾಪ್ರತಿಮಾ ಭುವಿ ॥ ೨೬ ॥

ಪಾದಾವುತ್ಸಂಗ ಆರೋಪ್ಯ ತಸ್ಯ ದೇವಸ್ಯ ಚಕ್ರಿಣಃ ।
ಜಿಘೃಕ್ಷುಃ ಸಹಸಾ ಸಾಧ್ವೀಂ ರಾಕ್ಷಸೇಭ್ಯೋಽಪತದ್ಬಲಾತ್ ॥ ೨೭ ॥

ಅವಗುಂಠನಮಾತ್ರಂ ವೈ ದುಷ್ಟಂ ತೇನ ಮಹಾತ್ಮನಃ ।
ಜಹಾಸೋಚ್ಚೈಸ್ತದಾ ದೇವೋ ದೃಷ್ಟ್ವಾ ತಂ ರಾಕ್ಷಸೇಶ್ವರಂ ॥ ೨೮ ॥

ತೇಜಸಾ ಸ ತು ದೇವಸ್ಯ ರಾವಣೋ ಲೋಕರಾವಣಃ ।
ಕೃಂತಮೂಲೋ ಯಥಾ ಶಾಖೀ ನಿಪಪಾತ ಮಹೀತಲೇ ॥ ೨೯ ॥

ಪತಿತಂ ರಾಕ್ಷಸೇಂದ್ರಂ ತಂ ದೇವೋ ವಚನಮಬ್ರವೀತ್ ।
ಉತ್ತಿಷ್ಠ ಮರಣಂ ನಾಸ್ತಿ ಸಾಂಪ್ರತಂ ತೇ ನಿಶಾಚರ ॥ ೩೦ ॥

---

೨೬-೨೭. ಈ ವಿಧವಾಗಿ ಕಂಗೊಳಿಸುತ್ತಿದ್ದ ಮಹಾಮಹಿಮನನ್ನು ದಿವ್ಯಾಂಬರಧರಳೂ ತ್ರಿಲೋಕಸುಂದರಿಯೂ ಪರಮಪತಿವ್ರತೆಯೂ, ಅದ ರಮಾ (ಸೀತೆ) ದೇವಿಯು, ಬೀಸಣಿಗೆಯಿಂದಲೂ ಚಾಮರದಿಂದಲೂ, ಬೀಸುತ್ತಿದ್ದಳಲ್ಲದೆ, ಆ ಪರಮಪುರುಷನ ಕಾಲುಗಳನ್ನು ತೆಗೆದು ತನ್ನ ತೊಡೆಯ ಮೇಲಿಟ್ಟುಕೊಂಡು ತನ್ನ ಮೃದುಪಲ್ಲವ ಕರಗಳಿಂದ ಮೆಲ್ಲ ಮೆಲ್ಲಗೆ ಒತ್ತುತ್ತಿದ್ದಳು. ಆಕೆಯನ್ನು ನೋಡಿದೊಡನೆಯೇ ಆಸುರೀಸಂಪತ್ತಿನಿಂದ ಪ್ರಚೋದಿತನಾದ ರಾವಣನು ಆಕೆಯನ್ನು ತನ್ನಬೇಕೆಂದು ಆಶೆಯಿಂದ ಅವಳ ಮೇಲೆ ಹೋಗಿ ಬೀಳಲು ಪ್ರಯತ್ನಮಾಡಿದನು.

೨೮ ಈ ಪ್ರಕಾರವಾದ ರಾವಣನ ವರ್ತನೆಯನ್ನು ನೋಡಿ ಅಗ್ನ್ಯವಗುಂಠನದಲ್ಲಿದ್ದ ಆ ಮಹಾತ್ಮನು ಘಟ್ಟಿಯಾಗಿ ನಕ್ಕುಬಿಟ್ಟನು.

೨೯. ಆಗ ಆ ಮಹಾಪುರುಷನ ನಗುವಿನಿಂದ ಹೊರಟ ಅಗ್ನಿಜ್ವಾಲೆಯು, ಆ ರಾವಣನನ್ನು ಬುಡ ಸಹಿತವಾಗಿ ಉರುಳಿಬೀಳುವ ಮರದಂತೆ ತಲೆಕೆಳಗಾಗಿ ಉರುಳಿಸಿಬಿಟ್ಟಿತು

೩೦. ಈರೀತಿ ತಲೆಕೆಳಗಾಗಿ ಬಿದ್ದ ಆ ರಾವಣನನ್ನು ನೋಡಿ ಆ ಮಹಾಪುರುಷನು ನಗುನಗುತ್ತಲೇ ಇಂತು ಹೇಳಿದನು :-- ಎಲೋ ರಾಕ್ಷಸ! ಏಳು, ಬಾಧಕವಿಲ್ಲ. ಈಗ ಮೇಲಕ್ಕೆದ್ದು ಕುಳಿತುಕೋ. ಈಗ ನಿನಗೆ ಮರಣವಿಲ್ಲ.

ಪ್ರಜಾಪತಿವರೋ ರಕ್ಷೋ ಯೇನ ಜೀವಸಿ ಸಾಂಪ್ರತಂ ।
ತಮುಬ್ರವೀತ್ತದಾ ರಾಜಾ ರಾಕ್ಷಸಾನಾಂ ತು ವಿಹ್ವಲಃ　　॥ ೩೧ ॥

ಕೋ ಭವಾರ್ಣಶಯನೇ ಶೇತೇ ಯುಗಾಂತಾನಲಸನ್ನಿಭಃ ।
ಏವಮುಕ್ತಃ ಸ ತೇನಾಥ ಪ್ರತ್ಯುವಾಚ ನಿಶಾಚರಂ　　॥ ೩೨ ॥

ಕಿಂ ತೇ ಮಯಾ ದಶಗ್ರೀವ ವಧ್ಯೋಽಸಿ ನ ಚಿರಾನ್ಮಮ ।
ಏವಮೇವ ಚ ಮೃತ್ಯುಸ್ತೇ ಭವಿಷ್ಯತಿ ದಶಾನನ　　॥ ೩೩ ॥

ಯಾಂ ಜಿಘೃಕ್ಷಸಿ ಮೋಹಾತ್ತ್ವಂ ಭೂಯಶ್ಚೈನಾಂ ಹರಿಷ್ಯಸಿ ।
ಮಾನುಷ್ಯಮುಹಮಾಸಾದ್ಯ ತ್ವಾಂ ವಧಿಷ್ಯಾಮಿ ರಾವಣ　　॥ ೩೪ ॥

---

೩೧. ನಿನಗೆ ಬ್ರಹ್ಮನ ವರಬಲವು ಬಹಳ ತೀವ್ರವಾಗಿರುವುದರಿಂದ ನೀನೀಗ ಸಾಯದೆ ಬದುಕಿಕೊಂಡೆಯೆಂದು ಹೇಳಲು ರಾವಣನು ಆ ಮಹಾಪುರುಷನನ್ನು ಕುರಿತು ಈರೀತಿ ಪ್ರಶ್ನೆಮಾಡಿದನು.

೩೨. ನೀನಾರಯ್ಯ? ಇಲ್ಲೇಕಯ್ಯ, ಹೀಗೆ ಮಲಗಿಕೊಂಡಿರುತ್ತೀಯೆ? ಪ್ರಳಯಕಾಲದ ಬೆಂಕಿಯಂತೆ ನೀನು ತೋರುತ್ತಿರುವೆಯಲ್ಲಾ! ಎಂದು ಕೇಳಲು, ಆ ಪರಮಾತ್ಮನು ರಾವಣನನ್ನು ಕುರಿತು ಇಂತು ಪೇಳಿದನು.

೩೩. ಎಲೋ! ಅಯೋಗ್ಯ ರಕ್ಕಸ! ನನ್ನ ಯೋಗಕ್ಷೇಮವನ್ನು ಕಟ್ಟಿಕೊಂಡು ನಿನಗೇನಾಗಬೇಕಾಗಿದೆಯೋ? ಸುಮ್ಮನೆ ದಾರಿಹಿಡಿದು ಹೋಗೋ! ಈಗಲೇ ನೀನು ಸಾಯಬೇಕಾಗಿತ್ತು. ಆದರೆ ಈಗ ಬದುಕಿಕೊಂಡಿದೀಯೆ! ಹೀಗೇ ನೀನು ಆಡುತ್ತಾ ಇರು. ಎಂದೋ ಒಂದು ದಿನ ನಿನಗೆ ಮೃತ್ಯುವುಂಟಾಗುತ್ತದೆ.

೩೪. ನೀನೀಗ ಯಾವ ಹೆಂಗಸನ್ನು ಅಜ್ಞಾನದಿಂದಾವೃತನಾಗಿ ತಿನ್ನ (ಸಂಹರಿಸ) ಬೇಕೆಂದು ಅವಳ ಮೇಲೆ ಬೀಳಲು ಹೊರಟೆಯೋ, ಅವಳೇ ನಿನಗೆ ಮೃತ್ಯುವಾಗುತ್ತಾಳೆ. ದುರಾಶಾಪಿಶಾಚಾವಿಷ್ಟನಾದ ನೀನು ಒಂದು ದಿನ ಇವಳನ್ನು ಅಪಹರಿಸಿಕೊಂಡು ಹೋಗುತ್ತೀಯೆ! ನಾನು ಆಗ ಹೀಗೆಯೇ ಮನುಷ್ಯ (ರಾಮ) ರೂಪವನ್ನು ಧರಿಸಿ, ಬಂದು ನಿನ್ನನ್ನು ಸಂಹಾರಮಾಡುತ್ತೇನೆ.

**ಅಸ್ಯಾಃ ಕೃತೇ ವಿಶಾಲಾಕ್ಷ್ಯಾಃ ಸಾಂಪ್ರತಂ ಗಚ್ಛ ರಾಕ್ಷಸ ।**
**ಶ್ರುತ್ವೈತದ್ವಚನಂ ದೇವಾದ್ರಾವಣೋ ವಾಕ್ಯಮಬ್ರವೀತ್ ॥ ೩೫ ॥**

**ನಾಸ್ತಿ ಧನ್ಯತರೋ ಲೋಕೇ ಮಯಾ ಲೋಕತ್ರಯೇ ವಿನಾ ।**
**ತ್ವದ್ಧಸ್ತಾನ್ಮರಣಂ ಯಸ್ಯ ಭವಿಷ್ಯತಿ ಜಗತ್ಪ್ರಭೋ ॥ ೩೬ ॥**

**ಯಶಸ್ಯಂ ಶ್ಲಾಘನೀಯಂ ಚ ತ್ವದ್ಧಸ್ತಾನ್ಮರಣಂ ಮಮ ।**
**ಅಥಾಸ್ಯ ಗಾತ್ರೇ ಸಂಪಶ್ಯದ್ರಾವಣೋ ಭೀಮವಿಕ್ರಮಃ ॥ ೩೭ ॥**

**ತ್ರೈಲೋಕ್ಯಂ ಸಕಲಂ ರಾಜನ್ವಿಶ್ವರೂಪಧರಸ್ಯ ತು ।**
**ದೃಷ್ಟ್ವೈತದ್ರಾವಣೋ ರಾಜನ್ವಿಸ್ಮಯೋತ್ಫುಲ್ಲಲೋಚನಃ ॥ ೩೮ ॥**

---

೩೫. ಈ ವಿಶಾಲಾಕ್ಷಿಯ ಮಾತಿನಂತೆ ನಿನ್ನನ್ನು ಈಗ ಸುಮ್ಮನೆ ಬಿಟ್ಟಿದ್ದೇನೆ. ಬೇಗ ಆಚೆಗೆ ತೊಲಗು. ಒಂದು ನಿಮಿಷವೂ ನನ್ನ ಮುಂದೆ ನಿಲ್ಲಬೇಡವೆನಲು, ರಾವಣನು ಪುನಃ ಹೇಳುತ್ತಾನೆ.

೩೬. ಅಪ್ಪಾ! ನಿನ್ನ ಮಾತನ್ನು ಕೇಳಿ ಈಗಲೀಗ ನನಗೆ ಬಹಳ ಸಂತೋಷ ವುಂಟಾಯಿತು. ನನಗೆ ಎಲ್ಲೆಲ್ಲಿಯೂ ನೀನು ವಿಶ್ವರೂಪವನ್ನು ತೋರಿಸಿದೆ. ಪಾತಾಳಕ್ಕೆ ಆಕರ್ಷಿಸಿದೆ. ನಾನಾರೂಪಗಳಲ್ಲೂ ಒಂದೇ ದೃಷ್ಟಿಯನ್ನು ಕೊಟ್ಟು ನನಗೆ ಆತ್ಮ ಶಕ್ತಿಯ ಮಹಿಮಾರೂಪೋತ್ಕರ್ಷವನ್ನು ಪ್ರಸಿದ್ಧಪಡಿಸಿದೆ. ಇಲ್ಲಿ ಪವಡಿಸಿ ದರ್ಶನ ಕೊಟ್ಟೆ! ನೀನಾರೆಂಬುದೀಗ ನನಗೆ ಗೋಚರಿಸಿತು. ಮಹಾನುಭಾವ! ನೀನೇ ಪರಮಾತ್ಮನೋ! ನಿನ್ನನ್ನು ನೋಡಿ ನಾನು ಧನ್ಯನಾದೆನೋ! ತಂದೆ! ನಿನ್ನಿಂದ ನನಗೆ ಮರಣವು ಪ್ರಾಪ್ತಿಯಾಗುವುದಾದರೆ ನನ್ನಂತಹ ಧನ್ಯರು ಮೂರು ಲೋಕ ದಲ್ಲೂ, ಇಲ್ಲವೋ, ನಮ್ಮಪ್ಪ! ನಿಜವಾಗಿಯೂ ನಿನ್ನ ಹಸ್ತದಿಂದ ಮರಣ ಸಂಭವಿಸು ವುದಾದರೆ ನಾನು ಗೆದ್ದೆನೋ! ಜಗನ್ನಾಟಕ ಸೂತ್ರಧಾರಿ!

೩೭. ನಿನ್ನ ಕೈಯಿಂದ ನಾನು ಸಾಯುವುದಾದರೆ ನಾನೇ ಬಹು ಕೀರ್ತಿವಂತ ನಯ್ಯಾ! ಶ್ಲಾಘನೀಯನ್ನೈ! ಭಗವಾನ್! ನಾನೀಗ ಧನ್ಯನಾದೆನೈ! ಪರಮಾತ್ಮ! ಅಚ್ಯುತ! ಹರೇ! ಎಂದು ಆನಂದತುಂದಿಲನಾದ ರಾವಣನು ಒಮ್ಮೆ ತನ್ನ ಹಸ್ತಗಳಿಂದ ಆ ಮಹಾನುಭಾವನ ಮೈಯನ್ನು ತಡವರಿಸಿ ಆನಂದಸಾಗರದಲ್ಲಿ ಮುಳುಗಿದನು.

೩೮-೩೯. ವಿಸ್ಮಯದಿಂದ ಅರಳಿದ ಕಣ್ಣುಗಳುಳ್ಳ ರಾವಣನು ಸಕಲವಾದ

ಬಹುಮೇನೇ ತಥಾತ್ಮಾನಂ ನಿರ್ಜಗಾಮ ತಥೈವ ಚ ।
ದೇವದೇವಾಭ್ಯನುಜ್ಞಾತಃ ಸ ಜಗಾಮ ತದಾ ಗೃಹಂ ॥ ೩೯ ॥

ತಸ್ಯ ದೇವೋ ವಧಾರ್ಥಾಯ ಚತುರ್ಮೂರ್ತಿರ್ಜನಾರ್ದನಃ ।
ಮಾನುಷ್ಯಮಾಗತಂ ರಾಜಂಸ್ತೇನ ಮಾ ವಿಗ್ರಹಂ ಕೃಥಾಃ ॥ ೪೦ ॥

ರಾಮೋ ಜನಾರ್ದನಃ ಸಾಕ್ಷಾತ್ಸೀತಾ ಲಕ್ಷ್ಮೀಸ್ತಥೈವ ಚ ।
ತಥಾ ಭರತಶತ್ರುಘ್ನೌ ಲಕ್ಷ್ಮಣೋಽಪಿ ಮಹಾಯಶಾಃ ॥ ೪೧ ॥

ವಿಷ್ಣೋರ್ಭಾಗಾಸ್ತ್ರಯೋ ಜ್ಞೇಯಾ ವಿಷ್ಣುತುಲ್ಯಪರಾಕ್ರಮಾಃ ।
ಶತ್ರುಘ್ನೇನ ಮಹತ್ಕರ್ಮ ಲವಣಸ್ಯ ವಧೇ ಕೃತಂ ।
ತಸ್ಮಾದಭ್ಯಧಿಕಂ ಮನ್ಯೇ ಭರತಂ ಧರ್ಮವತ್ಸಲಂ ॥ ೪೨ ॥

---

ತ್ರಿಲೋಕಗಳಲ್ಲೂ ವಿಶ್ವರೂಪವನ್ನು ಧರಿಸಿ ಮೆರೆಯುತ್ತಿರುವ ವಿಷ್ಣುವಿನ ಅದ್ಭುತವಾದೀ ಮಹಿಮೆಯನ್ನು ನೋಡಿ, ತಾನೀಗ ಧನ್ಯನಾದೆನೆಂದು ಭಾವಿಸುತ್ತಾ ತನ್ನನ್ನು ತಾನೇ ಸಂಭಾವಿಸಿಕೊಳ್ಳುತ್ತಾ ಆ ಪರಮಪುರುಷನಿಗೆ ಅಡ್ಡಬಿದ್ದು, ಅವನ ಅಪ್ಪಣೆಯನ್ನು ಪಡೆದು ತನ್ನ ಸ್ವಸ್ಥಾನಕ್ಕೆ ಹೋಗಿ ಸೇರಿಕೊಂಡನು.

೪೦. ಎಲೆವೆಲವೋ! ಶೈಲೂಷರಾಜ! ಕೇಳಿದೆಯೇನೋ? ಈ ವಿಧವಾದ ರಾವಣನ ಬಲಭಂಜನಮಾಡಿದ ಬಲಾನುಜನ ಬಲಮಹಿಮೆಯನ್ನು, ಆ ಮಹಾಮಹಿಮನೇ ಈಗ ಚತುರ್ಮೂರ್ತಿಯಾಗಿ ದಶರಥನ ನಾಲ್ಕು ಮಕ್ಕಳ ರೂಪದಲ್ಲಿ ಹುಟ್ಟಿ ಭೂಮಿಗೆ ಬಂದಿರುತ್ತಾನೆ ಅಂತಹ ಮಹಾತ್ಮ (ಭರತ) ನೊಡನೆ ನೀನು ಯುದ್ಧಕ್ಕೆ ಹೋಗುವುದು ಸುತರಾಂ ಯೋಗ್ಯವಲ್ಲ. ನನ್ನ ಮಾತನ್ನು ಈಗಲಾದರೂ ಕೇಳು.

೪೧-೪೨. ರಾಮನೇ ಸಾಕ್ಷಾಜ್ಜನಾರ್ದನನು, ಸೀತೆಯೇ ಸಾಕ್ಷಾನ್ಮಹಾಲಕ್ಷ್ಮಿಯು. ಅದೇ ರೀತಿಯಾಗಿ ಮಹಾಪರಾಕ್ರಮಶಾಲಿಗಳಾದ ಭರತ, ಶತ್ರುಘ್ನ, ಲಕ್ಷ್ಮಣರೂ ಸಹ ವಿಷ್ಣುವಿನ ಭಾಗದಿಂದ ಅವತರಿಸಿರುವರೆಂದೂ, ವಿಷ್ಣುವಿಗೆ ಸಮಾನವಾದ ಪರಾಕ್ರಮವುಳ್ಳವರೆಂತಲೂ ಈಗಲಾದರೂ ತಿಳಿದುಕೋ. ಲವಣಾಸುರನ ಸಂಹಾರಕ್ಕಾಗಿ ಶತ್ರುಘ್ನನ ಮಹತ್ಕರ್ಮವನ್ನು ನೀನು ಕೇಳಿಲ್ಲವೆ? ಧರ್ಮವತ್ಸಲನಾದ ಭರತನ ಭೀಮವಿಕ್ರಮವು ಶತ್ರುಘ್ನನಿಗಿಂತ ಎಷ್ಟೋ ಪಾಲು ಮೇಲಾದುದೆಂದು ತಿಳಿದುಕೋ.

ನ ದೇವಸಂಘೈರ್ಮನುಜೈರ್ನ ಯಕ್ಷೈಃ
ನ ರಾಕ್ಷಸೈರ್ನಾಗವರೈರ್ನ ದೈತ್ಯೈಃ ।
ರಣೇ ವಿಜೇತುಂ ರಘುವಸ್ತು ಶಕ್ಯಾ
ಯೇಷಾಂ ಸ ನಾಥೋ ಹರಿರಪ್ರಮೇಯಃ ॥ ೪೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂ ಪ್ರತಿ ನಾಡಾಯನ ವಾಕ್ಯೇ
ರಾವಣಸ್ಯ ಮಹಾಪುರುಷದರ್ಶನಂ ನಾಮೈಕೋನ
ಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ.

---

೪೩. ದೇವತೆಗಳೇ ಆಗಲಿ, ಮನುಷ್ಯರೇ ಆಗಲೀ, ಯಕ್ಷರಾಕ್ಷಸರೇ ಆಗಲಿ, ನಾಗರಾಗಲಿ, ದೈತ್ಯರಾಗಲಿ, ಕಡೆಗೆ ಹೆಚ್ಚುಮಾತೇನು? ಯಾರೇ ಆಗಲಿ, ಅಪ್ರಮೇಯ ರೂಪನಾದ ರಘುವಂಶೋತ್ಪನ್ನನಾದ ಭರತನನ್ನು ಜಯಿಸಲು ಯಾರ ಕೈಯಿಂದಲೂ ಖಂಡಿತವಾಗಿ ಆಗಲಾರದು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ, ರಾವಣನಿಗೆ ಮಹಾಪುರುಷದರ್ಶನ
ವಾಯಿತೆಂಬ ಹೆಸರಿನ ಇನ್ನೂರಮೂವತ್ತೊಂಭತ್ತನೆಯ
ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ ।

॥ ಶೈಲೂಷ ಉವಾಚ ॥

ಲವಣಸ್ಯ ವಧಂ ಬ್ರಹ್ಮನ್ಶ್ರೋತುಮಿಚ್ಛಾಮಿ ತತ್ವತಃ ।
ಶತ್ರುಘ್ನೇನ ಕಥಂ ಯುದ್ಧೇ ಲವಣೋ ವಿನಿಪಾತಿತಃ ॥ ೧ ॥

॥ ನಾಡಾಯನ ಉವಾಚ ॥

ಅಯೋಧ್ಯಾಯಾಮಯೋಧ್ಯಾಯಾಂ ರಾಜನ್ದಾಶರಥೌ ಸ್ಥಿತೇ ।
ಅನತೀತೇ ಕದಾಚಿತ್ತು ವಸಂತೇ ರತಿವರ್ಧನೇ ॥ ೨ ॥

---

### ಇನ್ನೂರನಲವತ್ತನೆಯ ಅಧ್ಯಾಯವು.

೧. ಶೈಲೂಷನು ಹೇಳುತ್ತಾನೆ:—ಅಯ್ಯಾ! ನಾಡಾಯನಋಷಿಯೇ! ನೀನು ಈಗ ಲವಣಾಸುರನನ್ನು ಶತ್ರುಘ್ನನು ಸಂಹರಿಸಿ ಮಹತ್ಕಾರ್ಯವಾಡಿದನೆಂದು ಹೇಳಿದೆಯಷ್ಟೇ? ಅವನನ್ನು ಶತ್ರುಘ್ನನು ಯುದ್ಧದಲ್ಲಿ ಹೇಗೆ ಸಂಹರಿಸಿದನೆಂಬುದನ್ನು ಸ್ವಲ್ಪ ಹೇಳುವಿಯಾ? ಕೇಳಬೇಕೆಂದು ಬಯಕೆಯಾಗುತ್ತಿದೆ.

೨. ನಾಡಾಯನನು ಅದಕ್ಕೆ ಉತ್ತರಕೊಡುತ್ತಾನೆ:—ಶೈಲೂಷ! ಹೇಳುತ್ತೇನೆ, ಕೇಳು. ಶ್ರೀರಾಮಚಂದ್ರಪರಮಾತ್ಮನು ಕೋಸಲರಾಜ್ಯದೊಳಗಿನ ಅಯೋಧ್ಯಾಪಟ್ಟಣದಲ್ಲಿ ಸುಖದಿಂದ ರಾಜ್ಯಪರಿಪಾಲನೆ ಮಾಡುತ್ತಿರುವಾಗ ಸಕಲ ಪ್ರಾಣಿಮನೋಹರವಾದ ರತಿವರ್ಧಕವಾದ ವಸಂತಋತುವು ಪ್ರಾಪ್ತವಾಯಿತು.

**ನಾತ್ಯುಷ್ಣಶೀತೇ ಸಸುಖೇ ಸರ್ವಪ್ರಾಣಿಮನೋಹರೇ ।**
**ಉತ್ಫುಲ್ಲಶಾಖಿಸಂಲೀನಚಾರುಸ್ವನಶಿಲೀಮುಖೇ ॥ ೩ ॥**

**ಕೋಕಿಲಾರಾವಬಹುಲೇ ಸಪ್ರವಾಲವನಸ್ಪತೌ ।**
**ಸುಖಾರ್ಕಕಿರಣೇ ಕಾಲೇ ವಿಭೂಷಿತಧರಾತಲೇ ॥ ೪ ॥**

**ಪತ್ರಚೂತಾಗ್ರಶಾಖಾಸ್ಥಪರಪುಷ್ಟನಿನಾದಿತೇ ।**
**ಗಂತುಕಾಮಾಃ ಪ್ರವಸಿತಾಃ ಪಂಥಾ ಭೂಯೋ ನಿವರ್ತಿತಾಃ ॥ ೫ ॥**

**ಮಂಜರ್ಯಃ ಸಹಕಾರಾಣಾಂ ಯತ್ರ ಲಗ್ನಾ ಶಿಲೀಮುಖಾಃ ।**
**ಕಾಮನಾಮಾಂಕಿತಾ ಬಾಣಾಃ ಕಾಮಸ್ಯೇವ ಶರೀರಿಣಾಂ ॥ ೬ ॥**

---

೩. ಆ ವಸಂತಋತುವನ್ನು ವರ್ಣನೆಮಾಡುತ್ತೇನೆ, ಮನಸ್ಸಿಟ್ಟು ಕೇಳು. ಆ ಋತುವು ಅತ್ಯುಷ್ಣವೂ ಅತಿ ಶೀತವೂ ಅಲ್ಲದ ಸಮಶೀತೋಷ್ಣವಾದ ಹವಾಗುಣದಿಂದ, ಜನರ ಸುಖವನ್ನು ಹೆಚ್ಚಿಸುತ್ತಾ, ಸಕಲ ಪ್ರಾಣಿಗಳಿಗೂ ಸೌಖ್ಯವನ್ನುಂಟುಮಾಡುವುದಾಗಿದ್ದಿತು.

೪. ಆಗ ತಾನೇ ಚಿಗುರುಬಿಡುತ್ತಿರುವ ಮರಗಳ ಮೇಲೆ ಅಡಗಿ ಕುಳಿತು, ಇಂಪಾದಧ್ವನಿಯಿಂದ ಕೂಗುತ್ತಿರುವ ಕೋಗಿಲೆಗಳರವವು ಜನರ (ಯುವಕರ) ಮೇಲೆ ಬಿಡುತ್ತಿರುವ ಮದನನ ಅದೃಶ್ಯಶರಗಳಂತೆ ತೋರುತ್ತಿದ್ದಿತು. ಇಂತಹ ಕೋಕಿಲಾಧ್ವನಿಯು ಲೋಕವನ್ನೆಲ್ಲಾ ವ್ಯಾಪಿಸುತ್ತಿರಲು, ಮರಗಳು ಎಳೆದಳಿರುಗಳಿಂದ ರಾರಾಜಿಸುತ್ತಿರಲು, ಆ ಕಾಲದಲ್ಲಿ ಸುಂದರವಾದ ಭೂವಲಯದಲ್ಲಿ ಸುಖಕರವಾದ ಸೂರ್ಯನ ರಶ್ಮಿಗಳು ಬೀಳುತ್ತಿರಲು ;

೫. ಅದರಲ್ಲೂ ಕೋಕಿಲೆಗಳು ಮಾವಿನ ಮರಗಳ ಮೇಲೆ ಕುಳಿತು, ಅದರ ಕೊಂಬೆಗಳಲ್ಲಿ ಬಿಟ್ಟಿರುವ ಚಿಗುರೆಲೆಗಳ ಮರೆಯಲ್ಲಿ ಕುಹೂರವದಿಂದ ಜನರ ಭಾವವನ್ನು ಕೆಣಕುತ್ತಿರುವ ಆ ಸವಿಸಮಯದಲ್ಲೇ, ಹೊರಗಡೆ ಪ್ರವಾಸಹೋಗಿದ್ದ ಜನರು ತಮ್ಮ ತಮ್ಮ ಹೆಂಡತಿಯರನ್ನು ಸ್ಮರಿಸಿಕೊಂಡು ಹಿಂದಕ್ಕೆ ಬಂದುಬಿಡುತ್ತಿದ್ದರು.

೬. ಮತ್ತು ಆ ಮಾವಿನ ಚಿಗುರೆಲೆಗಳಿಂದ ಕೂಡಿದ ಗೊಂಚಲುಗಳು ಕಾಮನಾಮಾಂಕಿತವಾಗಿದ್ದುವಲ್ಲದೆ, ಆ ಪ್ರತಿಯೊಂದು ಚಿಗುರೂ ಮನುಷ್ಯರ ಮನಸ್ಸಿನ

**ಕಾಮಿನ್ಯಃ ಕಾಮಿನಾಂ ಕಾಮಂ ಯತ್ರ ತ್ಯಜಯತೋ ದೃಢಂ ।**
**ಸಮೀರಣೇನ ದಾಕ್ಷಿಣ್ಯಂ ಸರ್ವತ್ರ ಪ್ರಕಟೀಕೃತಂ ॥ ೭ ॥**

**ಮೃದುಪ್ರವಾತಸನ್ನನ್ನಪ್ರಸೂನಯುವಶಾಲಿನೀ ।**
**ಕ್ಷ್ವೇಡಪಂಕ್ತಿಃ ಸುರುರುಚೇ ವಹಮಾನೇವ ನಿಮ್ನಗಾ ॥ ೮ ॥**

**ಆಲಿಂಗಿತಾಸ್ತು ಮಧುನಾ ಸಮಂತಾದ್ವನರಾಜಯಃ ।**
**ಫುಲ್ಲೈಃ ಪಲಾಶೈಃ ಪ್ರಕಟಂ ರಾಗಂ ಬಭ್ರುಸ್ತದಾ ಸ್ವಯಂ ॥ ೯ ॥**

**ಸಮೀರಣೇನ ಮೃದುನಾ ಪುಷ್ಪಪತ್ರಾರ್ಚಿತಾ ಮಹೀ ।**
**ರಾತ್ರೌ ವ್ಯಭ್ರಸ್ಯ ನಭಸಃ ಶ್ರಿಯಮೂಹೇ ಸಶಾದ್ವಲಾ ॥ ೧೦ ॥**

---

ಮೇಲೆ ಕಾಮ (ಮದನ) ನಿಂದ ಬಿಡಲ್ಪಡಲು ಸಿದ್ಧವಾಗಿರುವ ಬಾಣಗಳಂತೆ ತೋರ ತ್ತಿದ್ದುವು.

೭. ಕಾಮಿನಿಯರ ಮೇಲೆ ಕಾಮುಕರು ಇಟ್ಟಿರುವ ದೃಢಪ್ರೇಮದಲ್ಲಿ ಏನಾದರೂ ಅಲ್ಪ ಸ್ವಲ್ಪ ಭಾಗ ಕಡಿಮೆಯಾದೀತೇನೋ ಎಂಬ ಯೋಚನೆಯಿಂದ ಮಂದ ಮಾರುತನು ಅವರ ಮೇಲೆ ತನ್ನ ಮಂಕುಬೂದಿಯನ್ನೆರಚಿ, ಅವರ ಮೇಲಿನ ದಾಕ್ಷಿಣ್ಯದಿಂದ ಅವರ ದೃಢಪ್ರೇಮವನ್ನು ಮತ್ತಷ್ಟು ಪ್ರಕಟಿಸುತ್ತಿದ್ದನು.

೮. ಹೊಳೆಗಳು ಸಣ್ಣದಾಗಿ ಮಂದವಾಗಿಹರಿಯುತ್ತಿರುವಾಗ, ವಿವಿಧಪರಿಮಳ ಪುಷ್ಪಗಳು ತೀರವೃಕ್ಷಗಳಿಂದ ತಮ್ಮಲ್ಲಿ ಉದುರಿಬೀಳುತ್ತಿರಲು, ಅವುಗಳನ್ನೆಳೆದುಕೊಂಡು ಕಲಕಲರವದಿಂದ ಕಲೆತು, ಮೃದುವಾದ ಗಾಳಿಯಿಂದ ಮೃದುವಾಗಿ ಚಲಿಸುತ್ತಾ ಮಂದಗಮನದಿಂದ ಹರಿಯುತ್ತಿರುವ ಸೊಬಗನ್ನು ನೋಡುತ್ತಿರುವುವಾದರೆ, ಆ ಸಣ್ಣ ಇಂಚರವೇಮಾನಿನಿಗಳ ಕಿವಿಗಳಿಗೆ ಸಿಂಹನಾದದಂತೆ ಕೇಳಿ ಬರುತ್ತಿದ್ದಿತು.

೯. ವಸಂತಕಾಲದಲ್ಲಿ ವನಮಧ್ಯದಲ್ಲಿ ನೋಡಿದರೆ, ವಸಂತನೆಂಬ ಯುವಕನು ವನರಾಜಿಗಳೆಂಬ ವನಿತೆಯರನ್ನು ಎಲ್ಲೆಲ್ಲಿಯೂ ಆಲಿಂಗನೆಮಾಡುತ್ತಾ, ಮುತ್ತುಗದ ಮರದಲ್ಲಿ ಅರಳಿರುವ ಕೆಂಪಾದ ಹೂಗಳೆಂಬ ಅನುರಾಗವನ್ನು ದೃಢಪಡಿಸಿಕೊಳ್ಳುತ್ತಿರುವನೋ ಎಂಬಂತೆ ತೋರುತ್ತಲಿದ್ದಿತು.

೧೦. ಮೃದುಸ್ವಭಾವದವನಾದ ಸಮೀರಣನಿಂದ ಭೂದೇವಿಯು ಪತ್ರ ಪುಷ್ಪಾದಿಗಳಿಂದರ್ಚಿತಳಾಗಿ, ಅವರಿಂದ ತೃಪ್ತಳಾಗಿ ಹುಲ್ಲುಗಾವಲಿನಿಂದ ಹಚ್ಚಗೆ

ವಂಚಿತೈರ್ನವಜಾತಾನಾಂ ವತ್ಸಾನಾಂ ಮೃದುಭಾಷಿಣಾಂ ।
ಗೋಷ್ಠೇಷು ಶೋಭಾ ಮಹತೀ ಯಸ್ಮಿನ್ಗಂಧರ್ವಸತ್ತಮ ॥ ೧೧ ॥

ಹಂಭಾರವವಿರಾವಿಣ್ಯ ಸ್ತ್ವರಮಾಣಪದಕ್ರಮಾಃ ।
ಯಸ್ಮಿನ್ವತ್ಸೋತ್ಸುಕಾ ಗಾವಃ ಪ್ರವಿಶಂತಿ ದಿನಕ್ಷಯೇ ॥ ೧೨ ॥

ಸ್ತನಂ ಪಿಬದ್ಭಿರ್ಮಾತೃಣಾಂ ವತ್ಸೈರುತ್ಕ್ಷಿಪ್ತಪುಚ್ಛಕೈಃ ।
ಮುಹುರ್ಮುದಂ ಪರಾಂ ಯತ್ರ ಮಾತೃಲೀಢೈಸ್ತು ಗೋಪಿನಃ ॥ ೧೩ ॥

ಯತ್ರ ಪುಷ್ಪೋಚ್ಚಯಂ ಚಕ್ರುಃ ಕಾಮಿನೀಪಾಣಿಪಲ್ಲವಾಃ ।
ಪಲ್ಲವಾನಾಂ ತು ಸಾದೃಶ್ಯಾದ್ವಿಜ್ಞಾತಾ ನೈವ ಕಾಮಿಭಿಃ ॥ ೧೪ ॥

---

ಕಂಗೊಳಿಸುತ್ತಾ, ರಾತ್ರಿ ಕಾಲದಲ್ಲಿ ಮೋಡಗಳಿಲ್ಲದ ಶುಭ್ರಾಕಾಶದಲ್ಲಿ ಪ್ರಸರಿಸಿರುವ ಬೆಳದಿಂಗಳೆಂಬ ಐಶ್ವರ್ಯವನ್ನು ಲೋಕಕ್ಕೆ ಹಂಚುತ್ತಿರುವಂತೆ ತೋರುತ್ತಿದ್ದಳು.

೧೧-೧೨. ಎಲೈ ಗಂಧರ್ವರಾಜನೇ ! ಕೇಳು. ದನದ ಗೊಂತುಗಳಲ್ಲಿ ಎಳೆ ಗರುಗಳು ಅವುಗಳ ತಾಯಿಯ ಹಾಲನ್ನು ಎಷ್ಟು ಕುಡಿದುಬಿಡುವುವೋ ಎಂದು ಅವುಗಳನ್ನು ಗೂಟಕ್ಕೆ ಕಟ್ಟಿಹಾಕಿ, ಆ ಕರುಗಳಿಗೆ ತಾಯ ಹಾಲು ಸಿಕ್ಕದಿರುವಂತೆ ವಂಚಿಸಿ, ಅದರ ತಾಯಿಯ (ಆಕಳ) ಹಾಲನ್ನು ಗೋಪಾಲಕರು ಕರೆದುಕೊಳ್ಳುವುದಕ್ಕಾಗಿ ಸಿದ್ಧವಾಗಿರುವುದನ್ನು ನೋಡಿ, ಸಾಯಂಕಾಲದ ಹೊತ್ತಿನಲ್ಲಿ ಕಾಡಿನಲ್ಲಿ ಮೇದು ಹಿಂತಿರುಗಿ ಬರುತ್ತಿರುವ ಹಸುಗಳು ತಮ್ಮ ಕರುಗಳನ್ನು ನೋಡಬೇಕೆಂಬ ಕುತೂಹಲದಿಂದ ಬೇಗ ಬೇಗ ಹೆಜ್ಜೆ ಹಾಕಿಕೊಂಡು ಹಂಭಾ-ಅಂಬಾ-ಅಂಬಾ-ಅಮ್ಮಾ ಎಂದು ಗಟ್ಟಿಯಾಗಿ ಕೂಗಿಕೊಳ್ಳುತ್ತಾ ಮನೆಗೆ ಬಂದು ಸೇರಿಕೊಳ್ಳುತ್ತಿದ್ದುವು.

೧೩. ತಾಯಿಯ ಹಾಲನ್ನು ಕುಡಿಯಲು ಗೂಟಕ್ಕೆ ಕಟ್ಟಿಹಾಕಿದ್ದ ಆ ಎಳೆ ಗರುಗಳು ಆತುರಪಡುತ್ತಾ ಬಾಲವನ್ನು ಮೇಲಕ್ಕೆತ್ತಿಕೊಂಡು ನಾಗಾಲುಗಳನ್ನೂ ಅಗಲವಾಗಿ ಹಾಕಿಕೊಂಡು ಹಗ್ಗವನ್ನೇ ಕಿತ್ತುಕೊಂಡು ಓಡಿಹೋಗುವ ಸಡಗರವನ್ನು ನೋಡಿ ಗೋಪಾಲಕರು ಸಂತೋಷಪಡುತ್ತಿದ್ದರು.

೧೪. ಕಾಮಿನಿಯರು ತಮ್ಮ ಚಿಗುರಿನಂತಿರುವ ಪಾಣಿತಲಗಳಿಂದ ಪುಷ್ಪಾಪಚಯವನ್ನು ಮಾಡುತ್ತಿರುವುದನ್ನು ನೋಡಿ, ಕಾಮಿಗಳು ಪಲ್ಲವಸಾದೃಶ್ಯವನ್ನು ಹೊಂದಿದ್ದ ಮಾನಿನಿಯರ ಪಾಣಿಪದ್ಮಗಳನ್ನು ಗುರುತುಹಿಡಿಯಲಿಕ್ಕೇ ಸಾಧ್ಯವಾಗಲಿಲ್ಲ.

ಋತುಕೋಕಿಲಸಂಗೀತೌ ದ್ವಿರೇಫಧ್ವನಿವಲ್ಲಕೀಂ ।
ಶ್ರುತ್ವೈವ ಸನೃತುರ್ಯತ್ರ ಮೃದುವಾತಹತಾ ಲತಾಃ ॥ ೧೫ ॥

ತಸ್ಮಿನ್ವ್ಯತೀತೇ ತು ಮಧೌ ನರೇಂದ್ರ
ಸಂತಾಪಯಾಮಾಸ ಜಗತ್ಸಮಗ್ರಂ ।
ನಿದಾಘಕಾಲೋ ಲವಣೋಪಮಸ್ತು
ಸಂರುದ್ಧಮಾರ್ಗೋಽತಿಬೃಹತ್ಪಲಾಶಃ ॥ ೧೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂ ಪ್ರತಿ ನಾರಾಯಣವಾಕ್ಯೇಷು
ಅಯೋಧ್ಯಾ ವಸಂತವರ್ಣನಂನಾಮ ಚತ್ವಾರಿಂಶ
ದುತ್ತರದ್ವಿಶತತಮೋಽಧ್ಯಾಯಃ.

---

೧೫. ಆ ವಸಂತಋತುವಿನಲ್ಲಿ ಕೋಗಿಲೆಗಳು ಇಂಪಾದರಾಗಗಳಿಂದ ಹಾಡುತ್ತಿರುವುದನ್ನು ನೋಡಿ ಭ್ರಮರಗಳ ಝೇಂಕಾರವೆಂಬ ವೀಣೆಗಳು ಧ್ವನಿಮಾಡುತ್ತಿದ್ದುವು. ಈ ವೀಣಾಸಂಗೀತರವಕ್ಕೆ ಸರಿಯಾಗಿ ಮಂದಮಾರುತದಿಂದ ಅಲ್ಲಾಡುತ್ತಿದ್ದ ಲತೆಗಳನ್ನು ನೋಡಿದರೆ, ಲತಾವನಿತೆಯರು ನರ್ತನಮಾಡುತ್ತಿರುವಂತೆ ತೋರುತ್ತಿದ್ದಿತು.

೧೬. ಇಂತಹ ಮನೋಹರವಾದ ವಸಂತಋತುವು ಕಳೆದು ಗ್ರೀಷ್ಮಋತುವು ಪ್ರಾಪ್ತವಾಗುತ್ತಿರಲಾಗಿ ಸಮಸ್ತ ಪ್ರಪಂಚವನ್ನೂ ಬಿಸಿಲಿನ ಬೇಗೆಯು ಸಂತಾಪಪಡಿಸುತ್ತಿದ್ದುದನ್ನು ನೋಡಿದರೆ ಬೃಹದಾಕಾರನಾದ ಲವಣಾಸುರನು ತನ್ನ ತಾಪದಿಂದ ಜಗತ್ತನ್ನು ಪೀಡಿಸುವಂತೆ ತೋರುತ್ತಲಿದ್ದಿತು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ಅಯೋಧ್ಯಾಪಟ್ಟಣದಲ್ಲಿನ ವಸಂತಋತುವಿನ
ವರ್ಣನೆಯೆಂಬ ಹೆಸರಿನ ಇನ್ನೂರನಲವತ್ತನೆಯ
ಅಧ್ಯಾಯ ಮುಗಿದುದು.

ಶ್ರೀ

---

# ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ಏಕಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

---

**॥ ನಾಡಾಯನ ಉವಾಚ ॥**

**ವರ್ತಮಾನೇ ತದಾ ಗ್ರೀಷ್ಮೇ ವಿಕಸನ್ಮಲ್ಲಿಕಾಕುಲೇ ।**
**ನಿವೃತ್ತಪಾಂಥಸಂಚಾರೇ ಸಂತಪ್ತಸಿಕತೋತ್ಕರೇ ॥ ೧ ॥**

**ಪ್ರಫುಲ್ಲದಾಡಿಮಾಕ್ರಾಂತೇ ಜ್ವಲಿತಾಭವನಾಂತರೇ ।**
**ಚಾರುಚಂಪಕಪುಷ್ಪಾಢ್ಯವನರಾಜಿವಿರಾಜಿತೇ ॥ ೨ ॥**

---

### ಇನ್ನೂರನಲವತ್ತೊಂದನೆಯ ಅಧ್ಯಾಯವು.

೧. ನಾಡಾಯನನು ಹೇಳುತ್ತಾನೆ :— ಈ ರೀತಿಯಾಗಿ ಅಯೋಧ್ಯಾಪಟ್ಟಣದಲ್ಲಿ ಗ್ರೀಷ್ಮಋತುವು ಪದಾರ್ಪಣಮಾಡಲಾಗಿ, ಮಲ್ಲಿಗೆಯ ಬಳ್ಳಿಗಳೆಲ್ಲವೂ ಚಿಗುರಿದುವು. ಬಿಸಿಲಿನ ಬೇಗೆಯನ್ನು ತಾಳಲಾರದೆ ನೆಲದ ಮೇಲೆ ಬಿಸಿಲುಹೊತ್ತಿನಲ್ಲಿ ಕಾದಮರಳಿನಲ್ಲಿ ಹೆಜ್ಜೆಯನ್ನಿಡಲಾರದೆ ಪ್ರಯಾಣಿಕರು ಸಂಚಾರವನ್ನು ನಿಲ್ಲಿಸಿಬಿಟ್ಟಿದ್ದರು.

೨. ಕಾಡುಗಳಲ್ಲಿ ದಾಳಿಂಬರೇಗಿಡಗಳು ಚಿಗುರಿ ಕೆಂಪಗೆ ಹೂಗಳನ್ನು ಬಿಟ್ಟಿರುವುದನ್ನು ನೋಡಿದರೆ ಬೆಂಕಿಯ ಉರಿಯ ಮಧ್ಯದಲ್ಲಿ ಕಾಣುತ್ತಿರುವ ಕೆಂಪಾದಕೆಂಡಗಳೋ ಎಂಬ ಹಾಗೆ ತೋರುತ್ತಲಿದ್ದುವು. ವನರಾಜಿಗಳಲ್ಲಿರುವ ಸಂಪಿಗೆಯಮರಗಳಲ್ಲಿ ಬಿಟ್ಟಿರುವ ಹೂವುಗಳ ಸುಗಂಧವು ಮನೋಹರವಾದ ಸುವಾಸನೆಯನ್ನು ಬೀರುತ್ತಿದ್ದುದು.

ಪಾಟಲಾಪುಷ್ಪಸಂಲೀನದ್ವಿರೇಫಗಣಮಂಡಿತೇ ।
ಸಂತಪ್ತಮಹಿಷೀಕ್ರೋಡಲುಠತ್ಪಂಕಜಭೂಷಣೇ ॥ ೩ ॥

ಪಾರ್ವತೋತ್ತುಂಗಮಾತಂಗವಿಲೋಡಿತಜಲಾಶಯೇ ।
ಸ್ವಾದುಗಾವಂಚಸಲಿಲೇ ನೀಹಾರಾವೃತಪರ್ವತೇ ॥ ೪ ॥

ಕರ್ಪೂರಚಂದನಾದ್ರಾಂಗ್ಯೋ ಮೃಣಾಲವಲಯಾಃ ಪ್ರಿಯಾಃ ।
ರಮಯಂತಿ ಪ್ರಿಯಾನ್ಯತ್ರ ವನಮಾಲಾಕೃತಸ್ರಜಃ ॥ ೫ ॥

ಸೇವ್ಯಾಶ್ಚಂದ್ರಾಂಶವೋ ಯತ್ರ ಕಾಮಿನಾಂ ಕಾಮವರ್ಧನಾಃ ।
ರಮಣೀಯಪ್ರದೋಷಾಶ್ಚ ಸುತರಾಂ ಯತ್ರ ರಾತ್ರಯಃ ॥ ೬ ॥

೩. ಪಾದರೀಹೂವುಗಳ ಮರೆಯಲ್ಲಿ ಅಡಗಿಕೊಂಡು ದುಂಬಿ (ಭ್ರಮರ) ಗಳು ಅದರ ಸುವಾಸನೆ (ಮಕರಂದ) ಯನ್ನಾಸ್ವಾದಿಸುತ್ತಾ ಆನಂದಪಡುತ್ತಿದ್ದವು. ಎಮ್ಮೆಗಳು ಬಿಸಿಲಿನ ಬೇಗೆಯನ್ನು ತಾಳಲಾರದೆ ಕೆಸರುಕುಂಟೆಗಳನ್ನು ಹುಡುಕಿಕೊಂಡು ಹೋಗಿ ಅದರಲ್ಲಿ ಬಿದ್ದು ಹೊರಳಾಡುತ್ತಾ ಮೈಗಳಿಗೂ ಕೊಂಬುಗಳಿಗೂ ಕೆಸರನ್ನು ಮೆತ್ತಿಕೊಂಡು ಹಿಗ್ಗುತ್ತ ಬಿದ್ದಿದ್ದುವು.

೪. ದಟ್ಟವಾದ ಮಂಜಿನಿಂದ ಮುಚ್ಚಿಹೋಗಿದ್ದ ಬೆಟ್ಟದ ಬುಡಗಳಲ್ಲಿರುವ ಸಿಹಿನೀರಿನ ಹೊಂಡಗಳಲ್ಲಿ ಬಿದ್ದು ಹೊರಳಾಡುತ್ತಿರುವ ದೊಡ್ಡ ದೊಡ್ಡ ಮದ್ದಾನೆಗಳನ್ನು ನೋಡಿದರೆ, ಬೆಟ್ಟದ ಬುಡದಲ್ಲಿ ಹುಟ್ಟಿರುವ ಸಣ್ಣ ಸಣ್ಣ ಗುಡ್ಡಗಳೋ ಎಂಬಂತೆ ತೋರುತ್ತಿತ್ತು.

೫. ವನಪುಷ್ಪಗಳನ್ನು ಕಟ್ಟಿ ಹಾರವನ್ನಾಗಿಮಾಡಿ ಅದನ್ನು ತಮ್ಮ ತಮ್ಮ ಪ್ರಿಯರ ಕೊರಳಿಗೆ ಹಾಕುತ್ತಲೂ, ತಾವರೇದಂಟನ್ನು ಪ್ರಿಯರಿಗೆ ಕೊಡುತ್ತಲೂ ಪಚ್ಚಕರ್ಪೂರದ ಗಂಧವನ್ನು ಕಾಂತರ ಮೈಗೆ ತೊಡೆಯುತ್ತಲೂ, ತಾವೂ ತೊಡೆದುಕೊಳ್ಳುತ್ತಲೂ ರಮಣಿಯರು ತಮ್ಮ ತಮ್ಮ ರಮಣರನ್ನು ರಾಗರಂಜಿತರನ್ನಾಗಿ ಮಾಡುತ್ತಿದ್ದರು.

೬. ರಾತ್ರಿಯ ಹೊತ್ತಿನ ಬೆಳದಿಂಗಳಲ್ಲಿ ಕಾಮುಕರ ಕಾಮಗಳನ್ನು ಅಭಿವೃದ್ಧಿಗೊಳಿಸುತ್ತಾ ರಮಣೀಯವಾದ ಅಂತಹ ವೇಳೆಯಲ್ಲಿ, ರಮಣೀರಮಣರು ಆ ಚಂದ್ರಾಂಶು (ಬೆಳ್ದಿಂಗಳು) ಗಳನ್ನು ಸೇವಿಸುತ್ತಿದ್ದರು.

ರಾತ್ರ್ಯಂತೇ ಶೀತಲಾನ್ವಾತಾನ್ಕುಸುಮಾಶಯಗಂಧಿನಃ ।
ಸಮಾಘ್ರಾಯಾಭಿಜಾಯಂತೇ ಕಾಮಿನಸ್ತು ರಿರಂಸವಃ ॥ ೭ ॥

ರಾತ್ರಯಃ ಶೀಘ್ರಗಾಮಿನ್ಯೋ ದಿವಸಾ ಮಂದಗಾಮಿನಃ ।
ಮಿಥುನೋಪಗಮಾದ್ಭಾನೋಃ ಸಂಪ್ರತಪ್ತಾ ಭೃಶಂ ಕರಾಃ ॥ ೮ ॥

ವಿಲೀನಹಿಮತೋಯೌಘಫೇನಪುಂಜಸಮಾಕುಲಾಃ ।
ಅತ್ಯರ್ಥಶೀತಾಃ ಸರಿತಸ್ತಥಾ ಹೈಮೇನ ಪರ್ವತಾಃ ॥ ೯ ॥

ತಥಾ ಬಹುಲನಿರ್ಯಾಸಸುರಭೀಕೃತಚಂದನೈಃ ।
ವರ್ಧಯಂತಿ ತಥಾ ಕಾಮಂ ಕಾಮಿನೀನಾಂ ತು ಕಾಮುಕಾಃ ॥ ೧೦ ॥

---

೭. ರಾತ್ರಿ ಕಳೆದು ಬೆಳಗಿನ ಝಾವವು ಪ್ರಾಪ್ತವಾದಾಗ ತಣ್ಣಗಿರುವ ಗಾಳಿಯು ಕುಸುಮದ್ವಾರದ ಕಡೆಯಿಂದ ಬಂದು ಬೀಸಿ ಆನಂದವನ್ನುಂಟುಮಾಡಿದ ಸಮಯದಲ್ಲಿ ಪುರುಷರು ಆ ಪುಷ್ಪವಾಸನಾ ಸವಿಯಿಂದ ಆನಂದಿತರಾಗಿ, ಕಾಮೋತ್ತೇಜಕರಾಗಿ ತಮ್ಮ ತಮ್ಮ ರಮಣಿಯರಲ್ಲಿ ರತಿಕ್ರೀಡೆಯನ್ನು ಮಾಡಲು ಆತುರಪಡುತ್ತಿದ್ದರು.

೮. ಆ ನಿದಾಘ ( ಗ್ರೀಷ್ಮದ ) ದಿನಗಳಲ್ಲಿ ರಾತ್ರಿಕಾಲಗಳು ಬೇಗಬೇಗ ಓಡಿ ಹೋಗುತ್ತಿದ್ದವು. ಹಗಲು ಹೊತ್ತು ಮಾತ್ರ ಮೆಲ್ಲಮೆಲ್ಲನೆ ಹೆಜ್ಜೆ ಹಾಕುತ್ತಿತ್ತು. ಈ ಎರಡು ವಿಧವಾದ ದ್ರುತಮಂದಗಮನಗಳಿಂದ ಸೂರ್ಯಕಿರಣಗಳು ಹಗಲು ಹೊತ್ತಿನಲ್ಲಿ ಹೆಚ್ಚಾಗಿ ತಾಪವನ್ನುಂಟುಮಾಡಿ, ಆ ತಾಪದ ಬಿಸಿಯು, ರಾತ್ರಿಯು ಬೇಗಬೇಗ ಓಡಿಹೋದರೂ ತನ್ನ ಬೇಗೆಯ ಕಾವನ್ನು ಆರಿಸುತ್ತಲೇ ಇರಲಿಲ್ಲ. ( ಅಂದರೆ ರಾತ್ರಿ ಬಹಳ ಹೊತ್ತಾದರೂ ನೆಲದಕಾವು ಆರುತ್ತಿರಲಿಲ್ಲವೆಂದು ಭಾವಾರ್ಥ

೯. ಹಿಮಾಲಯದ – ತಪ್ಪಲಿನಿಂದ ಹುಟ್ಟಿ ಹರಿಯುವ ನದಿಗಳೆಲ್ಲವೂ ಮಂಜಿನಗೆಡ್ಡೆಗಳು ಕರಗಿ ನೊರೆನೊರೆಯಾಗಿ ಹರಿಯುತ್ತಿರುವುವಾದ್ದರಿಂದ ಆ ಮಂಜು ನೀರನ್ನು ಅಂತಹ ಗ್ರೀಷ್ಮಕಾಲದಲ್ಲೂ ಮುಟ್ಟುವುದಕ್ಕಾಗುತ್ತಿರಲಿಲ್ಲ. ( ಅಂದರೆ ಅಷ್ಟು ತಣ್ಣಗೆ ಕೊರೆಯುತ್ತಿದ್ದುದೆಂದು ತಿಳಿಯಬೇಕು.)

೧೦. ಇಂತಹ ಶೀತಲವಾದ ಸಮಯದಲ್ಲೂ ಸಹ ಘಮಘಮಿಸುತ್ತಿರುವ ಸುವಾಸನಾಪುಷ್ಪಗಳಿಂದ ಹೊರಟ ಸುವಾಸನೆಯು, ಚಳಿಯಲ್ಲಿ ನಡುಗುತ್ತಿದ್ದ ಕಾಮಿಗಳ ಘ್ರಾಣೇಂದ್ರಿಯಕ್ಕೆ ತಗುಲಿದೊಡನೆಯೇ ಅವರು ಕಾಮಿನಿಯರನ್ನು ಹುಡುಕಿಕೊಂಡು ಹೋಗುವಷ್ಟರೊಳಗೆ ಕಾಮವನ್ನು ಹೆಚ್ಚಿಸುತ್ತಿದ್ದಿತು.

ರತ್ಯಂತರಸಮುತ್ಪನ್ನಮಾಯಾಸಶ್ರಮಜಂ ಜಲಂ ।
ಕರ್ಪೂರರಜಸಾ ಯತ್ರ ನಾಶಯಂತಿ ಸ್ಮ ಕಾಮಿನಃ ॥ ೧೧ ॥

ಯಸ್ಮಿನ್ನಿದಾಘೇ ಸಫಲಾಮ್ರವೃಕ್ಷೇ
ವಿಭೂಷಣಾಢ್ಯೇ ನೃಪ ವತ್ಸರಸ್ಯ ।
ದಿದೃಕ್ಷವಸ್ತಂ ರಘುವೃಂದಮುಖ್ಯಂ
ತದಾ ಪ್ರಯಾತಾ ಮುನಯಸ್ತ್ವಯೋಧ್ಯಾಂ ॥ ೧೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂ ಪ್ರತಿ ನಾರಾಯಣವಾಕ್ಯೇಷು
ಅಯೋಧ್ಯಾದರ್ಶನೇ ಗ್ರೀಷ್ಮವರ್ಣನಂ ನಾಮೈಕ
ಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ.

---

೧೧. ಇಂತು ಕಾಮೋದ್ಭವವಾದೊಡನೆಯೇ ಕಾಂತರು ಕಾಂತೆಯರೊಡನೆ ಯಥೇಚ್ಛವಾಗಿ ರತಿಕ್ರೀಡೆಯನ್ನಾಡಿ, ಆ ರತಿಕ್ರೀಡೆಯ ಮಧ್ಯಕಾಲಲ್ಲಿ ವಿಶೇಷ ಆಯಾಸದಿಂದುಂಟಾದ ಶ್ರಮವನ್ನು ಪರಿಹರಿಸಿಕೊಳ್ಳುವುದಕ್ಕಾಗಿಯೂ, ಆ ಮೈ ಬೆವರುನೀರನ್ನು ಆರಿಸಿಕೊಳ್ಳುವುದಕ್ಕಾಗಿಯೂ, ಪಚ್ಚಕರ್ಪೂರದ ಹುಡಿಯನ್ನೆಲ್ಲಾ ಆ ಬೆವರಾದ ಮೈಗೆ ಹಚ್ಚಿಕೊಂಡು, ಆ ಆಯಾಸದ ಬೆವರನ್ನು ಅದರಿಂದ ನೀಗಿಕೊಳ್ಳುತ್ತಿದ್ದರು.

೧೨. ಸಂವತ್ಸರಕ್ಕೆ ಅಲಂಕಾರಪ್ರಾಯವಾದ ಆ ಗ್ರೀಷ್ಮಋತುವಿನಲ್ಲಿ ಕಾಡಿನಲ್ಲಿ ಹುಟ್ಟಿ ಬೆಳೆದಿರುವ ಮಾವಿನ ಮರಗಳ ಚಿಗುರಿನ ಸೊಬಗನ್ನು ನೋಡುತ್ತಾ ಯಮುನಾ ನದೀತೀರದಲ್ಲಿ ವಾಸವಾಗಿದ್ದ ಸಕಲ ಋಷಿಜನರೂ ಸಹ ಶ್ರೀರಾಮಚಂದ್ರಪರಮಾತ್ಮನನ್ನು ನೋಡಲಪೇಕ್ಷೆಯುಳ್ಳವರಾಗಿ ಅಯೋಧ್ಯಾಪಟ್ಟಣಕ್ಕೆ ಬಂದರು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಅಯೋಧ್ಯಾಪಟ್ಟಣದಲ್ಲಿ ಗ್ರೀಷ್ಮಋತುವರ್ಣನ
ವೆಂಬ ಹೆಸರಿನ ಇನ್ನೂರ ನಲವತ್ತೊಂದನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ದ್ವಿಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ ।

---

॥ ನಾರಾಯಣ ಉವಾಚ ॥

**ತತಃ ಸಭಾಗತಂ ರಾಮ ದ್ವಾಃಸ್ಥೋ ವಚನಮಬ್ರವೀತ್ ।**
**ದ್ವಾರೆ ತಿಷ್ಠಂತಿ ಮುನಯೋ ಯಮುನಾತೀರವಾಸಿನಃ ॥ ೧ ॥**

---

### ಇನ್ನೂರ ನಲವತ್ತೆರಡನೆಯ ಅಧ್ಯಾಯವು.

೧. ನಾರಾಯಣನು ಶೈಲೂಷನನ್ನು ಕುರಿತು ಹೇಳುತ್ತಾನೆ:— ಋಷಿಗಳೆಲ್ಲರೂ ಶ್ರೀರಘುಕುಲ ಲಲಾಮನಾದ ಶ್ರೀ ಸೀತಾರಾಮಚಂದ್ರನ ಅರಮನೆಯ ಬಾಗಿಲಿನಲ್ಲಿ ನಿಂತುಕೊಂಡು ತಾವೆಲ್ಲರೂ ಬಂದಿರುವ ಸಂಗತಿಯನ್ನು ರಾಮನಿಗೆ ತಿಳಿಸಬೇಕೆಂದು ದ್ವಾರಪಾಲಕರಿಗೆ ತಿಳಿಸಿದರು. ಅವರಲ್ಲೊಬ್ಬ ದ್ವಾರಪಾಲಕನು ಆಸ್ಥಾನ (ರಾಜಸಭಾ) ಕ್ಕೆ ಪ್ರವೇಶಿಸಿ ಸಭಾಮಧ್ಯದಲ್ಲಿ ಸಿಂಹಾಸನದೊಳ್ ವಿರಾಜಮಾನನಾಗಿದ್ದ ರಾಜಾಧಿರಾಜ ರಾಜಪರಮೇಶ್ವರ ಸಕಲ ಭೂಮಂಡಲಮಂಡನ ತ್ರಿಲೋಕ ಪರಿಪಾಲಕ ಸಕಲ ಚರಾಚರವ್ಯಾಪಿಯಾದ ರಾಮದೇವರ ಮುಂದೆ ಅಡ್ಡ ಬಿದ್ದು, ಮಹಾಪ್ರಭೋ! ಯಮುನಾನದೀತೀರದಲ್ಲಿರುವ ತಪಸ್ವಿಗಳೆಲ್ಲರೂ ತಮ್ಮನ್ನು ಸಂದರ್ಶಿಸಬೇಕೆಂದು ಬಂದು ಬಾಗಿಲಿನಲ್ಲಿ ನಿಂತಿದ್ದಾರೆ ಎಂದು ಅರಿಕೆಮಾಡಿಕೊಂಡನು.

ಭಾರ್ಗವಂ ತು ಪುರಸ್ಕೃತ್ಯ ಚ್ಯವನಂ ದೀಪ್ತತೇಜಸಂ ।
ಮಹಾನುಭಾವಾ ವರದಾಸ್ತಪಸಾ ದಗ್ಧಕಿಲ್ಬಿಷಾಃ ॥ ೨ ॥

ದ್ವಾಃಸ್ಥಾತ್ತು ವಚನಂ ಶ್ರುತ್ವಾ ತದಾ ರಾಮಃ ಪುರೋಧಸಾ ।
ಸಹಿತಸ್ತ್ವರಯಾ ದ್ರಷ್ಟುಂ ತಾಪಸಾಂಸ್ತಾನ್ವಿನಿರ್ಗತಃ ॥ ೩ ॥

ಸೋಽಭಿಗಮ್ಯ ಮಹಾತೇಜಾ ಋಷಿಸಂಘಾಂಸ್ತಪಸ್ವಿನಃ ।
ಅಭಿವಾದ್ಯ ಪ್ರಣಮ್ಯೈತಾನ್ಪುರಸ್ಕೃತ್ಯ ತದಾ ಗೃಹಂ ॥ ೪ ॥

ಪ್ರಾವೇಶಯತ್ತತಸ್ತೇಷಾಂ ಪಾದ್ಯಾರ್ಘ್ಯಾಚಮನಾದಿಕಂ ।
ಆಸನಂ ಮಧುಪರ್ಕಂ ಚ ತಥಾ ರಾಜ್ಯಂ ನ್ಯವೇದಯತ್ ॥ ೫ ॥

---

೨. ಮತ್ತೂ ಆ ಪ್ರತೀಹಾರಿಯು ಹೇಳಿದನು:—ಮಹಾಪ್ರಭೋ! ಆ ಮಹಾನುಭಾವರಾದ ಋಷಿಗಳೆಲ್ಲರೂ ಯಜ್ಞೇಶ್ವರನಂತೆ ಜ್ವಲಿಸುತ್ತಿರುವ ತೇಜಸ್ಸಿನಿಂದ ವಿರಾಜಿಸುತ್ತಿದ್ದಾರೆ. ತಮ್ಮ ತಮ್ಮ ತಪೋಬಲದಿಂದ ಸಕಲ ಪಾಪರಾಶಿಗಳನ್ನೂ ಸುಟ್ಟು ಬೂದಿಮಾಡಿ ಲೋಕಕ್ಕೆಲ್ಲಾ ವರಪ್ರದಾನಮಾಡುವ ಶಕ್ತಿಯುಳ್ಳ ಮುನಿಗಳು, ಭೃಗುಮಹರ್ಷಿಗಳ ಪುತ್ರನಾದ ಮಹಾತೇಜಃಪುಂಜನಾದ ಚ್ಯವನಋಷಿಯನ್ನು ಮುಂದೆ ಬಿಟ್ಟುಕೊಂಡು ಬಂದು ನಿಂತಿದ್ದಾರೆ, ಮಹಾಸ್ವಾಮಿ! ಅಪ್ಪಣೆಯೇನು?

೩. ದ್ವಾರಪಾಲಕನ ಮುಖದಿಂದ ಈ ಮಾತು ಹೊರಹೊರಟೊಡನೆಯೇ ಶ್ರೀರಾಮನು ಎಳ್ಳಷ್ಟೂ ತಡಮಾಡದೆ ತನ್ನ ಪುರೋಹಿತರಾದ ವಸಿಷ್ಠಋಷಿಗಳನ್ನು ಜತೆಯನ್ನು ಕರೆದುಕೊಂಡು, ಸಿಂಹಾಸನದಿಂದಿಳಿದು ಆ ಮಹರ್ಷಿಗಳನ್ನು ನೋಡಿ ಕೃತಾರ್ಥನಾಗಬೇಕೆಂಬಾಶೆಯಿಂದ ಕಾಲುನಡಿಗೆಯಿಂದಲೇ ನಡೆದುಕೊಂಡು, ತಾನೇ ಅರಮನೆಯ ಬಾಗಿಲಿಗೆ ಬಂದುಬಿಟ್ಟನು.

೪. ಈ ಪ್ರಕಾರವಾಗಿ ಅರಮನೆಯ ಆನೇಬಾಗಿಲ ಬಳಿಗೆ ಬಂದು ರಾಮನು ಅಲ್ಲಿ ಗುಂಪು ಕೂಡಿಕೊಂಡು ನಿಂತಿದ್ದ ಮಹಾತೇಜಃಪುಂಜರಾದ ತಪಸ್ವಿಗಳನ್ನು ನೋಡಿದೊಡನೆಯೇ, ಎರಡು ಕೈಗಳನ್ನೂ ಜೋಡಿಸಿಕೊಂಡು ಸಾಷ್ಟಾಂಗವಾಗಿ ದೀರ್ಘದಂಡಪ್ರಣಾಮವಂ ಮಾಡಿ, ಅವರನ್ನು ಮುಂದೆ ಬಿಟ್ಟುಕೊಂಡು ತಾನು ಅವರ ಹಿಂದೆ ಅರಮನೆಗೆ ಪ್ರವೇಶಿಸಿದನು.

೫. ಸಕಲ ಋಷಿಗಳೂ ಅರಮನೆಯೊಳಕ್ಕೆ ಬಂದ ಬಳಿಕ ಶ್ರೀರಾಮನು

ಪ್ರತಿಗೃಹ್ಯ ತು ತೇ ಸರ್ವೇ ರಾಜ್ಯಂ ತಸ್ಮೈ ಪುನರ್ದದುಃ ।
ತದ್ವಚ್ಚ ತೀರ್ಥತೋಯಾನಿ ಫಲಾನಿ ವಿವಿಧಾನಿ ಚ ॥ ೬ ॥

ಪ್ರತಿಗೃಹ್ಯ ಚ ರಾಮಸ್ತಾನ್ಪೃಷ್ಟ್ವಾ ಕುಶಲಮವ್ಯಯಂ ।
ಪಪ್ರಚ್ಛ ತಾನ್ಮಹಾಭಾಗಸ್ತತಸ್ತ್ವಾಗಮನಕ್ರಿಯಾಂ ॥ ೭ ॥

ರಾಮಸ್ಯ ವಚನಂ ಶ್ರುತ್ವಾ ಚ್ಯವನೋ ವಾಕ್ಯಮಬ್ರವೀತ್ ।
ರಾಕ್ಷಸೋ ಲವಣೋ ನಾಮ ರಾಜನ್ಮಧುವನೇ ವಸತ್ ॥ ೮ ॥

---

ಅವರೆಲ್ಲರಿಗೂ ಪಾದ್ಯ, ಅರ್ಘ್ಯ, ಆಚಮನ, ಆಸನ, ಮಧುಪರ್ಕಾದಿಗಳಿಂದ ಸತ್ಕಾರ ಮಾಡಿ ತನ್ನ ಸಕಲ ರಾಜ್ಯವನ್ನೂ ಆ ಋಷಿಪ್ರವರರಿಗೆ ಸಮರ್ಪಿಸಿಬಿಟ್ಟನು.

೬. ಈ ಮೇರೆ ಶ್ರೀ ರಾಮನು ತನ್ನ ರಾಜ್ಯವನ್ನೇ ತಮಗೆ ದಾನವಾಗಿ ಕೊಟ್ಟುಬಿಟ್ಟುದನ್ನು ನೋಡಿ, ನಿಷ್ಕಾಮರಾದ ಮುನಿಗಳೆಲ್ಲರೂ ಸಂತೋಷಪಟ್ಟವರಾಗಿ, ರಾಮನಿಂದ ರಾಜ್ಯವನ್ನು ಪರಿಗ್ರಹಿಸಿದವರಾಗಿ, ಬಳಿಕ ಆ ರಾಜ್ಯವನ್ನು ರಾಮನಿಗೇ ಹಿಂತಿರುಗಿ ಕೊಟ್ಟುಬಿಟ್ಟರು. ಇಷ್ಟು ಪರಸ್ಪರೋಪಚಾರಗಳು ಬೆಳೆದ ಬಳಿಕ ಋಷಿಗಳು ತಾವು ತಂದಿದ್ದ ನಾನಾತೀರ್ಥಜಲಗಳನ್ನೂ, ನಾನಾವಿಧ ಫಲಮೂಲಾದಿಗಳನ್ನೂ ಶ್ರೀರಾಮನಿಗೆ ಸಮರ್ಪಿಸಿದರು.

೭. ಋಷಿಗಳಿಂದ ಅನುಗೃಹೀತವಾದ ಸಕಲ ತೀರ್ಥವನ್ನೂ ಫಲಾದಿಗಳನ್ನೂ ಶ್ರೀರಾಮನು ಆನಂದದಿಂದ ಸ್ವೀಕರಿಸಿ ಅವರುಗಳನ್ನು ಕುರಿತು ಕುಶಲಪ್ರಶ್ನೆಯನ್ನು ಮಾಡಿ, ತಾವೆಲ್ಲರೂ ಮಹಾತಪಸ್ವಿಗಳು. ತಮ್ಮ ದರ್ಶನದಿಂದ ನಾನು ಕೃತಾರ್ಥನಾದೆನೆಂದು ಹೇಳಿ, ತಾವು ಇಲ್ಲಿಯವರಿಗೆ ದಯಮಾಡಿಸಿದ ಕಾರಣವೇನೆಂದು ಮರ್ಯಾದೆಯಿಂದ ಕೇಳಿದನು.

೮. ರಾಮನು ಮಾತನ್ನು ಕೇಳಿ ಋಷಿಮುಖ್ಯನಾದ ಚ್ಯವನನು ಹೇಳಿದುದೇನೆಂದರೆ:—ಮಹಾಪ್ರಭೋ! ಲವಣನೆಂಬ ದುಷ್ಟರಾಕ್ಷಸನು ಅವನ ತಂದೆಯಾದ ಮಧುವಿನ ರಾಜ್ಯ (ಮಧುವನ) ದಲ್ಲಿ ವಾಸಮಾಡುತ್ತಿರುವನು. ಅವನಿಂದ ಸಕಲ ಲೋಕವೂ ನಾಶವಾಗಿ ಹೋಗುವ ಸ್ಥಿತಿಯೊದಗಿದೆ. ಅವನನ್ನು ಸಂಹರಿಸುವ ಪ್ರಯತ್ನಮಾಡಬೇಕು.

ಲೋಕಾಂಸ್ತಾಪಯತೇ ಸರ್ವಾಂಸ್ತಸ್ಯ ಯತ್ನಂ ವಧೇಕುರು ।
ದಶ ಪ್ರಾಣಿಸಹಸ್ರಾಣಿ ಚಾಹಾರಸ್ತಸ್ಯ ನೈತ್ಯಿಕಃ ॥ ೯ ॥

ವಧಾರ್ಥಂ ಭರತಂ ತಸ್ಯ ಶತ್ರುಘ್ನಂ ಸಹಲಕ್ಷ್ಮಣಂ ।
ಸಮಾದಿಶ ಮಹಾಭಾಗ ಲೋಕಾಃ ಸಂತು ನಿರಾಮಯಾಃ ॥ ೧೦ ॥

ತಥಾ ಮಧುವನೇ ಸ್ಫೀತೇ ದೇಶಂ ರಾಮ ನಿವೇಶಯ ।
ನಗರೀಂ ಚ ಯಥಾ ಪುಣ್ಯಾಂ ಲೋಕಾನಾಂ ಹಿತಕಾಮ್ಯಯಾ ॥ ೧೧ ॥

ತ್ವಯಾ ಸ ಭಾಜ್ಯೋ ರಕ್ಷ್ಯೈಶ್ಚ ಮುನಿಸಂಘಾ ಮಹಾಮತೇ ।
ಏವಮುಕ್ತಸ್ತದಾ ರಾಮಶ್ಚಿಂತಯಾಮಾಸ ಧರ್ಮವಿತ್ ॥ ೧೨ ॥

ಲಕ್ಷ್ಮಣೇನ ಮಹತ್ಕರ್ಮ ಕೃತಂ ನಿವಸತಾ ವನೇ ।
ರಾಜ್ಯಂ ಪಾಲಯತಾ ಕರ್ಮ ಭರತೇನ ಮಹತ್ಕೃತಂ ॥ ೧೩ ॥

---

೯-೧೦. ಆ ಲವಣಾಸುರನು ಪ್ರತಿದಿನವೂ ಹತ್ತು ಸಾವಿರ ಪ್ರಾಣಿಗಳನ್ನು ತಿಂದ ಹೊರತು ತೃಪ್ತನಾಗುವುದಿಲ್ಲ. ಅವನನ್ನು ಸಂಹಾರಮಾಡುವುದಕ್ಕಾಗಿ ನಿನ್ನ ತಮ್ಮಂದಿರುಗಳಾದ ಲಕ್ಷ್ಮಣ, ಭರತ, ಶತ್ರುಘ್ನರನ್ನು ಕಳುಹಿಸಿಕೊಡು. ಅವರಿಂದ ಅವನು ಸಂಹೃತನಾದರೆ ಸಕಲ ಲೋಕವೂ ಸುಖವಾಗಿ ಬದುಕಿಕೊಳ್ಳುವುದು.

೧೧. ಈ ಮೇರೆ ನಿರುಪದ್ರವವಾದ ಬಳಿಕ ಆ ಮಧುವನದಲ್ಲಿ ನೀನು ಒಂದು ವಿಸ್ತಾರವಾದ ರಾಜ್ಯವನ್ನು ನಿರ್ಮಾಣಮಾಡಿ, ಅಲ್ಲಿ ಪುಣ್ಯಕರವಾದ ಒಂದು ಪಟ್ಟಣವನ್ನು ಜನರ ಹಿತಸಾಧನೆಗಾಗಿ ನಿರ್ಮಿಸು.

೧೨. ಈರೀತಿ ನೀನು ಮಾಡಿದರೆ ಋಷಿಸಂಘವು ಬದುಕಿಕೊಳ್ಳುವುದಲ್ಲದೆ, ನೀನು ನಮ್ಮ ಪ್ರಾಣಗಳನ್ನುಳಿಸಿ ಮಾಡಿದ ಈ ಉಪಕಾರವನ್ನು ಜೀವಾವಧಿ ಮರೆಯುವುದಿಲ್ಲ. ಇಂತು ಪ್ರಾರ್ಥಿಸಿಕೊಂಡ ಋಷಿಗಳ ಮಾತನ್ನು ಕೇಳಿ ಭಗವಾನ್ ಶ್ರೀರಾಮಚಂದ್ರಮೂರ್ತಿಯು ತನ್ನಲ್ಲಿ ತಾನೇ ಇಂತು ಯೋಚಿಸಿದನು.

೧೩. ನಾನು ಹದಿನಾಲ್ಕು ವರ್ಷಕಾಲ ವನದಲ್ಲಿ ವಾಸಮಾಡುತ್ತಿದ್ದಾಗ ಲಕ್ಷ್ಮಣನು ಬಹು ಕ್ಲೇಶವನ್ನನುಭವಿಸಿ ಅನ್ನನಿದ್ರಾದಿಗಳನ್ನು ಸಹ ತ್ಯಾಗಮಾಡಿ ನನ್ನನ್ನು ಸೇವಿಸಿರುವನಲ್ಲದೆ, ಯುದ್ಧಕ್ಕೆ ಸಹಾಯವಾಗಿ ಮಹತ್ಕಾರ್ಯಮಾಡಿ ದಣಿದಿರುವನು. ಆರೀತಿ ನಾವು ಅರಣ್ಯದಲ್ಲಿದ್ದಾಗ ಭರತನು ರಾಜ್ಯಭಾರವನ್ನು ವಹಿಸಿ

**ಶತ್ರುಘ್ನಂ ಪ್ರೇರಯಾಮ್ಯದ್ಯ ಲವಣಸ್ಯ ವಧೇಪ್ಸಯಾ ।**
**ಇತ್ಯೇವಂ ಚಿಂತಯಿತ್ವಾ ತು ರಾಮಃ ಶತ್ರುಘ್ನಮಬ್ರವೀತ್ ॥ ೧೪ ॥**

**ಮುನೀಂಶ್ಚೈತಾನ್ಪುರಸ್ಕೃತ್ಯ ಗಚ್ಛ ಶತ್ರುಘ್ನ ಮಾ ಚಿರಂ ।**
**ಘಾತಯಸ್ವ ದುರಾಚಾರಂ ಲವಣಂ ಪಾಪಕಾರಿಣಂ ॥ ೧೫ ॥**

**ಘಾತಯಿತ್ವಾ ಚ ಲವಣಂ ಜನಾಂಸ್ತತ್ರ ನಿವೇಶಯ ।**
**ನಗರೀ ಚ ತಥಾ ತತ್ರ ತ್ವಯಾ ಕಾರ್ಯಾ ಮನೋರಮಾ ॥ ೧೬ ॥**

**ತಸ್ಯಾಂ ವಸ ಮಹಾಭಾಗ ಪಾಲಯಂಸ್ತ್ವಂ ವಸುಂಧರಾಂ ।**
**ತತ್ರಾಹಮಭಿಷೇಕ್ಷ್ಯಾಮಿ ರಾಜ್ಯೇ ತ್ವಾಮೃಷಿಭಿಃ ಸಹ ॥ ೧೭ ॥**

---

ದವನಾಗಿ ಬಹು ಶ್ರಮದಿಂದ ರಾಜ್ಯಭಾರಮಾಡಿದವನಾಗಿ ರಾಜ್ಯವನ್ನು ಅಭಿವೃದ್ಧಿಗೊಳಿಸಿದವನಾದರೂ ತಾನು ಮಾತ್ರ ಯಾವ ಸುಖೋಪಭೋಗಗಳನ್ನೂ ಬಯಸದೆ ಬಹು ನಿಯಮಯುಕ್ತನಾಗಿ ವಿಶೇಷವಾಗಿ ದಣಿದಿರುವನು.

೧೪. ಆದುದರಿಂದ ಲವಣಾಸುರನ ಸಂಗಡ ಯುದ್ಧಮಾಡುವುದಕ್ಕೆ ಈಗ ಶತ್ರುಘ್ನನನ್ನು ಕಳುಹಿಸುವುದೇ ಯುಕ್ತವೆಂದು ಮನಸ್ಸಿನಲ್ಲಿ ಯೋಚಿಸಿ, ಶತ್ರುಘ್ನನನ್ನು ಹತ್ತಿರಕ್ಕೆ ಕರೆದು ಇಂತೆಂದನು :—

೧೫. ಎಲೈ ಪ್ರೀತಿಯ ತಮ್ಮನಾದ ಶತ್ರುಘ್ನನೇ ! ನೀನು ಈ ಮಹರ್ಷಿಗಳ ಜತೆಯಲ್ಲಿ ಹೋಗಿ, ಮಹಾಪಾಪಿಯಾದ ದುರಾಚಾರಿಯಾದ ಲವಣಾಸುರನನ್ನು ಸೇಹರಿಸಿ ಬಾ. ಇನ್ನು ಸ್ವಲ್ಪವೂ ತಡಮಾಡದೆ ಈ ಋಷಿಗಳ ಜತೆಯಲ್ಲಿಯೇ ಈಗಲೇ ಹೊರಟುಬಿಡು.

೧೬. ಈ ಯುದ್ಧದಲ್ಲಿ ಆ ಲವಣರಾಕ್ಷಸನನ್ನು ಕೊಂದು ಆ ಪ್ರದೇಶದಲ್ಲಿ ಜನರು ವಾಸಮಾಡುವುದಕ್ಕೆ ಯೋಗ್ಯವಾದ ಅನುಕೂಲಗಳನ್ನು ಕಲ್ಪಿಸಿ ಬಾ. ಆ ಸ್ಥಳದಲ್ಲಿ ಮನೋಹರವಾದೊಂದು ನಗರವನ್ನೇ ನಿರ್ಮಾಣಮಾಡು.

೧೭. ಋಷಿಗಳಿಗೂ ಇನ್ನಿತರ ಬ್ರಾಹ್ಮಣರುಗಳಿಗೂ ಅಲ್ಲಿ ದೊಡ್ಡ ದೊಡ್ಡ ಅಗ್ರಹಾರಗಳನ್ನು ಕಟ್ಟಿಸಿ ದಾನಮಾಡು. ಪಟ್ಟಣ ರಚನೆಯು ಕೆಲಸವು ಮುಗಿದ ನಂತರ ನನಗೆ ಹೇಳಿ ಕಳುಹಿಸು. ನಾನೇ ಬಂದು ಆ ರಾಜ್ಯದಲ್ಲಿ ನಿನಗೆ ಪಟ್ಟಾಭಿಷೇಕ ಮಾಡುತ್ತೇನೆ.

ಏತಾವದುಕ್ತ್ವಾ ರಾಮಸ್ತದ್ವಾಕ್ಯಂ ಋಷಿಗಣಾನ್ವಿತಂ ।
ಅಭಿಷೇಕೇನ ದಿವ್ಯೇನ ಯೋಜಯಾಮಾಸ ತಂ ತದಾ ॥ ೧೮ ॥

ಉವಾಚ ಚ ಮಹಾತೇಜಾ ಭ್ರಾತರಂ ದೀಪ್ತತೇಜಸಂ ।
ಇಮಾಸ್ಯಶ್ವಸಹಸ್ರಾಣಿ ಚತ್ವಾರಿ ಭವತೋಽನಘ ॥ ೧೯ ॥

ರಥಾನಾಂ ದ್ವೇ ಸಹಸ್ರೇ ಚ ದ್ವಿಪೋತ್ತಮಶತಂ ತಥಾ ।
ಅಯುತಂ ಚ ಪದಾತೀನಾಂ ಸುವರ್ಣಸ್ಯ ಚ ಸಂಚಯಂ ॥ ೨೦ ॥

ಅಂತರಾಪಣವೀಥ್ಯಶ್ಚ ನಾನಾಪಣ್ಯೋಪಶೋಭಿತಾಃ ।
ಆದಾಯ ಗಚ್ಛ ಶತ್ರುಘ್ನ ಪರ್ಯಾಪ್ತಬಲವಾಹನಃ ॥ ೨೧ ॥

ಬಲಂ ಚ ಸುಭೃತಂ ವೀರ ತುಷ್ಟಪುಷ್ಟಮನುದ್ಧತಂ ।
ವಶಂ ಚ ಸಾಂತ್ವದಾನಾಭ್ಯಾಂ ಕುರುಷ್ವ ರಘುನಂದನ ॥ ೨೨ ॥

---

೧೮. ಈ ಪ್ರಕಾರವಾಗಿ ಋಷಿಗಳೆದುರಿನಲ್ಲಿಯೇ ಶತ್ರುಘ್ನನನ್ನು ಕುರಿತು ಹೇಳಿದ ಈ ಮಾತನ್ನೂ, ನಗರನಿರ್ಮಾಣ, ಶತ್ರುಘ್ನ ಪಟ್ಟಾಭಿಷೇಕಾದಿ ಶುಭ ವೃತ್ತಾಂತಗಳನ್ನೂ ಕೇಳಿ ಋಷಿಗಳೆಲ್ಲರೂ ಪರಮಾನಂದವನ್ನು ಹೊಂದಿದರು. ರಾಮನು ಆ ಬಳಿಕ ಶತ್ರುಘ್ನನನ್ನು ಋಷಿಗಳೊಡನೆ ಸೇರಿಸಿ ಶತ್ರುಘ್ನನೊಡ ನಿಂತೆಂದನು.

೧೯-೨೧. ಶತ್ರುಘ್ನ ! ನೀನು ಯುದ್ಧಕ್ಕೆ ಹೋಗುವಾಗ ನಿನ್ನೊಡನೆ ತೆಗೆದು ಕೊಂಡು ಹೋಗುವುದಕ್ಕಾಗಿ ಈ ಕೆಳಗೆ ವಿವರಿಸಿದ ಪರಿವಾರವನ್ನೂ, ವಸ್ತುಗಳನ್ನೂ ಕಳುಹುವೆನು. ನಾಲ್ಕು ಸಾವಿರ ಕುದುರೆಗಳು, ಎರಡು ಸಾವಿರ ರಥಗಳು, ನೂರು ಆನೆಗಳು, ಎಂಭತ್ತುಸಾವಿರ ಕಾಲಾಳು (ಪದಾತಿ) ಗಳು. ಬೇಕಾದಷ್ಟು ಹಣ (ಚಿನ್ನ), ನಾನಾವಿಧ ಅಂಗಡೀಸಾಲುಗಳು, ಧನಧಾನ್ಯ ಸಂಚಯುಗಳು ಇವಿಷ್ಟನ್ನೂ ನಿನ್ನ ಆಪ್ತರಿಗೆ ಬೇಕಾಗುವಷ್ಟು ವಾಹನಗಳನ್ನೂ ನೀನು ತೆಗೆದುಕೊಂಡು ಪ್ರಯಾಣ ಮಾಡು.

೨೨. ಸುಂದರವಾದ, ಪುಷ್ಟವಾದ, ಹೃಷ್ಟವಾದ ಬಲ (ಸೈನ್ಯ) ವೆಷ್ಟುಬೇಕೋ ಅಷ್ಟನ್ನೂ ಸ್ವಾಧೀನಮಾಡಿಕೊಂಡು, ಆ ಸೈನಿಕರನ್ನು ಸಾಮದಾನಾದಿಗಳಿಂದುಪ ಚರಿಸಿ ನಿನ್ನ ಕಾರ್ಯಕ್ಕೆ ಸಾಧಕರನ್ನಾಗಿ ಮಾಡಿಕೋ.

ನ ಹ್ಯರ್ಥಾಸ್ತತ್ರ ತಿಷ್ಠಂತಿ ನ ಮಿತ್ರಾಣಿ ನ ಬಾಂಧವಾಃ ।
ಸುಪ್ರೀತೋ ಭೃತ್ಯವರ್ಗಸ್ತು ಯತ್ರ ತಿಷ್ಠತಿ ರಾಘವ ॥ ೨೩ ॥

ಸ ತ್ವಂ ದುಷ್ಟಜನಾಕೀರ್ಣಾಂ ಸಂಸ್ಥಾಪ್ಯ ಮಹತೀಂ ಚಮೂಂ ।
ಏಕ ಏವ ಧನುಷ್ಪಾಣಿರ್ಯೋಧಯೇಥಾ ಮಧೋಃ ಸುತಂ ॥ ೨೪ ॥

ಯಥಾ ಚ ತ್ವಾಂ ನ ಜಾನಾತಿ ಗಚ್ಛ ತಂ ಯುದ್ಧಕಾಂಕ್ಷಿಣಃ ।
ಲವಣಃ ಸ ಮಧೋಃ ಪುತ್ರಸ್ತಥಾ ನಿಃಶಂಕನೋ ವ್ರಜ ॥ ೨೫ ॥

ಅಖ್ಯಾತೋ ನ ಚ ತಸ್ಯಾಸ್ತಿ ಕಶ್ಚಿನ್ಮೃತ್ಯುಭಯಾನ್ವಿತಃ ।
ದರ್ಶನಂ ಯೋಽಭಿಗಚ್ಛೇತ ಹನ್ಯತೇ ಲವಣೇನ ಸಃ ॥ ೨೬ ॥

---

೨೩. ಮಿತ್ರರಿಗಾಗಲೀ, ಬಂಧುಬಳಗಗಳಿಗಾಗಲೀ ಕೊಟ್ಟ ಹಣವು ನಿಲ್ಲುವುದಿಲ್ಲ. ನಾವು ನಮ್ಮ ಭೃತ್ಯವರ್ಗದವರು ತೃಪ್ತಿಪಡುವಂತೆ ಕೊಟ್ಟ ಹಣವು ಮಾತ್ರ ಶಾಶ್ವತವಾಗಿ ನಿಲ್ಲುತ್ತದೆಯಾದುದರಿಂದ ನಮ್ಮ ಸೇನೆಗೆ ನೆರವಾಗಿರುವ, ನಮ್ಮೊಡನೆ ಆಪತ್ಕಾಲದಲ್ಲಿ ಯುದ್ಧಮಾಡಲು ಸಿದ್ಧರಾಗಿ, ನಮಗೋಸ್ಕರ ಪ್ರಾಣಬಿಡಲು ಸಿದ್ಧರಾದ ಯೋಧರಿಗೆ ಕೊಡುವ ಹಣವು ಎಂದಿಗೂ ವ್ಯರ್ಥವಲ್ಲ. ಆ ಹಣವೇ ನಮಗೆ ಉಳಿಯುವ ಹಣವೆಂದು ತಿಳಿದುಕೋ.

೨೪-೨೫. ಮದದಿಂದ ತಿಂದುಕೊಬ್ಬಿದ ಪದಾತಿ (ಸಿಪಾಯಿ) ಗಳನ್ನು ನೀನು ಬಲವಾಗಿ ಗುಂಪುಕೂಡಿಸಿ, ದೊಡ್ಡ ಸೈನ್ಯವನ್ನು ಸಿದ್ಧಪಡಿಸಿಕೊಂಡು ಆ ಸೈನ್ಯವನ್ನು ಹೊರಗೇ ನಿಲ್ಲಿಸಿ ಧನುರ್ಬಾಣಧರನಾಗಿ ನೀನೊಬ್ಬನೇ ಯುದ್ಧಕ್ಕೆ ಹೋಗು. ಒಬ್ಬನೇ ಆ ಮಧುವಿನ ಮಗನಾದ ಲವಣನ ಮೇಲೆ ಬಾಣಪ್ರಯೋಗಮಾಡಿ ಅವನನ್ನು ಸಂಹರಿಸು.

೨೬. ಮನಸ್ಸಿನಲ್ಲಿ ದಿಗಿಲುಪಡದೆ ಅವನ ಮುಂದೆ ಹೋಗಿ ನಿಲ್ಲು. ಯಾವ ದೂತನನ್ನೂ ಸಮರಸಂಧಾನಾರ್ಥವಾಗಿ ಅವನ ಬಳಿಗೆ ಕಳುಹಿಸಬೇಡ. ಮತ್ತು ಅವನ ಬಳಿಗೆ ಯಾರೂ ಹೋಗುವುದಕ್ಕಾಗುವುದಿಲ್ಲ. ನಿನ್ನ ಕಡೆಯವರಾರನ್ನಾದರೂ ಅವನು ನೋಡಿದುದೇ ಆದರೆ ಅಂಥವನನ್ನು ಆ ಲವಣಾಸುರನು ಕೊಂದೇಬಿಡುತ್ತಾನೆ.

ಮಾಹೇಶ್ವರೇಣ ಶೂಲೇನ ವಿಯುಕ್ತಂ ನೃಗಯಾಗತಂ ।
ದ್ವಾರಮಾವೃತ್ಯ ಲವಣಂ ಯುದ್ಧ್ಯಸ್ವ ರಘುನಂದನ　　॥ ೨೭ ॥

ಮಾಹೇಶ್ವರಮನೋಘಂ ತು ಶೂಲಂ ಚ ಪರಿವರ್ಜಿತಂ ।
ಗೃಹಾಣೇಮಂ ಶರಂ ವತ್ಸ ಸರ್ವಾಯುಧವಿನಾಶನಂ　　॥ ೨೮ ॥

ಅನೇನ ಲವಣಂ ಯುದ್ಧೇ ಘಾತಯಿಷ್ಯಸ್ಯಸಂಶಯಂ ।
ಗಚ್ಛ ತ್ವಂ ಗ್ರೀಷ್ಮಶೇಷೇಣ ಲವಣಸ್ಯ ಜಿಘಾಂಸಯಾ　　॥ ೨೯ ॥

ಕಾಲೇ ತಥಾ ಪ್ರಾವೃಷಿ ಸಂಪ್ರವೃತ್ತೇ
ವಿವೃದ್ಧತೋಯಾಸು ಸರಿದ್ವರಾಸು ।

---

೨೭. ಆ ಲವಣಾಸುರನು ಪ್ರತಿದಿನವೂ ಬೇಟೆಗೆ ಹೋಗಿ ಹತ್ತುಸಾವಿರ ಪ್ರಾಣಿಗಳನ್ನು ತಿಂದು ಹಿಂತಿರುಗಿ ಬರುತ್ತಿರುವಾಗ, ಅವನ ಕೈಯಲ್ಲಿ ಮಾಹೇಶ್ವರ ಶೂಲವಿಲ್ಲದೆ ಇದ್ದ ಸಮಯವನ್ನು ನೋಡಿಕೊಂಡು, ಅವನ ಮನೇಬಾಗಿಲಿನಲ್ಲಿಯೇ ನಿಂತು ಮುತ್ತಿಗೆ ಹಾಕಿ ಅವನ ಸಂಗಡ ಯುದ್ಧಮಾಡಬೇಕು; ಕಂಡೆಯಾ! ಶತ್ರುಘ್ನ!

೨೮. ನಾಸೀಗ ನಿನ್ನ ವಶಕ್ಕೆ ಕೊಡುವ ಈ ನನ್ನ ಹಸ್ತದಿಂದ ಕೊಟ್ಟ (ಬಿಟ್ಟ) ದಿವ್ಯ (ರಾಮ) ಬಾಣವನ್ನು ತೆಗೆದುಕೋ. ಈ ಬಾಣವು ಮಾಹೇಶ್ವರಶೂಲ ವೊಂದನ್ನು ಹೊರತಾಗಿ ಉಳಿದ ಎಂತಹ ಆಯುಧ (ಶಸ್ತ್ರಾಸ್ತ್ರ) ಗಳನ್ನೂ ನಾಶ ಮಾಡುವ ಶಕ್ತಿಯನ್ನು ಹೊಂದಿರುವುದು.

೨೯. ಈ ಬಾಣದಿಂದ ನೀನು ಖಂಡಿತವಾಗಿಯೂ ಲವಣಾಸುರನನ್ನು ನಾಶ ಮಾಡಬಲ್ಲೆ. ನೀನು ಅವನ ಸಂಗಡ ಯುದ್ಧಮಾಡಬೇಕಾದರೆ ಗ್ರೀಷ್ಮಋತುವು ಕಳೆದುಹೋಗುತ್ತಿರುವ ಸಮಯದಲ್ಲಿ ಪ್ರಯಾಣಮಾಡು.

೩೦. ಈ ಪ್ರಕಾರವಾಗಿ ನೀನು ವರ್ಷ ಋತುವಿನ ಸಮಯದಲ್ಲಿ ಮಧುವನಕ್ಕೆ ಹೋಗು. ಆ ಕಾಲದಲ್ಲಿ ಎಲ್ಲೆಲ್ಲಿರುವ ನದಿಗಳೂ ತುಂಬಿ ಜಲಸಮೃದ್ಧಿಯಿಂದ ಹರಿಯುತ್ತಿರುತ್ತವೆ. ಅಂತಹ ವರ್ಷಾಕಾಲದಲ್ಲಿ ನಾನು ಕೊಟ್ಟಿರುವ ಬಾಣವನ್ನು

**ಮುದ್ದತ್ತ ಬಾಣೇನ ನಿಶಾಚರಸ್ಯ**
**ವ್ಯಸುಂ ಕ್ಷಿತೌ ಪಾತಯ ತಸ್ಯ ದೇಹಂ ॥ ೩೦ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಶೈಲೂಷಂ ಪ್ರತಿ ನಾರಾಯಣವಾಕ್ಯೇಷು ಲವಣವಧೇ ಶತ್ರುಘ್ನಂ ಪ್ರತಿ ರಾಮಾನುಶಾಸನಂ ನಾಮ ದ್ವಿಚತ್ವಾರಿಂಶದುತ್ತರ ದ್ವಿಶತತಮೋಽಧ್ಯಾಯಃ.**

---

ಆ ಲವಣನ ಮೇಲೆ ಬಿಟ್ಟು, ಅವನ ದೇಹದಿಂದ ಪ್ರಾಣವಾಯುವನ್ನು ಈಚೆಗೆ ಹೊರಡಿಸು. ಹೀಗೆಂದು ರಾಮನು ಶತ್ರುಘ್ನನಿಗೆ ಋಷಿಸಂಘಮಧ್ಯದಲ್ಲಿ ಆಜ್ಞಾಪಿಸಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪವಾದ ಶತ್ರುಘ್ನನಿಗೆ ರಾಮಾನುಶಾಸನವೆಂಬ ಹೆಸರಿನ ಇನ್ನೂರನಲವತ್ತೆರಡನೆಯ ಅಧ್ಯಾಯ ಮುಗಿದುದು.

.ಶ್ರೀ

# ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

# ತ್ರಿಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

॥ ರಾಮ ಉವಾಚ ॥

**ಸಂಪ್ರಾಪ್ಯ ಪ್ರಾವೃಷಂ ವತ್ಸ ಭೀಮತೋಯದನಿಃಸ್ವನಾಂ ।**
**ನಿಷಿದ್ಧಪಾಂಥಸಂಚಾರಾಂ ವಿದ್ಯುತ್ಕ್ಷುಭಿತತೋಯದಾಂ ॥ ೧ ॥**

**ಮೇಘೈಸ್ತೋಯಭರಾನಮ್ರೈಃ ಸ್ಥಗಿತಾರ್ಕನಿಶಾಕರಾಂ ।**
**ಪ್ರವರ್ಷಣಜಲಾಘಾತವಿಕಾಸಿತಸರೋರುಹಾಂ ॥ ೨ ॥**

---

## ಇನ್ನೂರನಲವತ್ತಮೂರನೆಯ ಅಧ್ಯಾಯವು.

## ವರ್ಷಋತುವಿನ ವರ್ಣನೆ.

೧. ಶ್ರೀರಾಮಚಂದ್ರ ಭಗವಾನನು ತನ್ನ ತಮ್ಮನಾದ ಶತ್ರುಘ್ನನನ್ನು ಕುರಿತು ಪುನಃ ಹೇಳುವನು :—ವತ್ಸ! ಶತ್ರುಘ್ನ! ಇನ್ನೇನು ಈಗ ಗ್ರೀಷ್ಮಋತುವು ಮುಗಿದು ಹೋಗುತ್ತ ಬಂದಿದೆ. ಪ್ರಾವೃಟ್ಕಾಲ (ವರ್ಷಾಕಾಲ) ವು ಸಮೀಪವಾಗುತ್ತಲಿದೆ. ಈ ವರ್ಷಋತುವಿನಲ್ಲಿ ಮೇಘಗಳು ಭಯಂಕರ ಧ್ವನಿಯಿಂದೊಡಗೂಡಿ (ಗುಡುಗು ಮಿಂಚುಗಳಿಂದ) ಗರ್ಜಿಸುತ್ತಿರುವವು. ಮಿಂಚುಗಳಿಂದ ಅಲ್ಲೋಲಕಲ್ಲೋಲವಾಗಿ ಚದುರಿಹೋದ ಮೇಘಗಳು ಬಲವಾದ ವೃಷ್ಟಿಗಳನ್ನು ಭೂಮಿಗೆ ಧಾರಾಕಾರವಾಗಿ ಸುರಿಸುತ್ತಾ ದಾರಿಗ (ಪಾಂಥ) ರ ಸಂಚಾರಕ್ಕೆ ಅಡ್ಡಿಯನ್ನುಂಟುಮಾಡಿರುವವು.

೨. ತಮ್ಮ ಹೊಟ್ಟೆಯಲ್ಲೆಲ್ಲಾ ನೀರನ್ನು ತುಂಬಿಕೊಂಡು ಗುಡುಗಾಡುತ್ತಿರುವ ಮೇಘರಾಜರುಗಳಿಂದ ಸೂರ್ಯಚಂದ್ರರು ಮುಚ್ಚಿಹೋಗಿರುವರು. ಜೋರೋ, ಎಂದು ಎಡೆಬಿಡದೆ ಹುಯ್ಯುತ್ತಿರುವ ಮಳೆಯ ನೀರಿನ ಏಟಿನಿಂದ ಸರೋವರದಲ್ಲಿರುವ ತಾವರೇಕಮಲಗಳು ಬಿರಿದು ಹೂವಾಗಿರುವವು.

**ಯಸ್ಯಾಂ ಘನವರತ್ರಾಸಾತ್ಪೀನೋತ್ತಂಪಿಪಯೋಧರಾಃ ।**
**ಕುರ್ವಂತ್ಯಾಲಿಂಗನಂ ಕಾಂತಾಃ ಕಾಂತಾನಾಂ ಮನಸಃ ಪ್ರಿಯಂ ॥ ೩ ॥**

**ಭೂಮಿರ್ನವತೃಣಚ್ಛನ್ನಾ ಶಕ್ರಗೋಪಾದ್ಯಭೂಷಿತಾ ।**
**ಭೀಮೌಘನಾದವಿಸ್ತೀರ್ಣಾ ಫೇನವತ್ಯಶ್ಚ ನಿಮ್ನಗಾಃ ॥ ೪ ॥**

**ಸತೋಯತೋಯದಾಕ್ರಾಂತಂ ಸ್ನಿಗ್ಧನೀಲಂ ನಭಸ್ತಲಂ ।**
**ಬಲಾಕಾಃ ಶೋಭಯಂತಿ ಸ್ಮ ಶಾರದಂ ತಾರಕಾ ಇವ ॥ ೫ ॥**

**ಘನಾ ಘನಾಗಮಾರೂಢಾ ಧೃತವಾಸವಕಾರ್ಮುಕಾಃ ।**
**ತೋಯೌಘಬಾಣಧಾರಾಭಿಃ ಪ್ರವವರ್ಷುರ್ಮಹೀತಲಂ ॥ ೬ ॥**

---

೩. ಮೇಘಗಳ ಘನಘರ್ಜನೆಯನ್ನು ಕೇಳಿ ಹೆದರಿಕೊಂಡು ನಡುಗುತ್ತಿರುವ ಹುಡುಗಿಯರು, ತಮ್ಮ ಉಬ್ಬಿದ ಸ್ತನ (ಮೊಲೆ) ಗಳನ್ನೂ ತಮ್ಮ ನಡುಕದೊಡನೆ ನಡುಗಿಸುತ್ತಾ ತಮ್ಮ ಪ್ರಾಣಕಾಂತರನ್ನು ಬೇಗ ಬಂದು ತಬ್ಬಿಕೊಳ್ಳುತ್ತಿದ್ದರು.

೪. ಭೂಮಿಯು ಎಳೆಗರಿಕೆ (ಹಸಿರು ಹುಲ್ಲು) ಗಳಿಂದ ಮುಚ್ಚಿಹೋಗಿರುವುದು. ಆ ಗರಿಕೆ (ಹುಲ್ಲು) ಗಳನ್ನು ಹಸುಗಳಿಗೆ ಮೇಯಿಸುತ್ತಾ ಗೋಪಾಲಕರು (ದನಕಾಯುವವರು) ದೊಣ್ಣೆಗಳನ್ನು ಹಿಡಿದು ಕಾಯುತ್ತಾ ನಿಂತಿರುವರು. ನೀರಿನಿಂದ ಎರಡು ದಡಕಟ್ಟೆ ಗರ್ಜಿಸುತ್ತಾ ಪೂರ್ಣಪ್ರವಾಹದಿಂದ ಹರಿಯುತ್ತಿರುವ ಹೊಳೆಗಳು ನೊರೆಗಳೊಡನೆ ಕೂಡಿ ತಮ್ಮ ಭಯಂಕರವಾದ (ಮೊರೆತ) ವನ್ನು ಬಹು ದೂರದವರೆಗೆ ವಿಸ್ತರಿಸಿರುವವು.

೫. ನೀರನ್ನು ತುಂಬಿಕೊಂಡು ವಿರಾಜಿಸುತ್ತಿರುವ ನೀಲವರ್ಣದಿಂದ ಕೂಡಿದ ಮೇಘಗಳು ಆಕಾಶದಲ್ಲಿ ಓಡಾಡುತ್ತಿರುವಲ್ಲಿ, ಆ ಮೇಘಮಾರ್ಗದಲ್ಲಿ ಸಂಚರಿಸುತ್ತಿರುವ ಹಂಸಪಕ್ಷಿಗಳನ್ನು ನೋಡಿದರೆ ನಕ್ಷತ್ರಗಳಿಂದ ವ್ಯಾಪ್ತವಾದ ಶರದಭ್ರವೋ ಎಂಬಂತೆ ಭ್ರಮೆಯುಂಟಾಗುತ್ತಿದೆ.

೬. ಮೋಡಗಳಿಂದ ವ್ಯಾಪಿಸಲ್ಪಟ್ಟ ಘನಾಕಾಶದಲ್ಲಿ ಒಡಮೂಡಿರುವ ಕಾಮನಬಿಲ್ಲ (ಇಂದ್ರಚಾಪ) ನ್ನು ನೋಡಿದರೆ, ಆ ಇಂದ್ರಧನುಸ್ಸಿನಿಂದ ಮುಕ್ತವಾದ ಶರಧಾರೆಗಳು ಭೂಮಿಯನ್ನು ಮುಚ್ಚಿಬಿಡುತ್ತಲಿವೆಯೋ ಎಂಬಂತೆ ಕಾಣುತ್ತಿತ್ತು.

**ಧಾರಾಕದಂಬಬಕುಲಕುಟಜಾರ್ಜುನಶೋಭಿತಾಃ ।**
**ಪಕ್ವಜಂಬ್ವಾಮ್ರಶಾಲಿನ್ಯೋ ವನರಾಜ್ಯೋ ಮನೋಹರಾಃ　　॥ ೭ ॥**

**ನಿದಾಘತಾಪಸಂತಪ್ತಾ ನವತೋಯಸಮುಕ್ಷಿತಾ ।**
**ಮಹೀ ವಿಸೃಜತೇ ಯಸ್ಯಾಂ ಗಂಧಮಾಲ್ಯಗುಣಂ ಸ್ವಕಂ　　॥ ೮ ॥**

**ಗರ್ಜಮಾನೇಷು ಮೇಘೇಷು ಮೃದಂಗಧ್ವನಿಸನ್ನಿಭಂ ।**
**ಅಸ್ಯಾಂ ಮಯೂರಾ ನೃತ್ಯಂತಿ ವಿಕಸತ್ಸತ್ಕಲಾಪಿನಃ　　॥ ೯ ॥**

**ಸಮೀರಣೇನ ಮೃದುನಾ ನುನ್ನಾಃ ಖೇ ಚ ಪಯೋಧರಾಃ ।**
**ಮಹಿಷ್ಯಶ್ಚ ವಿಸರ್ಪಂತಿ ಪಯಃಪೂರ್ಣಪಯೋಧರಾಃ　　॥ ೧೦ ॥**

---

೭. ಧಾರೆಧಾರೆಯಾಗಿ ಬೀಳುತ್ತಿರುವ ವೃಷ್ಟಿಮಧ್ಯದಲ್ಲಿ ಕಾಣುತ್ತಿರುವ ಕದಂಬ, ವಕುಲ, ಕುಟಜಾರ್ಜುನ ವೃಕ್ಷಗಳ ಪಂಕ್ತಿಗಳಿಂದಲೂ, ಪಕ್ವವಾದ ನೇರಿಳೆ, ಮಾವು, ಮುಂತಾದ ಫಲಗಳನ್ನುಳ್ಳ ವೃಕ್ಷಗಳಿಂದಲೂ, ಪೈರುಪಚ್ಚೆಗಳಿಂದಲೂ, ಕೂಡಿದ ಭೂಮಿಯು ಮನೋಹರವಾದ ವನರಾಜ್ಯದ ಶ್ರೀಯನ್ನು ಹೆಚ್ಚಿಸುತ್ತಿದ್ದಿತು.

೮. ಬಿಸಿಲಿನ ಝಳದಿಂದ ಕಾದುಹೋಗಿರುವ, ಹೊಸ ನೀರಿನಿಂದ ತುಂಬಿ ಹೋದ ಹೊರಭೂಮಿಯು ಈ ವರ್ಷಋತುವಿನಲ್ಲಿ ತನ್ನ ಸ್ವಭಾವವಾದ ಗಂಧಮಾಲ್ಯ ಗುಣಗಳನ್ನು ಕಳೆದುಕೊಂಡು ಬಿಟ್ಟಿರುವದು.

೯. ಮೃದಂಗಧ್ವನಿಗೆ ಸಮಾನವಾದ ಧ್ವನಿಯಿಂದ ಕೂಡಿ ಮೇಘಮಂಡಲವು ಗರ್ಜಿಸುತ್ತಿರುವ ಈ ಪ್ರಾವೃಟ್ಕಾಲದಲ್ಲಿ ನವಿಲುಗಳು ಗರಿಗಳನ್ನು ಕೆದರಿಕೊಂಡು ಚಿತ್ರ ವಿಚಿತ್ರವಾಗಿ ನರ್ತನಮಾಡುತ್ತಲಿವೆ.

೧೦. ಆಕಾಶದಲ್ಲಿ ಮೋಡಗಳು ವಿಶೇಷವಾಗಿ ವ್ಯಾಪಿಸಿ ಮೆಲ್ಲನೆ ತಂಪಾದ ಗಾಳಿಯು ಬೀಸುತ್ತಿರುವ ಆ ವರ್ಷಾಕಾಲದಲ್ಲಿ ಎಮ್ಮೆಗಳು ಕೆಚ್ಚಲು ತುಂಬಾ ಹಾಲನ್ನು ತುಂಬಿಕೊಂಡು ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಓಡಾಡುತ್ತಿರುತ್ತವೆ.

**ಪ್ರತ್ಯೂಷೇ ಸಂಚರಂತೀನಾಂ ಮಹಿಷೀಣಾಂ ತದಾ ಸಮಂ ।**
**ಘಂಟಾನಿನಾದೋ ಮಧುರಃ ಶ್ರೂಯತೇ ತೃಣಗಹ್ವರೇ ॥ ೧೧ ॥**

**ಸ್ಥಲಯಃ ಕೃಷ್ಣಸಾರಂಗನೇತ್ರೈರನಿಮಿಷೈರಿವ ।**
**ಯಸ್ಯಾಂ ಪಶ್ಯಂತಿ ಶತ್ರುಘ್ನ ಜಲಪೂರ್ಣಮಹೀತಲಂ ॥ ೧೨ ॥**

**ಮೇಘಪಾತೇನ ಹೃದ್ಯೇನ ಪೃಷತೋತ್ಕರಶಾಲಿನಾ ।**
**ಕಾಮಿನ್ಯಃ ಕಾಮಿನಾಂ ಸಾರ್ಧಂ ತ್ಯಾಜಿತಾ ರಘುನಂದನ ॥ ೧೩ ॥**

**ಅಪಾರಗಮ್ಯಾಃ ಸರಿತೋ ರಾಜಾನೋ ಗತವಿಗ್ರಹಾಃ ।**
**ಬಲಾಹಕಗಣಚ್ಛತ್ರಾ ದ್ಯೌಸ್ತಥೈವ ಸವಿಗ್ರಹಾ ॥ ೧೪ ॥**

---

೧೧. ಈ ಪ್ರಕಾರವಾಗಿ ಆ ಎಮ್ಮೆಗಳು ಕೆಚ್ಚಲುಭಾರವನ್ನು ಹೊತ್ತು ಓಡಾಡುತ್ತಲಿರುವ ಹುಲ್ಲುಗಾವಲಿನಲ್ಲಿ ಸಂಚರಿಸುತ್ತಿರುವ ಆ ಎಮ್ಮೆಗಳಿಗೆ ಕಟ್ಟಿರುವ ಗಂಟೆಗಳು ಮೃದುವಾಗಿ ಕಿಣಕಿಣನೆ ಶಬ್ದಮಾಡುತ್ತಾ ಶ್ರೋತೃಗಳ ಕಿವಿಗೆ ಇಂಪನ್ನುಂಟುಮಾಡುತ್ತವೆ.

೧೨. ಶತ್ರುಘ್ನ ! ಈ ವಿಧವಾದ ವರ್ಷಋತುವಿನ ದಿನಗಳಲ್ಲಿ ಜಲಪೂರ್ಣ (ಸಮೃದ್ಧ) ವಾದ ಮಹೀತಲದಲ್ಲಿ ಸಂಚರಿಸುತ್ತಿರುವ ನೆಟ್ಟದೃಷ್ಟಿಯುಳ್ಳ ಕೃಷ್ಣಸಾರಂಗ (ಜಿಂಕೆ) ಗಳನ್ನು ನೋಡಿದರೆ ಬಿಡುಗಣ್ಣರಾದ (ಅನಿಮಿಷರಾದ) ದೇವತೆಗಳು ಭೂಮಿಯಲ್ಲಿ ಸಂಚರಿಸುತ್ತಿರುವಂತೆ ತೋರುತ್ತಲಿದೆ.

೧೩. ಚೆನ್ನಾಗಿ ಮಳೆಯಾಗಿ ಪೈರುಗಳೆಲ್ಲಾ ನೀರುಗಳಿಂದ ತುಂಬಿಕೊಂಡಿರುವ ಮನೋಹರವಾದ ಇಂತಹ ವರ್ಷ ಋತುವಿನಲ್ಲಿ ಕಾಮುಕರೊಡನೆ ಸೇರಿದ್ದ ಕಾಮಿನಿಯರು ಪರಸ್ಪರ ಕೆಲಸಕ್ಕೆ ಅಗಲಿ ಹೊರಟುಹೋಗುತ್ತಾರೆ. (ಈ ಕಾಲದಲ್ಲಿ ವ್ಯವಸಾಯಗಾರರು ಭೂಮಿಯ ಹದವನ್ನು ನೋಡಿ ಪೈರುಗಳು ಸರಿಯಾಗಿ ಬೆಳೆಯುವಂತೆ ಗದ್ದೆ ಹೊಲಗಳ ಕೆಲಸಕ್ಕೆ ಹೋಗುವರಾದ್ದರಿಂದ ವಿಷಯಾಭಿಲಾಷೆಯನ್ನು ಮರೆತಿರುತ್ತಾರೆಂದು ಮುಖ್ಯವಾದ ಭಾವ)

೧೪. ಈ ವರ್ಷಾಕಾಲದಲ್ಲಿ ಹೊಳೆಗಳು ತುಂಬಿಹರಿಯುತ್ತಿರುವುದರಿಂದ ಅವುಗಳನ್ನು ದಾಟುವುದಕ್ಕಾಗುವುದಿಲ್ಲ. ರಾಜರು ಗತವಿಗ್ರಹ (ಯುದ್ಧವಿಲ್ಲದವ)

ನ ನಿವೃ೯ತಸುಖೋದ್ವಾಹಕಾಮ್ಯಾಕಾಮ್ಯಕ್ರಿಯಾ ಮಹೀ ।
ಪ್ರಹೃಷ್ಟಪೌರಾನುಗತೈಃ ಸಂವತ್ಸರಪುರೋಹಿತೈಃ　　॥ ೧೫ ॥

ವ್ಯಗ್ರಾಃ ಭವಂತಿ ರಾಜಾನಃ ಶಕ್ರಯಷ್ಟಿಪ್ರವೇಶನೇ ।
ಶೈಲೈರ್ನವತೃಣಚ್ಛನ್ನೈಸ್ತಥಾ ನೀಲಾಭ್ರಶೇಖರೈಃ　　॥ ೧೬ ॥

ಕಾಂತಿಮದ್ಭಿರ್ವಿಶೇಷೇಣ ವಿರಾಜತಿ ವಸುಂಧರಾ
ತಾಂ ಪ್ರಾವೃಷಂ ಪ್ರಾಪ್ಯ ನದತ್ಪಯೋದ
ಪ್ರನರ್ತಿತಾಶೇಷಶಿಖಂಡಿವೃಂದಾಂ ।

---

ರಾದಾಗ್ಯೂ, ಚಾತಕಪಕ್ಷಿಗಳಿಂದಲೂ ಮೇಘಗಣದಿಂದಲೂ ಕೂಡಿದ ಆಕಾಶವು ಮಾತ್ರ ಸವಿಗ್ರಹ (ಶರೀರವನ್ನು ಧರಿಸಿ) ದಂತೆ ತೋರುತ್ತಲಿರುವುದು.

೧೫. ವರ್ಷಾಕಾಲ ಕಳೆಯುವ ಹೊತ್ತಿಗೆ ಜನರು ತಮ್ಮ ತಮ್ಮ ಮನೆಗಳಲ್ಲಿ ನಡೆಯಬೇಕಾಗಿದ್ದ ಮದುವೆ, ಮುಂಜಿ ಮತ್ತು ನೈಮಿತ್ತಿಕಾದಿ ಕಾಮ್ಯಕರ್ಮಗಳನ್ನೆಲ್ಲಾ ಮುಗಿಸಿಕೊಂಡು ನಿರಾತಂಕರಾಗಿರುವರು. ಈ ರೀತಿ ಗೃಹಕೃತ್ಯದ ಹೊರೆ (ವಿವಾಹೋಪನಯನಾದಿ) ಯನ್ನು ಇಳುಕಿದ ಗೃಹಸ್ಥರೂ, ಅವರಿಂದ ಪ್ರಯೋಜನ ಪಡೆದ ಜೋಯಿಸರೂ ಪುರೋಹಿತರೂ ಸಹ ಆನಂದಪಡುತ್ತಾ ಸುಖವಾಗಿರುವರು.

೧೬ ಆ ಸಮಯದಲ್ಲಿ ಹೊಸ ಹೊಸ ಹುಲ್ಲಿನಿಂದ ಹಚ್ಚನೆ ಕಂಗೊಳಿಸುತ್ತಿರುವ ಪರ್ವತಪ್ರದೇಶಗಳಲ್ಲಿಯೂ, ಬೆಟ್ಟದ ಶಿಖರಗಳಲ್ಲಿಯೂ ರಾಜರುಗಳು ಧನುರ್ಬಾಣಧಾರಿಗಳಾಗಿ ಧನುರ್ವೇದಾಭ್ಯಾಸದಲ್ಲಿ ವ್ಯಗ್ರರಾಗಿರುವರು.

೧೭. ಈ ಪ್ರಕಾರವಾಗಿ ಆ ವರ್ಷಾಕಾಲವು ಜನರ ಮನಸ್ಸನ್ನು ಸಂತೋಷಪಡಿಸುತ್ತಾ ವಿಶೇಷವಾದ ಕಾಂತಿಯಿಂದ ಕೂಡಿ ವಿರಾಜಿಸುತ್ತಲಿರುವದು. ಇಂತಹ ವರ್ಷಋತುವಿನ ಸಮಯದಲ್ಲಿಯೇ ನೀನು ಲವಣಾಸುರನನ್ನು ಮುತ್ತಿಗೆ ಹಾಕಿ ಕೊಲ್ಲಬೇಕು. ಮೋಡಗಳು ಗುಡುಗುತ್ತಿರಲು, ನವಿಲುಗಳು ಕುಣಿಯುತ್ತಿರಲು, (ಶಿಖಂಡಿಯೆಂಬ ಪದಕ್ಕೆ, ರಾಕ್ಷಸರು ನಪುಂಸಕರಂತೆ ಸತ್ವವಿಲ್ಲದವರಾಗಿದ್ದ ಆ ಕಾಲದಲ್ಲೆಂದು ಒಂದರ್ಥ.) ಅಂತಹ ಸಮಯದಲ್ಲಿ ಲವಣಾಸುರನ ಮನೆಯ ಬಾಗಿಲನ್ನು

**ದ್ವಾರಂ ಸಮಾಶ್ರಿತ್ಯ ಮಧೋಸ್ತನೂಜಂ**
**ಧನುರ್ಧರಸ್ತ್ವಂ ಜಹಿ ರಾಜಪುತ್ರ** || ೧೭ ||

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಶೈಲೂಷಂ ಪ್ರತಿ ನಾಡಾಯನವಾಕ್ಯೇ ಪ್ರಾವೃಡ್ವರ್ಣನಂನಾಮ ತ್ರಿಚತ್ವಾರಿಂಶದುತ್ತರ ದ್ವಿಶತತಮೋಽಧ್ಯಾಯಃ.**

---

ಆಕ್ರಮಿಸಿ ಅವನನ್ನು ಮನೆಯೊಳಗೆ ಸೇರಿಸಿಕೊಂಡು ನೀನು ಧನುರ್ಬಾಣಧರನಾಗಿ ಅವನನ್ನು ಧೈರ್ಯವಾಗಿ ಕೊಂಡುಬಿಡು. ಈ ರೀತಿಯಾಗಿ ರಾಮನು ಶತ್ರುಘ್ನನೊಡನೆ ಹೇಳಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ವರ್ಷಋತುವರ್ಣನೆಯೆಂಬ ಹೆಸರಿನ ಇನ್ನೂರನಲವತ್ತಮೂರನೆಯ ಅಧ್ಯಾಯವು ಮುಗಿದುದು.



ಶ್ರೀ

# ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ ಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ

॥ ರಾಮ ಉವಾಚ ॥

ಹತ್ವಾ ಪ್ರಾವೃಷಿ ತಂ ಪಾಪಂ ಯಮುನಾತೀರಗೋಚರಃ ।
ನಯ ತ್ವಂ ಶಾರದಂ ಕಾಲಂ ಯಾವತ್ಸುಪ್ತೋ ಜನಾರ್ದನಃ ॥ ೧ ॥

ರಮಣೀಯತರಾ ಯತ್ರ ನದ್ಯಃ ಪ್ರಕಟಸೈಕತಾಃ ।
ಸುಸ್ವಾದುಶೀತಸಲಿಲಾಸಾರಸೈರುಪಶೋಭಿತಾಃ ॥ ೨ ॥

---

## ಇನ್ನೂರನಲವತ್ತನಾಲ್ಕನೆಯ ಅಧ್ಯಾಯವು.

೧. ಶ್ರೀರಾಮನು ಶತ್ರುಘ್ನನೊಡನೆ ಹೇಳುತ್ತಾನೆ :—ನಾನು ಮೇಲೆ ವಿವರಿಸಿದ ಮೇರೆ ವರ್ಷಋತುವಿನಲ್ಲಿ ಲವಣಾಸುರನನ್ನು ಸಂಹರಿಸಿದ ಒಳಿಕ ಯಮುನಾನದೀತೀರಕ್ಕೆ ಹೊರಟುಹೋಗು. ಶರದೃತುವಿನಲ್ಲಿ ಮಹಾವಿಷ್ಣುವು ಎಲ್ಲಿಯವರಿಗೆ ಶಯನಿಸಿರುವನೋ ಅಲ್ಲಿಯವರೆವಿಗೂ (ಕಾರ್ತಿಕಶುದ್ಧ ದ್ವಾದಶೀ ಅಥವಾ ಪ್ರಬೋಧದ್ವಾದಶಿ) ನೀನು ಯಮುನಾತೀರದಲ್ಲಿಯೇ ಕಾಲವನ್ನು ಕಳೆದುಬಿಡು.

೨. ಆ ಶರತ್ಕಾಲವು ಬಹು ಸೊಗಸಾದ ಕಾಲ. ಆ ಶರದೃತುವಿನಲ್ಲಿ ಹೊಳೆಯು (ಪ್ರವಾಹ) ಇಳಿದು ಮರಳು ದಿಣ್ಣೆಗಳೆಲ್ಲಾ ಕಾಣುವಂತಾಗುವದು. ಆಗ ಹೊಳೆಯನೀರು ಕುಡಿಯುವುದಕ್ಕೆ ಬಹು ರುಚಿಕರವಾಗಿರುವುದು. ಸಾರಸಪಕ್ಷಿಗಳು ಹೊಳೆಗಳ ದಡಗಳಲ್ಲೆಲ್ಲಾ ಸುಖವಾಗಿ ವಿಹರಿಸುವುವು.

ಬಾಲಾರ್ಕಸದೃಶೈಃ ಪದ್ಮೈಃ ಪದ್ಮಿನ್ಯೋ ಯತ್ರ ಭೂಷಿತಾಃ ।
ಸರಸಾಂ ವಿಮಲಂ ಯತ್ರ ತೋಯಂ ಮಧುರಶೀತಲಂ । ॥ ೩ ॥

ವರಸ್ತ್ರೀನಯನಾಕಾರಚಾರುಪತ್ರವಿಭೂಷಣೈಃ ।
ಪಶ್ಯಂತೀವೋತ್ಪಲೈರ್ವ್ಯೋಮ ಉತ್ಪಲಿನ್ಯಃ ಸುನಿರ್ಮಲಂ ॥ ೪ ॥

ನಭಃ ಸರಸಿ ವಿಸ್ತೀರ್ಣೇ ತಾರಾನುಗಣಚಿತ್ರಿತೇ ।
ಶೋಭತೇ ಚ ನಿಶೀಥೇಷು ಹಂಸವದ್ವಿಚರನ್ಶಶೀ ॥ ೫ ॥

ಆದಧಾನೋ ಮಹಚ್ಚಾಪಂ ಸಂದಧಾನಶ್ಚ ದೃಶ್ಯತೇ ।
ಯಾವತ್ಸಂಪೂರ ಮತ್ಯೇವ ಬಾಣೈರ್ಭೂಮಿತಲಂ ಶರತ್ ॥ ೬ ॥

---

೩. ಬೆಳಗಿನ ವೇಳೆಯಲ್ಲಿ ಎಳೆಬಿಸಿಲಿನಲ್ಲಿ ಆಗ ತಾನೇ ಅರಳಿದ ತಾವರೇ ಹೂವುಗಳಿಂದ ಕೂಡಿದ ಸರೋವರಗಳು ಸ್ವಚ್ಛವಾಗಿಯೂ, ನಿರ್ಮಲವಾಗಿಯೂ, ಮಧುರವಾಗಿಯೂ, ತಂಪಾಗಿಯೂ ಇರುವ ನೀರಿನಿಂದ ವಿರಾಜಿಸುತ್ತಿರುವುವು.

೪. ವರನಾರಿಯರ ನಯನಕಾಂತಿಯಂತೆ ಕಾಣುತ್ತಿರುವ ಮನೋಹರವಾದ ಕಮಲಪತ್ರಗಳೆಂಬ ಆಭರಣವನ್ನು ಧರಿಸಿರುವ, ಕನ್ನೈದಿಲೆಗಿಡಗಳು ತಮ್ಮ ಅರಳಿದ ಹೂವೆಂಬ ಕಣ್ಣುಗಳಿಂದ ಶುಭ್ರವಾದ ಅಂತರಿಕ್ಷವನ್ನು ನೋಡುತ್ತಿರುವುವೋ ಎಂಬಂತೆ ಆ ಶರತ್ಕಾಲವು ಬಹು ಸೊಬಗಿನಿಂದ ಕಾಣುತ್ತಿರುವದು.

೫. ರಾತ್ರಿವೇಳೆಯಲ್ಲಿ ಆ ಶರತ್ಕಾಲದಲ್ಲಿ ತಾರಾಗಣದಿಂದ (ನಕ್ಷತ್ರಗಳ ಗುಂಪು) ಚಿತ್ರಿತವಾದ ಆಕಾಶದಲ್ಲಿ ಚಂದ್ರೋದಯವಾಗಿರುವುದನ್ನು ನೋಡಿದರೆ, ಆಕಾಶವೆಂಬ ವಿಸ್ತಾರವಾದ ಕೊಳದಲ್ಲಿ ಚಂದ್ರನು ಹಂಸಪಕ್ಷಿಯ ರೂಪವನ್ನು ಧರಿಸಿ ವಿಹರಿಸುತ್ತಿರುವನೋ ಎಂಬಂತೆ ಕಾಣುತ್ತಲಿದೆ.

೬. ಶರತ್ತೆಂಬ ಶೂರನು ತನ್ನ ಕೈಯಲ್ಲಿ ಮಹತ್ತಾದೊಂದು ಧನುಸ್ಸನ್ನು ಧರಿಸಿ, ಅದರಲ್ಲಿ ಬಾಣಗಳನ್ನು ಆಕರ್ಣಾಂತವಾಗಿ ಹೂಡಿ ಭೂಮಿಯಲ್ಲಿ ಬಿಡುತ್ತಾ, ಈ ಭೂಮಿಯನ್ನು ಬಾಣ (ಶರತ್) ಗಳಿಂದ ತುಂಬಿಬಿಡುವಂತೆ ಕಾಣುತ್ತಿರುವನೋ ಎಂಬಂತೆ ಆ ಶರತ್ಕಾಲವು ಸಂಪೂರ್ಣವಾಗಿ ಲೋಕವನ್ನಾಕ್ರಮಿಸಿರುವದು.

ಜಾತೀಕುಸುಮಹೃದ್ಯಾಸು ಬಂಧುಜೀವೋಜ್ಜ್ವಲಾಸು ಚ ।
ಮನಃ ಪ್ರಸಾದಮಾಯಾತಿ ಹೃದ್ಯಾಸು ವನರಾಜಿಷು ॥ ೭ ॥

ಪಕ್ವಸಸ್ಯಾ ವಸುಮತೀ ಪರಾಂ ಧಾರಯತಿ ಶ್ರಿಯಂ ।
ಕಲವಿಂಕಾಃ ಪ್ರಹೃಷ್ಟಾಶ್ಚ ಪಕ್ವಕೇದಾರಪಂಕ್ತಿಷು ॥ ೮ ॥

ನಿಮ್ನಗಾಃ ಕಾಶವಸನಾಶ್ಚಕ್ರವಾಕಯುಗಸ್ತನಾಃ ।
ಸಾರಸಾರಾವಹಾಸಿನ್ಯಃ ಸುತರಾಂ ರತಿವರ್ಧನಾಃ ॥ ೯ ॥

ಹಂಸೈಃ ಸಂಘಟ್ಟನೋಪೇತಕಲ್ಹಾರರಜಸೋತ್ಕರೈಃ ।
ಸರಾಂಸಿ ದುರ್ನಿಭಾನ್ಯಾನಿ ಕುಶಲೈರಪಿ ಮಾನವೈಃ ॥ ೧೦ ॥

---

೭. ವನಪ್ರದೇಶಗಳಲ್ಲಿ ಬಿಟ್ಟಿರುವ ಬೆಳ್ಳಗಿರುವ ಜಾಜೀಹೂವುಗಳನ್ನೂ ಕೆಂಪಗಿರುವ ದಾಸವಾಳದ ಹೂವನ್ನೂ ನೋಡುತ್ತ ನೋಡುತ್ತ ಮನಸ್ಸಿಗೆ ಬಹಳ ಸಂತೋಷವುಂಟಾಗುತ್ತಿರುವುದು.

೮. ಆಗ ಸಸ್ಯಗಳು ಹಣ್ಣಾಗುತ್ತಿರುವುವು. ಶರತ್ಕಾಲದ ಆಗಿನ ಸೌಂದರ್ಯವನ್ನೂ, ಸಂಪತ್ತನ್ನೂ ವರ್ಣಿಸಲಸದಳ. ಹಣ್ಣಾದ ಹೊಲಗದ್ದೆಗಳ ಮೇಲೆಲ್ಲಾ ಗೊಂಚಲುಗಳ ಮೇಲೆ ಸಾರಸಪಕ್ಷಿಗಳು ಹಾರಾಡುತ್ತಿರುವುದನ್ನು ನೋಡಿದರೆ, ಮನಸ್ಸು ಆನಂದದಿಂದ ಉಬ್ಬಿಹೋಗುವುದು.

೯. ಜೊಂಡುಗಳೆಂಬ ಸೀರೆಯುನ್ನುಟ್ಟು, ಚಕ್ರವಾಕಯುಗ್ಮವೆಂಬ ಸ್ತನಯುಗ್ಮದಿಂದ ಕೂಡಿ ಜುಳುಜುಳು ಶಬ್ದಮಾಡುತ್ತಾ ಹರಿಯುತ್ತಿರುವ ಹೊಳೆಗಳನ್ನು ನೋಡಿದರೆ, ಆ ಹೊಳೆಯು ಹರಿಯುವ ಸದ್ದು ಸಾರಸಪಕ್ಷಿಗಳ ಧ್ವನಿಯನ್ನು ಅಣಕಿಸುತ್ತಲಿವೆಯೋ ಎಂಬಂತೆ ತೋರುತ್ತಾ ಎಲ್ಲರ ಮನಸ್ಸಿನಲ್ಲೂ ರತಿ (ಸಂತೋಷ) ವರ್ಧನವನ್ನುಂಟುಮಾಡುತ್ತಿರುವವು.

೧೦. ಕೊಳಗಳಲ್ಲಿ ಬಿಟ್ಟಿರುವ ಕೆಂದಾವರೆ ಹೂವುಗಳ ಮೇಲೆ, ಮೇಲಿನಿಂದ ಹಾರಿಬಂದು ಕುಳಿತು ಹಂಸಪಕ್ಷಿಗಳು ತಮ್ಮ ಸಂಘಟನ (ಬಡಿತ) ದಿಂದ ತಾವರೇದಂಟಿನ ರಜಸ್ಸನ್ನು (ಹುಡಿ) ಸುತ್ತಲೂ ಹರಡುತ್ತಿರುವವನ್ನು ನೋಡಿದ ಮಾತ್ರದಿಂದಲೇ, ಎಂತಹ ದೃಢಶಾಲಿಯಾದ (ಜಿತೇಂದ್ರಿಯನಾದ ) ಮನುಷ್ಯನ ಮನಸ್ಸೂ ಸೋತುಹೋಗುವದು.

ಪಾಂಡುರಾಭ್ರಕೃತನ್ಯಾಸಾಃ ಸರ್ವ ಏವ ಶಿಲೋಚ್ಚಯಾಃ ।
ಶ್ರಿಯಂ ವಿಡಂಬಯಂತೀವ ತುಷಾರಾದ್ರೇಃ ಸಮುಜ್ಜ್ವಲಾಂ ॥ ೧೧ ॥

ಶರತ್ಪ್ರಭೂತೋತ್ಪಲಚಾರುಪದ್ಮಾಂ
ವಿಪಕ್ವಕೇದಾರವಿಭೂಷಿತೋರ್ವೀಂ ।
ನೀತ್ವಾ ತತಃ ಪ್ರಾಪ್ಯ ಹಿಮಸ್ಯ ಕಾಲಂ
ಕಾರ್ಯಸ್ತ್ವಯಾ ಪತ್ತನಸನ್ನಿವೇಶಃ ॥ ೧೨ ॥

ಇತಿ ಶ್ರೀವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂಪ್ರತಿ ನಾಡಾಯನವಾಕ್ಯೇಷು
ಶತ್ರುಘ್ನಂಪ್ರತಿ ರಾಮಾನುಶಾಸನೇ ಶರದ್ವರ್ಣನಂ
ನಾಮ ಚತ್ವಾರಿಂಶದುತ್ತರ ದ್ವಿಶತತಮೋಽಧ್ಯಾಯಃ.

---

೧೧. ಬೆಳ್ಳಗಿರುವ ಬಿಳೀಮೋಡಗಳು ಬಂಡೆಗಳ ಮೇಲೆ ಕುಳಿತು ಬೆಳಗುತ್ತಿರುವ ನೊಬಗನ್ನು ನೋಡಿದರೆ, ಹಿಮಾಲಯಪರ್ವತದ ಅತ್ಯುಜ್ವಲವಾದ ಯಶಸ್ಸ (ಸಂಪತ್ತ) ನ್ನು ಹಳಿಯುತ್ತಿವೆಯೋ ಎಂಬಂತೆ ತೋರುತ್ತಲಿದೆ.

೧೨. ಅಪ್ಪ! ಶತ್ರುಘ್ನ! ಮೇಲೆ ನಾನು ವಿವರಿಸಿದಂತೆ ಸಕಲ ಲೋಕಮೋಹಕವಾದ ಶರತ್ಕಾಲದಲ್ಲಿ ತಾವರೇಗಿಡಗಳು ಹೂಬಿಡುವುದನ್ನು ನೋಡಿ ಆನಂದಿಸುತ್ತಾ, ಹಣ್ಣಾದ ತೆನೆಗಳಿಂದಲಂಕೃತವಾದ ವಸುಂಧರೆಯ ಸಂಪತ್ತನ್ನು ನೋಡುತ್ತಾ ನೀನು ಕಾಲವನ್ನು ಕಳೆದು ಹೇಮಂತಋತುವು ಆರಂಭವಾದೊಡನೆಯೇ ನಗರನಿರ್ಮಾಣಕಾರ್ಯಕ್ಕೆ ಆರಂಭಿಸುವವನಾಗು. ಹೀಗೆಂದು ಶ್ರೀರಾಮಚಂದ್ರಪರಬ್ರಹ್ಮನು ಶತ್ರುಘ್ನನಿಗೆ ಹೇಳಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಶರದ್ವರ್ಣನೆಯೆಂಬ ಹೆಸರಿನ
ಇನ್ನೂರನಲವತ್ತನಾಲ್ಕನೆಯ ಅಧ್ಯಾಯ
ಮುಗಿದುದು.

---

॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ ಪಂಚಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯ

॥ ರಾಮ ಉವಾಚ ॥

ಪ್ರಬುದ್ಧೇ ಪುಂಡರೀಕಾಕ್ಷೇ ಹೇಮಂತೇ ನೃಷ್ಣವೇ ಋತೌ ।
ಕಾರ್ಯಃ ಪುರನಿವೇಶಸ್ತೇ ತಥಾ ಜನಪದಸ್ಯ ವಾ ॥ ೧ ॥

ಪಕ್ವನಾರಂಗಸುಭಗೇ ನೀಹಾರಾವೃತನಿಮ್ನಗೇ ।
ಪ್ರಲೂನಧಾನ್ಯಕೇದಾರೇ ಗತತುಂದಶಿಲೀಮುಖೇ ॥ ೨ ॥

ಕೃತಸಂಗ್ರಹಣೇ ಕಾಲೇ ಪ್ರವೃತ್ತನೃಪವಿಗ್ರಹೇ ।
ವಿಪಂಕವಸುಧೇ ರಮ್ಯೇ ಸ್ವಾದುಶೀತಜಲಾಶಯೇ ॥ ೩ ॥

---

## ಇನ್ನೂರನಲವತ್ತೈದನೆಯ ಅಧ್ಯಾಯವು.

೧. ಶ್ರೀರಾಮನು ಶತ್ರುಘ್ನನನ್ನು ಕುರಿತು ಮತ್ತೂ ಹೇಳಿದುದೇನೆಂದರೆ:— ಶ್ರೀಮನ್ಮಹಾವಿಷ್ಣುವು ಎಚ್ಚೆತ್ತ ಬಳಿಕ ಹೇಮಂತಋತುವು ಪ್ರಾಪ್ತವಾದಮೇಲೆ ನೀನು ಪುರಪ್ರವೇಶಮಾಡಬೇಕಲ್ಲದೆ, ನವೀನ ನಗರ ನಿರ್ಮಾಣಕಾರ್ಯವನ್ನೂ ಸಹ ಆಗಲೇ ಆರಂಭಿಸಬೇಕು.

೨. ಆ ಹೇಮಂತಋತುವಿನ ಲಕ್ಷಣವನ್ನು ಹೇಳುತ್ತೇನೆ, ಕೇಳು. ಹಿಮ ಬಿದ್ದೊಡನೆಯೇ ಕಿತ್ತಲೇಮರಗಳಲ್ಲಿ ಯಥೇಚ್ಛವಾಗಿ ಹಣ್ಣುಗಳು ಬಿಡುವವು. ಹೊಳೆಗಳೆಲ್ಲಾ ಮಂಜಿನ ಹನಿಗಳಿಂದ ಮುಚ್ಚಿಹೋಗಿರುವವು. ಭತ್ತದಗದ್ದೆಗಳೆಲ್ಲಾ ಕುಯ್ಲಾಗಿರುವವು.

೩. ಮಾರ್ಗಶಿರಮಾಸ (ಹೇಮಂತ ಋತು) ಆರಂಭವಾದೊಡನೆ ಬ್ರಾಹ್ಮಣರು ಸಾಂಗ್ರಹಾಯಣ್ಯೇಷ್ಟಿಗೆ (ಯಜ್ಞಕರ್ಮಕ್ಕೆ) ಆರಂಭಿಸುವರು. ರಾಜರು ಯುದ್ಧ

**ವಿಶಾಲಾ ಯತ್ರ ಯಾಮಿನ್ಯಃ ಸುತರಾಂ ಸುರತಕ್ಷಮಾಃ ।**
**ಭೃಶಂ ಮನೋಹರಾ ಯೂನಾಂ ಪೀಡಿತಾಲಿಂಗನಕ್ಷಮಾಃ ॥ ೪ ॥**

**ಯತ್ರ ಶೀತಾಪದೇಶೇನ ಮಾನಿನೀಭಿರಪಿ ಸ್ವಯಂ ।**
**ಕ್ರಿಯತೇ ತ್ಯಕ್ತಮಾನಾಭಿಃ ಪ್ರಿಯಕಂಠಗ್ರಹೋತ್ಸವಃ ॥ ೫ ॥**

**ಸುಖೋಷ್ಣೋದಕಗಾಂಧರ್ವರಮ್ಯಪ್ರಸ್ರವಣೋದಕೇ ।**
**ಪ್ರರೂಢಪವನೋದ್ಭೂತೇ ಕಾಲೇ ನೀಲಧರಾತಲೇ ॥ ೬ ॥**

**ವಾಸೋದ್ಗಮನಸಂರುದ್ಧದುರ್ವಿಭಾವ್ಯನದೀತಟೇ ।**
**ಸಾರಸಾರಾವವಿಜ್ಞೇಯೇ ಕಾಲೇ ಕಾಮಿಜನಪ್ರಿಯೇ ॥ ೭ ॥**

**ಯತ್ರೇಕ್ಷುಪೀಡಯಂತ್ರಾಣಾಂ ಯಷ್ಟ್ಯಃ ಪುರುಷಚೋದಿತಾಃ ।**
**ಭಾಗ್ಯಾನೀವ ಮನುಷ್ಯಾಣಾಮುನ್ನಮಂತಿ ನಮಂತಿ ಚ ॥ ೮ ॥**

---

ಕ್ಕಾರಂಭಮಾಡುವರು. ಭೂಮಿಯು ಶೀತವು (ತೇವ, ವಸ್ತಿ) ಆರಿ ಕೊಚ್ಚೆ ಇಲ್ಲದೆ ನಿರ್ಮಲವಾಗಿರುವದು. ಕೊಳಗಳಲ್ಲಿರುವ ನೀರುಗಳೆಲ್ಲಾ ಬಹು ಸಿಹಿಯಾಗಿರುವವು.

೪. ಹೇಮಂತಋತುವಿನ ರಾತ್ರಿಕಾಲವು ಬಹಳ ವಿಸ್ತಾರವಾಗಿ (ಹೆಚ್ಚಾಗಿ) ರುವುದು. ಸ್ತ್ರೀಪುರುಷರು ಸುರತಸುಖದಲ್ಲಿ ಮುಳುಗಿರುವರು. ಯುವಕರು ಯುವತಿಯರನ್ನು ಆಲಂಗಿಸಿಕೊಂಡು ಚಳಿಯನ್ನು ನೀಗಿಕೊಳ್ಳುತ್ತಲಿರುವರು.

೫. ಈ ಚಳಿಗಾಲದಲ್ಲಿ ಮೇಲೆ ವಿವರಿಸಿದ ಮೇರೆ ಹೆಂಗಸರು ಚಳಿಯೆಂಬ ನೆಪಮಾಡಿಕೊಂಡು ನಾಚಿಕೆಯನ್ನು ಸಹ ಬಿಟ್ಟವರಾಗಿ ತಮ್ಮ ತಮ್ಮ ಪ್ರಿಯರ ಕಂಠವನ್ನು ಬಲವಾಗಿ ತಬ್ಬಿಕೊಳ್ಳುತ್ತಿರುವರು.

೬-೮. ಗಂಧರ್ವರು ಹಿಮಗಿರಿಯಲ್ಲಿ ಹರಿಯುತ್ತಿರುವ ಸುಖೋಷ್ಣವಾದ ಉದಕದಲ್ಲಿ ಮಿಂದೊಡನೆಯೇ ಆ ಉಷ್ಣೋದಕವು ಕೆಳಕ್ಕೆ ಹರಿದುಕೊಂಡು ಬಂದು ಹೊಳೆಯಾಗಿ ಹರಿದುಹೋಗುತ್ತಿರುವದು. ಅಂತಹ ಉದಕಧಾರಾಪ್ರವಾಹವು ಮಂದಮಾರುತದೊಡನೆ ಸೇರಿ ಹರಿದುಕೊಂಡು ಹೋಗುತ್ತಿರುವಾಗ, ಆ ನದೀನೀರಿನಲ್ಲಿ ಮೈಮೇಲಿನ ಬಟ್ಟೆಯನ್ನು ಬಿಚ್ಚಿ ಕಾಮಿಗಳು ಸ್ನಾನಮಾಡುತ್ತಲಿರುವರು. ಸಾರಸಪಕ್ಷಿಗಳ ಧ್ವನಿಗಳಿಂದ ಆ ಕಾಲವು ಬಹು ಉಲ್ಲಾಸವೊಡನೆ ಕೂಡಿರುವುದು. ಆ ಕಾಲದಲ್ಲಿ ಎಲ್ಲೆಲ್ಲಿಯೂ ಕಬ್ಬಿನ ಆಲೇಮನೆಯನ್ನು ಕಟ್ಟಿರುವರು. ಆಲೆಯ ಮನೆಯಲ್ಲಿ ನೆಟ್ಟಿರುವ ಕಬ್ಬಿನ ಗಾಣ (ಯಂತ್ರ) ಕ್ಕೆ ಆಳುಗಳು ಕಬ್ಬಿನ ಜಲ್ಲೆಗಳನ್ನು

ಕೃತಾಗ್ರ್ಯಾಯಣಪೂಜಾಶ್ಚ ಹುತಹವ್ಯಾ ದ್ವಿಜಾತಯಃ ।
ಯತ್ರ ಪ್ರವೇಶಹೃಷ್ಟಾಶ್ಚ ತಥಾ ಯತ್ರ ಚ ಕರ್ಷಕಾಃ ॥ ೯ ॥

ಗೃಹೇಷು ಚ ಸುಖೋಷ್ಣೇಷು ಗವಾಂ ನಿಃ ಶ್ವಾಸಮಾರುತೈಃ ।
ಸ್ವಾಧ್ಯಾಯಘೋಷೋ ವಿಪ್ರಾಣಾಂ ನೃಣಾಂ ಯತ್ರ ಸುಖಾವಹಃ ॥ ೧೦ ॥

ಸಿತಾಭಿಃ ಪಚ್ಯಮಾನಾಭಿಃ ಕ್ರಿಯಮಾಣೈಸ್ತಥಾ ಗುಡೈಃ ।
ರಮ್ಯಃ ಸುಶೀತಲಃ ಕಾಲಃ ಪ್ರಾಣಿಪ್ರಿಯಹುತಾಶನಃ ॥ ೧೧ ॥

ವಿಚರಂತಿ ನರಾ ಯತ್ರ ಗುರುಪ್ರಾವರಣಾಂಬರಾಃ ।
ಕುಂಕುಮೇನಾನುಲಿಪ್ತಾಂಗಾ ಧನಿನಃ ಪ್ರಿಯದರ್ಶಿನಃ ॥ ೧೨ ॥

---

ಕೊಟ್ಟೊಡನೆ, ಆ ಯಂತ್ರಗಳು ಕಬ್ಬಿನ ರಸವನ್ನು ಹೀರಿ ಕಬ್ಬಿನ ಸಿಪ್ಪೆಗಳು ಮೇಲಿಂದ ಕೆಳಕ್ಕೆ ಇಳಿಯುತ್ತಿರುವುದನ್ನು ನೋಡಿದರೆ, ಉಚ್ಚನೀಚ ಭಾವಗಳನ್ನು ಪದೇ ಪದೇ ಹೊಂದುತ್ತಿರುವ ಮನುಷ್ಯರ ಭಾಗ್ಯಸಂಕ್ತಿಗಳೋ ಎಂಬಂತೆ ಕಾಣುತ್ತಲಿರುವುವು.

೯. ಬ್ರಾಹ್ಮಣರು ಆ ವರ್ಷಾದಿಮಾಸ (ಮಾರ್ಗಶೀರ್ಷ) ದಲ್ಲಿ ಯಜ್ಞೇಶ್ವರನ (ಆಗ್ರಯಣ) ಪೂಜೆಯನ್ನು ಮಾಡಲಾರಂಭಿಸುವರು. ಇಷ್ಟಿಗೆ ಇದೇ ಆರಂಭ ಮಾಸ. ಬೇಸಾಯಗಾರರು ಆಗ ಬಹಳವಾದ ಆನಂದದಿಂದ ಮನೆಗೂ ಹೊಲಗದ್ದೆಗಳಿಗೂ ಹೋಗಿ ಬರುತ್ತಿರುವರು.

೧೦. ಹಸುಗಳು ಗೊತ್ತುಗೋಷ್ಠಗಳಲ್ಲಿ ಸುಖವಾಗಿ ಮಲಗಿಕೊಂಡು ಸುಖೋಷ್ಣವಾದ ಉಸಿರನ್ನು ಬಿಡುತ್ತಿರುವವು. ಬ್ರಾಹ್ಮಣರ ಮನೆಗಳಲ್ಲಿ ಕಿವಿಗಿಂಪಾಗಿರುವಂತೆ ವೇದಘೋಷಗಳು ಕೇಳಿಬರುತ್ತಿರುವುವು.

೧೧. ಆಲೇಮನೆಗಳಲ್ಲಿಟ್ಟಿರುವ ಕೊಪ್ಪರಿಗೆಗಳಲ್ಲಿ ಕಾಯಿಸುತ್ತಿರುವ ಬೆಳ್ಳಗಿರುವ ಕಬ್ಬಿನಹಾಲುಗಳು ಹದವಾಗಿ ಕಾದುದನ್ನು ನೋಡಿ ಕೂನೆಮರಗಳಿಗೆ ಹೊಯ್ದು ಬಿಸಿಬೆಲ್ಲವನ್ನು ಮಾಡುತ್ತಿರುವ ಈ ಕಾಲವು, ಪ್ರಾಣಿಗಳಿಗೆ ಬಹು ಹಿತವನ್ನುಂಟುಮಾಡುತ್ತಿರುವುದು. ಶೀತಲವಾದೀ ಹಿಮಗಾಲವು ಬಹು ಮನೋಹರವಾದುದು.

೧೨. ನೋಡುವುದಕ್ಕೆ ಬಹು ಅಂದವಾದ ಮುಖವುಳ್ಳ ಧನಿಕರು ಮಂದವಾದ ಬಟ್ಟೆಗಳನ್ನು ಹೊದೆದು, ಹಣೆಗೆ ಕುಂಕುಮದ ಬಟ್ಟನ್ನಿಟ್ಟುಕೊಂಡು ಈ ಹಿಮಗಾಲದಲ್ಲಿ ಇಲ್ಲಿಂದಲ್ಲಿಗೂ ಅಲ್ಲಿಂದಿಲ್ಲಿಗೂ ಸಂಚಾರಮಾಡುತ್ತಲಿರುವರು.

ಅಶ್ವಾಯಾಮಕ್ಷಮೋ ಕಾಲೇ ಯತ್ರ ಯೂನಾಂ ವಿಶೇಷತಃ ।
ಮೃಗಯಾ ದಯಿತಾ ವತ್ಸ ಮಂದರಶ್ಮೌ ದಿವಾಕರೇ ॥ ೧೩ ॥

ರೋಹಿತಾಶನಪುಷ್ಪಾನಾಂ ಸಾಧುನಾರಂಗವಾಸಿತಂ ।
ಮಹಿಷೀಣಾಂ ತು ಮಥಿತಂ ಗಂಧವರ್ಣರಸಾನ್ವಿತಂ ॥ ೧೪ ॥

ಇಕ್ಷವಶ್ಚ ವಿದಾರ್ಯಶ್ಚ ತಥೈವ ಮೂಲಕಾನಿ ಚ ।
ರಸವಂತಿ ವಿಶೇಷೇಣ ಯತ್ರ ಪಿಷ್ಟಕೃತಾನಿ ಚ ॥ ೧೫ ॥

ಪ್ರವೃತ್ತಮೇಖಲಾಬಂಧವಿವಾಹಾದಿಕ್ರಿಯೇ ಜನೇ ।
ಪ್ರಬುದ್ಧೇ ಪುಂಡರೀಕಾಕ್ಷೇ ಪ್ರವೃತ್ತೇ ಯಜ್ಞಸಂಸ್ತರೇ ॥ ೧೬ ॥

---

೧೩. ಈ ಹಿಮಂತಕಾಲದಲ್ಲಿ ಸೂರ್ಯನು ಮುಳುಗುವ ಹೊತ್ತಿನಲ್ಲಿ ಬೇಟೆಯಾಡುವುದರಲ್ಲಾಸಕ್ತರಾದ ಯುವಕರು ಕುದುರೆಗಳ ಮೇಲೆ ಕುಳಿತು ಸವಾರಿಮಾಡಿಕೊಂಡು ಮೃಗಯಾವಿಹಾರಕ್ಕೆ ಹೊರಡುತ್ತಿರುವರು.

೧೪. ಈ ಹೇಮಂತಋತುವಿನಲ್ಲಿ ಎಮ್ಮೆಗಳು ಕಾಡಿಗೆ ಹೋಗಿ ಹುಲ್ಲುಗಾವಲುಗಳಲ್ಲಿ ಯಥೇಚ್ಛವಾಗಿ ಹುಲ್ಲನ್ನು ಮೇದು ಮನೆಗೆ ಬಂದು ಹಾಲನ್ನು ಕರೆಯುವವು. ಆ ಹಾಲು ಗಂಧರಸದೊಡನೆ ಕೂಡಿ ಸುವಾಸನೆಯನ್ನು ಕೊಡುತ್ತಾ ಮಂದವಾಗಿ ಕಾಣುತ್ತಿರುವುದು.

೧೫. ಈ ಹಿಮಂತಋತುವಿನಲ್ಲಿ ಕಬ್ಬಿನ ಗದ್ದೆಗಳಲ್ಲಿ ಕಬ್ಬನ್ನು ಕತ್ತರಿಸುವರು. ಯಥೇಚ್ಛವಾಗಿ ಕಾಯಿಪಲ್ಯ (ತರಕಾರಿ) ಗಳು ಎಲ್ಲೆಲ್ಲಿಯೂ ಬೆಳೆದು ನಿಂತಿರುವುವು. ಹಿಟ್ಟುಮಾಡುವುದಕ್ಕೆ ಯೋಗ್ಯವಾದ ರಾಗಿ, ಜೋಳ, ಮುಂತಾದ ಧಾನ್ಯಗಳೂ ಈಗಲೇ ಕಟಾವಾಗುತ್ತಿರುವುವು.

೧೬. ತಮ್ಮ ತಮ್ಮ ಮನೆಗಳಲ್ಲಿ ಮುಂದೆ ನಡೆಯಬೇಕಾಗಿರುವ ಮುಂಜಿ, ಮದುವೆ ಮುಂತಾದ ಮಹೋತ್ಸವಗಳಿಗೂ, ಯಜ್ಞಯಾಗಾದಿ ಕ್ರಿಯೆಗಳಿಗೂ ಬೇಕಾದ ಸಂಭಾರವನ್ನು ಕೂಡಿಹಾಕಿ ಜನರು ಅಣಿಮಾಡಿಕೊಳ್ಳುತ್ತಿರುವರು.

ಕಾಲೇ ಪ್ರಹೃಷ್ಟಾಶ್ವಕರೀಂದ್ರಮುಖ್ಯೇ
ಕಾರ್ಯಾ ತ್ವಯಾ ರಾಘವ ವಾಸ್ತುಪೂಜಾ ।
ಆರಂಭಣೀಯಂ ನಗರಸ್ಯ ಕರ್ಮ
ಶಿವಾಯ ಸರ್ವಸ್ಯ ಜನಸ್ಯ ವತ್ಸ ॥ ೧೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂಪ್ರತಿ ನಾಡಾಯನವಾಕ್ಯೇಷು
ಶತ್ರುಘ್ನಂಪ್ರತಿ ರಾಮಸಮುಪದೇಶೇ ಹೇಮಂತ
ವರ್ಣನಂ ನಾಮ ಪಂಚಚತ್ವಾರಿಂಶದುತ್ತರ
ದ್ವಿಶತತಮೋಽಧ್ಯಾಯಃ.



---

೧೭. ಹಿಮಂತಋತುವಿನಲ್ಲಿ ಆನೆಗಳೂ ಕುದುರೆಗಳೂ ಬಹು ಉಲ್ಲಾಸದಿಂದ ಕೂಡಿರುವುವು. ಆ ಕಾಲದಲ್ಲಿ ನೀನು ವಾಸ್ತುಪುರುಷನನ್ನು ಪೂಜಿಸಿ, ಸಕಲ ಲೋಕದ ಜನರಿಗೂ ಸುಖವೂ ಮಂಗಳವೂ ಉಂಟಾಗಲೆಂದು ಹಾರೈಸುತ್ತಾ ನಗರ ನಿರ್ಮಾಣಕಾರ್ಯಕ್ಕೆ ಆರಂಭಿಸಬೇಕಯ್ಯಾ! ವತ್ಸ! ಶತ್ರುಘ್ನ! ಈ ಪ್ರಕಾರವಾಗಿ ಶ್ರೀರಾಮಚಂದ್ರನು ಶತ್ರುಘ್ನನೊಡನೆ ಹಿಮಂತ ಋತುಲಕ್ಷಣವನ್ನು ವರ್ಣಿಸಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಹೇಮಂತವರ್ಣನವೆಂಬ ಹೆಸರಿನ
ಇನ್ನೂರನಲವತ್ತೈದನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಷಟ್ಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ ॥

---

॥ ರಾಮ ಉವಾಚ ॥

ತತಸ್ತು ಶೈಶಿರೇ ಪ್ರಾಪ್ತೇ ಕಾಲೇ ತಪನವಲ್ಲಭೇ ।
ಹಿಮಾಲೀಪಟಲಚ್ಛನ್ನದುರ್ವಿಭಾವ್ಯದಿಶಾಮುಖೇ ॥ ೧ ॥

ಸುಪಕ್ವಮಾತುಲುಂಗಾಢ್ಯವನರಾಜಿಸುಗಂಧಿನಿ ।
ಪ್ರಫುಲ್ಲವೃತ್ತಕುಸುಮಚಾರುರಾಗೋಜ್ಜ್ವಲತ್ವಿಷಿ ॥ ೨ ॥

---

### ಇನ್ನೂರನಲವತ್ತಾರನೆಯ ಅಧ್ಯಾಯವು.

೧. ರಾಮನು ಪುನಃ ಶತ್ರುಘ್ನನನ್ನು ಕುರಿತು ಹೇಳುತ್ತಾನೆ:—ಶತ್ರುಘ್ನ ! ಇನ್ನು ಮುಂದೆ ಶಿಶಿಋತುವು ಸಂಪ್ರಾಪ್ತವಾದಾಗ ನಡೆಯುವ ಪರಿಸ್ಥಿತಿಯನ್ನು ವರ್ಣಿಸುತ್ತೇನೆ, ಕೇಳು. ಸೂರ್ಯನಕಾವು ಆ ಕಾಲದಲ್ಲಿ ಏರುತ್ತಲಿರುವುದು. ಯಾವ ದಿಕ್ಕಿನಲ್ಲಿ ನೋಡಲಿ, ಬೆಳಗಿನ ಸಮಯದಲ್ಲಿ ಮಂಜು ಆವರಿಸಿಕೊಂಡು ದಿಕ್ಕೇ ತೋಚದಂತಿರುವುದು.

೨. ಮಾದಳದ ಗಿಡಗಳಲ್ಲಿ ಬಿಟ್ಟ ಹಣ್ಣುಗಳು ಚೆನ್ನಾಗಿ ಮಾಗಿ ವನರಾಜಿಯನ್ನೆಲ್ಲಾ ತನ್ನ ಸುವಾಸನೆಯಿಂದ ಸುಗಂಧಿತವನ್ನಾಗಿ ಮಾಡುತ್ತಲಿರುವುದು. ಮತ್ತು ಆ ಮಾದಳದ ಗಿಡದಲ್ಲಿ ಚೆನ್ನಾಗಿ ಅರಳಿ ದುಂಡಾಗಿ ಬಿಟ್ಟಿರುವ ಹೂವುಗಳು ಮನೋಹರವಾದ ಕಾಂತಿಯಿಂದ ವಿರಾಜಿಸುತ್ತಿರುವುವು.

ಹಿಮಪ್ರಯಾತಸಂಜಾತಸರ್ವರತ್ನತೃಣೋಲ್ಬಣೇ ।
ಅತ್ಯರ್ಥಶೀತಕುಸುಮೇ ಕುಂಕುಮಾಗುರುವಲ್ಲಭೇ ॥ ೩ ॥

ಕಾಮಿನ್ಯಃ ಕುಂಕುಮಾದ್ರಾಂಗ್ಯಃ ಪೀನೋನ್ನತಪಯೋಧರಾಃ ।
ಆಲಿಂಗನೇನ ಕಾಂತಾನಾಂ ಯತ್ರ ಶೀತಭಯಾಪಹಾಃ ॥ ೪ ॥

ಪುಷ್ಪಿತೈರತಸೀವಾಟ್ಯೈರ್ನೀಲನೀರಜನಿರ್ಮಲೈಃ ।
ಪೂರ್ಣತೋಯಾಶಯಾಶಂಕಾ ಜಾಯತೇ ಸುಧಿಯಾಮಪಿ ॥ ೫ ॥

ಮಾಧ್ಯಕುಂದಕಪುಷ್ಪಾಢ್ಯಾ ವನರಾಜ್ಯೋ ಮನೋಹರಾಃ ।
ಸುಶೀರ್ಣಪರ್ಣಸರಲಾ ನಮೇರುಕವಿಭೂಷಣಾಃ ॥ ೬ ॥

---

೩-೪. ಮಂಜಿನ ಹನಿಗಳು ಹುಲ್ಲಿನ ಮೇಲೆ ಬಿದ್ದು ಅಂಟಿಕೊಂಡಿರುವುದನ್ನು ನೋಡಿದರೆ, ರತ್ನಗಳಿಂದ ಅವು ತಗುಲಿಕೊಂಡಿರುವಂತೆ ಕಾಣುತ್ತಿರುತ್ತವೆ. ಯಾವ ಹೂವುಗಳಾಗಲೀ, ತಣ್ಣಗೆ ಕೊರೆಯುತ್ತಾ ಇದ್ದಾಗ್ಯೂ ಸುಗುಂಧ ಪರಿಮಳವನ್ನು ಸೂಸುತ್ತಿರುತ್ತವೆ. ಕುಂಕುಮಕೇಸರಿ, ಪಚ್ಚಕರ್ಪೂರಗಳನ್ನು ತೇಯ್ದು ಗಂಧವನ್ನು ಮಾಡಿ, ಆ ತಣ್ಣಗಿರುವ ಗಂಧವನ್ನು ಮೈಗೆ ಲೇಪಿಸಿಕೊಂಡ ಚಪಲಾಕ್ಷಿಯರು ಚಳಿಯನ್ನು ತಡೆಯಲಾರದೆ, ಎತ್ತರವಾಗಿ ಉಬ್ಬಿರುವ ತಮ್ಮ ಸ್ತನಗಳಿಂದ ಕೂಡಿದವರಾಗಿ, ಮೈಬೆಚ್ಚಗಾಗಲೆಂದು ತಮ್ಮ ತಮ್ಮ ಕಾಂತರನ್ನು ಬಂದು ತಬ್ಬಿಕೊಳ್ಳುತ್ತಿರುವರು.

೫. ಗಿಡದ ತುಂಬಾ ಬೆಳ್ಳಗೆ ಹೂಬಿಟ್ಟಿರುವ ಅಗಸೇಮರಗಳ ಕಾಂತಿಗಳಿಂದಲೂ, ಕನ್ನೈದಿಲೆ ಹೂವುಗಳ ನೈರ್ಮಲ್ಯದಿಂದಲೂ ಕೂಡಿದ ಭೂಭಾಗವನ್ನು ನೋಡಿ, ವಿದ್ವಾಂಸರುಗಳ ಮನಸ್ಸಿನಲ್ಲಿಯೂ, ಸಹ, ಇದು ಭೂಮಿಯೋ ಅಥವಾ ಪೂರ್ಣೋದಕ ಪರಿಪೂರಿತವಾದ ಘನ ಸರೋವರವೋ ಎಂಬಂತೆ ಕಾಣುತ್ತಿರುವುದು.

೬. ಇರುವಂತಿಕೆ, ಮಲ್ಲೆ ಮುಂತಾದ ಹೂಗಳ ಪರಿಮಳದಿಂದ ವನಶ್ರೀಯು ಅಂದವಾಗಿ ತೋರುತ್ತಿರುವಳು. ಸುರಗೀಗಿಡದಲ್ಲಿ ಹಣ್ಣೆಲೆಗಳೆಲ್ಲಾ ಉದುರಿ ಬರೀ ಹೂವುಗಳೇ ತುಂಬಿ ಕಂಗೊಳಿಸುತ್ತಿರುವುದನ್ನು ನೋಡಿದರೆ ಕಣ್ಣಿಗೆ ಎಷ್ಟೋ ಆನಂದವನ್ನುಂಟು ಮಾಡುತ್ತಿರುವುದು.

ಸಂತ್ಯಕ್ತ್ವಾ ದಕ್ಷಿಣಾಮಾಶಾಂ ವ್ರಜಮಾನೇ ತಥೋತ್ತರಾಂ ।
ಸೂರ್ಯೇ ಮುಮೋಚ ಪವನಂ ನಿಃಶ್ವಾಸಮಿವ ದಕ್ಷಿಣಾ ॥ ೭ ॥

ರಮ್ಯಾಶ್ಚ ಗಂಧಮುಂಜರ್ಯಃ ಶೋಭಯಂತಿ ವನಸ್ಥಲೀಃ ।
ಮನ್ಮಥಸ್ಯ ಶರಾಃ ಕಾಂತಾಃ ಕಾಮಿಮನ್ಮಥವರ್ಧನಾಃ ॥ ೮ ॥

ಹಯಾನಾಂ ಮಧುರಃ ಶಬ್ದಃ ಶ್ರೂಯತೇ ದಶನೋದ್ಭವಃ ।
ಶಬ್ದೋ ಯುವಭುಜಾಂ ಯತ್ರ ಸ್ವಾಮಿನಾಂ ರತಿವರ್ಧನೇ ॥ ೯ ॥

ನಿರ್ಮಲಾನಾಂ ತು ಸರಸಾಂ ವಿನಿವಿಷ್ಟಾ ಜಲೇಚರಾಃ ।
ಬ್ರುವಂತೋ ಮಧುರಂ ಪಾಂಥಾ ಜನಯಂತಿ ಪರಾಂ ಮುದಂ ॥ ೧೦ ॥

---

೭. ಇದೇ ಶಿಶಿರಋತುವಿನಲ್ಲಿ ಸೂರ್ಯನು ದಕ್ಷಿಣದಿಕ್ಕಿನಿಂದ ಉತ್ತರದಿಕ್ಕಿಗೆ ಪ್ರಯಾಣಮಾಡುವನು. ಅಂದರೆ ದಕ್ಷಿಣಾಯನವು ಕಳೆದು ಉತ್ತರಾಯಣಕ್ಕೆ ಆರಂಭವಾಗುವುದೆಂದು ತಿಳಿಯಬೇಕು. ಈ ರೀತಿಯಾಗಿ ಬಹು ದಿನದಿಂದ ತಾನು ವಾಸವಾಗಿದ್ದ ದಕ್ಷಿಣದಿಕ್ಕನ್ನು (ಊರನ್ನು) ಬಿಟ್ಟು ಮತ್ತೊಂದು ಊರಾದ ಉತ್ತರ ದಿಕ್ಕಿಗೆ ಹೋಗುವಾಗ ಸೂರ್ಯನು ವ್ಯಸನಾಕ್ರಾಂತನಾಗಿ ದೀರ್ಘವಾದ ನಿಶ್ವಾಸವನ್ನು ಬಿಟ್ಟನೋ ಎಂಬಂತೆ ದಕ್ಷಿಣದಿಕ್ಕು ತೋರುತ್ತಲಿರುವುದು.

೮. ಗಂಧವಮರದಲ್ಲಿ ಬಿಟ್ಟಿರುವ ಹೂಗೊಂಚಲುಗಳನ್ನು ನೋಡಿದರೆ ರಮ್ಯವಾದ ವನಸ್ಥಳಗಳು ಮತ್ತೆ ಮತ್ತೆ, ರಮ್ಯವಾಗಿ ಕಂಗೊಳಿಸುತ್ತಲಿವೆಯೋ ಎಂಬಂತೆ ಕಾಣುತ್ತಿರುವುವು. ಮತ್ತು ಆ ಶಿಶಿರಋತುವಿನಲ್ಲಿ ಕಾಮಿಗಳು ಮನ್ಮಥನ ಬಾಣಗಳ ಏಟಿಗೆ ಸಿಕ್ಕಿ ಆ ಮದನನ ಬಾಣದ ಏಟಿನಿಂದ ಬಹಳ ಸೋತು ಕಂಗೆಟ್ಟು ಮದನಾಧೀನರಾಗುತ್ತಿದ್ದರು.

೯. ಕುದುರೆಗಳು ಹುಲ್ಲನ್ನು ಅಗಿದು, ಮಾಡುತ್ತಿರುವ ಹೇಷಾರವವು ಸೊಗಸಾಗಿ ತಮ್ಮ ಕಿವಿಗಳಿಗೆ ಕೇಳಿ ಬರಲು, ಆ ಕುದುರೆಗಳ ಸವಾರ (ಯಜಮಾನ) ರು ಮದನಾತುರರಾಗುತ್ತಿದ್ದರು.

೧೦. ದಾರಿಗರು ದಾರಿ ನಡೆದು ಬಲು ದಣಿದವರಾಗಿ ದಾರಿಯಲ್ಲಿ ದೊರೆತ ನಿರ್ಮಲೋದಕವುಳ್ಳ ಕೊಳದ ದಡದಲ್ಲಿ ಕುಳಿತು, ಆ ಕೊಳದೊಳಗೆ ಈಜುತ್ತಾ ಇದ್ದ ಜಲಚರ (ಮೀನು) ಗಳನ್ನು ನೋಡಿ, ಆಹಾ! ಈ ನೋಟವು ಎಷ್ಟು ಸೊಗಸಾಗಿದೆ ಯೆಂದು ತಮ್ಮಲ್ಲಿ ತಾವು ಹೇಳಿಕೊಂಡು ಆನಂದಪಡುತ್ತಿದ್ದರು.

ಜನಯಂತಿ ಪರಾಂ ಪ್ರೀತಿಂ ಕಾಮಿನೀನಾಂ ತು ಕಾಮುಕಾಃ ।
ಯತ್ರ ಮೇಧ್ಯೈರ್ನವೈರ್ವತ್ಸ ಮಾತುಲುಂಗಾಧಿವಾಸಿತೈಃ ॥ ೧೧ ॥

ವಾಪೀಕೂಪತಟಾಗೇಷು ಹ್ರದಪ್ರಸ್ರವಣೇಷು ಚ ।
ಯತ್ರಕಾಲೇ ರಟಂತ್ಯಾಪಃ ಕಂಪಯಂತ್ಯಃ ಪುರೀಂ ಮಹತ್ ॥ ೧೨ ॥

ತಸ್ಮಿಂಸ್ತ್ವಂ ಶಿಶಿರೇ ಕಾಲೇ ಕೃತ್ವಾ ಗೃಹವರೇ ಸ್ವಕೇ ।
ಪ್ರಾವೇಶಯತು ವಿಧಿನಾ ಶಿಲ್ಪಿಭಿರ್ಯಂತ್ರನಿರ್ಮಿತೈಃ ॥ ೧೩ ॥

ಧರ್ಮೇಣ ಪಾಲಯರ್ಙ ಕ್ಷೋಣೀಂ ವಸ ರಾಜೀವಲೋಚನ ।
ಹೃದಿ ಕಾರ್ಯಸ್ತ್ವಯಾ ಧರ್ಮೋ ನಿತ್ಯಮೇವ ನರೋತ್ತಮ ॥ ೧೪ ॥

---

೧೧. ಮಾದಳದ ವನದಲ್ಲಿ ಕುಳಿತು, ಆ ಮಾದಳದ ಗಿಡಗಳಲ್ಲಿ ಅರಳುತ್ತಿರುವ ಹೊಸ ಹೊಸ ಹೂವುಗಳನ್ನು ನೋಡಿ ಹಲ್ಲುಕಿರಿಯುತ್ತಿರುವ (ಸಂತೋಷಪಡುತ್ತಿರುವ) ಕಾಮುಕರು, ತಮ್ಮ ತಮ್ಮ ಕಾಮಿನಿಯರ ಮನಸ್ಸಿಗೆ ಬಹಳ ಪ್ರೀತಿಯನ್ನುಂಟು ಮಾಡುತ್ತಿದ್ದರು.

೧೨. ಭಾವಿಗಳೂ, ಕುಂಟೆಗಳೂ, ಕೊಳಗಳೂ ಮಡುವಾಗಿ ತುಂಬಿ ಹರಿಯುತ್ತಾ ಶಬ್ದಮಾಡುತ್ತಿರುವುದನ್ನು ನೋಡಿ ಊರಿಗೆ ಊರೇ ನಡುಗುತ್ತಿತ್ತು. (ಅಂದರೆ ಹಳ್ಳಕೊಳ್ಳಗಳೂ ಭಾವಿಗಳೂ ತುಂಬಿ ಅದರ ಆಳವು ಗೊತ್ತಿಲ್ಲದಿರುವಾಗ ಆ ಸ್ಥಳದಲ್ಲಿ ತಿರುಗಾಡುವುದಾದರೆ ಎಲ್ಲಿ ಮಡುವಿನಲ್ಲಿ ಮುಳುಗಿ ಸತ್ತುಹೋದೇವೋ, ಮಕ್ಕಳು ಮರಿಗಳು ಎಲ್ಲಿ ಆ ಸ್ಥಳಕ್ಕೆ ಹೋಗಿ ಕಾಲುಜಾರಿ ಮಡುವಿಗೆ ಬೀಳುವುವೋ ಎಂಬ ದಿಗಿಲಿನಿಂದ ಜನರು ಹೆದರುತ್ತಾರೆಂಬ ಗೂಢಾಶಯವನ್ನು ತೋರಿಸುವುದಕ್ಕಾಗಿ ಲೋಕದ ಜನರನ್ನು ಹೆದರಿಸುತ್ತಿತ್ತೆಂದು ಇಲ್ಲಿ ಅಭಿಪ್ರಾಯಮಾಡಿಕೊಳ್ಳಬೇಕು.)

೧೩. ಶತ್ರುಘ್ನ! ಅಂತಹ ಶಿಶಿರಋತುವಿನಲ್ಲಿ ನೀನು ಎಲ್ಲೂ ಹೊರಕ್ಕೆ ಹೋಗಕೂಡದು. ಮನೆಯಲ್ಲೇ ಇದ್ದುಕೊಂಡು ಶಿಲ್ಪಿ (ಇಂಜನಿಯರು) ಗಳಿಂದಲೂ, ಯಂತ್ರನಿರ್ಮಾಣವೇತ್ತ (ಮೆಷಿನರಿಗಳು) ರಿಂದಲೂ, ಸರಿಯಾಗಿ ಕೆಲಸಮಾಡಿಸಿ ವಿಧಿವಿಹಿತವಾಗಿ (ಪ್ಲಾನನ್ನನುಸರಿಸಿ) ನಗರವನ್ನು ನಿರ್ಮಾಣಮಾಡಿಸು.

೧೪. ಅಪ್ಪ! ಮಗು! ಶತ್ರುಘ್ನ! ನೀನು ಜಾಣನಾಗಿ ನೀನೇ ಒಂದು ನಗರವನ್ನು ನಾನು ಹೇಳಿದಂತೆ ಬಹು ಸೊಗಸಾಗಿ ಕಟ್ಟಿಸಿ ಅಲ್ಲಿಗೆ ನೀನೇ ರಾಜನಾಗಿ ಭೂಮಿಯನ್ನಾಳುತ್ತಿರಪ್ಪ! ನೀನು ನಾನು ಹೇಳಿದಂತೆ ರಾಜ್ಯಭಾರಮಾಡುತ್ತಿರು

ಉತ್ತಿಷ್ಠ ಶೀಘ್ರಂ ವಿಜಯಾಯ ಗಚ್ಛ
ದಿಷ್ಟಾಂ ಶ್ರಿಯಂ ಪ್ರಾಪ್ನುಹಿ ರಾಜಪುತ್ರ ।
ರಕ್ಷಂತು ದೇವಾಸ್ತವ ಸರ್ವಕಾಲಂ
ಪದಂ ವಿಧತ್ಸ್ವಾರಿಗಣಸ್ಯ ಮೂರ್ಧ್ನಿ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂಪ್ರತಿ ನಾಡಾಯನ ವಾಕ್ಯೇಷು
ಶತ್ರುಘ್ನಂ ಪ್ರತಿ ರಾಮಾನುಶಾಸನೇ ಲವಣಂ ಪ್ರತಿ
ಶತ್ರುಘ್ನಪ್ರಸ್ಥಾನಂನಾಮ ಷಟ್ಚತ್ವಾರಿಂಶ
ದುತ್ತರ ದ್ವಿಶತತಮೋऽಧ್ಯಾಯಃ



ವಾಗ, ಪ್ರತಿನಿತ್ಯವೂ ಮನಸ್ಸಿನಲ್ಲಿ ಧರ್ಮಬುದ್ಧಿಯನ್ನೇ ಇಟ್ಟುಕೊಂಡು ರಾಜ್ಯಭಾರ ಮಾಡಬೇಕು ಕಂಡೆಯಾ? ರಜಸ್ತಮೋಗುಣಗಳು ಮಾತ್ರ ದೂರದಲ್ಲಿರಲಪ್ಪ.

೧೫. ಮಗು! ಇನ್ನು ಮೇಲಕ್ಕೇಳು, ತಡಮಾಡಬೇಡ. ಯುದ್ಧಕ್ಕೆ ಹೋಗಿ ಜಯಶಾಲಿಯಾಗಿ ಬಾ. ಅಖಂಡೈಶ್ವರ್ಯಶಾಲಿಯಾಗಿ ಬಾಳು. ಸಕಲ ದೇವತೆಗಳೂ ಸರ್ವಕಾಲದಲ್ಲಿಯೂ ನಿನ್ನನ್ನು ಸಂರಕ್ಷಿಸಲಿ. ಶತ್ರುಗಳ ತಲೆಯನ್ನು ನಿನ್ನ ಕಾಲಿನಿಂದ ಮೆಟ್ಟಿ ಲೋಕೈಕವೀರನಾಗಿ ಬಾಳು! ಹೀಗೆಂದು ರಾಮಚಂದ್ರಪರಮಾತ್ಮನು ತನ್ನ ಪ್ರೀತಿಯ ತಮ್ಮನಾದ ಶತ್ರುಘ್ನನನ್ನು ಆಶೀರ್ವದಿಸಿ ಅನುಗ್ರಹಿಸಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದ ಮಾರ್ಕಂಡೇಯ
ವಜ್ರಸಂವಾದರೂಪವಾದ ಶೈಲೂಷನನ್ನು ಕುರಿತು ನಾಡಾಯನನು
ಹೇಳುತ್ತಿರುವ ನೀತಿಬೋಧಕವಚನಗಳಲ್ಲಿ ಶತುಘ್ನನನ್ನು
ಕುರಿತು ರಾಮಾನುಶಾಸನವೆಂಬ ಹೆಸರನ್ನುಳ್ಳ
ಇನ್ನೂರನಲವತ್ತಾರನೆಯ ಅಧ್ಯಾಯವು
ಮುಗಿದುದು.



ಶ್ರೀಃ

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತಚತ್ವಾರಿಂಶದುತ್ತರ ದ್ವಿಶತತಮೋಽಧ್ಯಾಯಃ ॥

॥ ನಾರಾಯಣ ಉವಾಚ ॥

ಇತಿ ರಾಮವಚಃ ಶ್ರುತ್ವಾ ಬಾಢಮುಕ್ತ್ವಾ ಸ ಸತ್ವರಃ ।
ಅಭಿವಾದ್ಯ ವಸಿಷ್ಠಸ್ಯ ಪಾದೌ ರಾಮಸ್ಯ ಚಾಪ್ಯಥ ॥ ೧ ॥

ಪುರಸ್ಕೃತ್ಯ ಮಹಾಭಾಗಾನ್ಭಾರ್ಗವಪ್ರಮುಖಾನ್ಋಷೀನ್ ।
ಯಥೋಕ್ತಸೈನ್ಯಾನುಗತಃ ಪ್ರಯಯೌ ಭೀಮವಿಕ್ರಮಃ ॥ ೨ ॥

---

### ಇನ್ನೂರನಲವತ್ತೇಳನೆಯ ಅಧ್ಯಾಯವು.

೧. ನಾರಾಯಣನು ಶೈಲೂಷನೆಂಬ ಗಂಧರ್ವರಾಜನ ಕಡೆಗೆ ತಿರುಗಿಕೊಂಡು ಅವನ ಮುಖವನ್ನು ನೋಡುತ್ತಾ ತನ್ನ ನೀತಿಪ್ರಕರಣವನ್ನು ಮುಂದುವರಿಸಿದ ನದೆತೆಂದೊಡೆ :—

ಕೇಳಯ್ಯಾ! ಶೈಲೂಷ! ಮೇಲೆ ವಿವರಿಸಿದಂತೆ ಅಪ್ಪಣೆಕೊಡಿಸಿದ ಶ್ರೀರಾಮಚಂದ್ರನ ಮಾತನ್ನು ಕೇಳಿ ಶತ್ರುಘ್ನನು ಹಾಗೆಯೇ ಆಗಲೆಂದೊಪ್ಪಿಕೊಂಡು ಮೇಲಕ್ಕೆದ್ದು, ಮೊದಲು ವಸಿಷ್ಠರಿಗೂ, ಆ ಮೇಲೆ ರಾಮನ ಪಾದಗಳಿಗೂ ನಮಸ್ಕಾರ ಮಾಡಿದನು.

೨. ಆ ಬಳಿಕ ರಾಮಸಂದರ್ಶನಕ್ಕಾಗಿ ಬಂದಿದ್ದ ಚ್ಯವನನೇ ಮೊದಲಾದ ಸಕಲ ಋಷಿಗಳನ್ನೂ ಮುಂದೆ ಬಿಟ್ಟುಕೊಂಡು, ಯಥೋಚಿತವಾದ ಸೈನ್ಯವನ್ನು ಸಂಗಡ ಕರೆದುಕೊಂಡು ಮಹಾಪರಾಕ್ರಮಶಾಲಿಯಾದ ಶತ್ರುಘ್ನನು ವಿಜಯಯಾತ್ರೆಗಾಗಿ ಹೊರಟನು.

ವಾಲ್ಮೀಕೇರಾಶ್ರಮಂ ಪ್ರಾಪ್ಯ ತಾಮುವಾಸ ನಿಶಾಂ ।
ಪೂಜಯಿತ್ವಾ ತು ವಾಲ್ಮೀಕಿನ್ಮೃಷಿಣಾ ಪ್ರತಿಪೂಜಿತಃ ॥ ೩ ॥

ಯಸ್ಮಿನ್ನಹನಿ ಶತ್ರುಘ್ನೋ ವಾಲ್ಮೀಕೇರಾಶ್ರಮಂ ಗತಃ ।
ಉಭೌ ಪ್ರಸೂತೌ ತನಯೌ ತಸ್ಮಿನ್ನೇವಾಹ್ನಿ ಜಾನಕೀ ॥ ೪ ॥

ಸೀತಾಪ್ರಸವಸಂಹೃಷ್ಟಃ ಕ್ರಮೇಣ ರಘುನಂದನಃ ।
ನಿದಾಘಶೇಷೇಣ ನದೀಮುತ್ತತಾರ ಸ ಸೂರ್ಯಜಾಂ ॥ ೫ ॥

ಶಿಬಿರಂ ಸಮುವಸ್ಥಾಪ್ಯ ಯಥಾವದ್ಯಮುನಾತಟೇ ।
ಏಕ ಏವ ಧನುಷ್ಪಾಣಿಃ ಪ್ರವಿವೇಶ ಮಧೋರ್ವನಂ ॥ ೬ ॥

---

೩. ದಾರಿಯಲ್ಲಿ ವಾಲ್ಮೀಕಿಋಷಿಗಳ ಆಶ್ರಮವು ಸಿಕ್ಕಿದ್ದರಿಂದ ಆ ರಾತ್ರಿ ಆ ಮಹರ್ಷಿಗಳ ಆಶ್ರಮದಲ್ಲಿಯೇ ವಿಶ್ರಮಿಸಿಕೊಂಡನು. ಆ ಆಶ್ರಮಕ್ಕೆ ಹೋಗುತ್ತಲೂ ಪರಸ್ಪರ ಕುಶಲಪ್ರಶ್ನೆಗಳೂ ಪೂಜೋಪಚಾರಗಳೂ ಬೆಳೆದುವು.

೪. ಯಾವ ದಿವಸ ಶತ್ರುಘ್ನನು ವಾಲ್ಮೀಕರ ಆಶ್ರಮದಲ್ಲಿ ಮಲಗಿದ್ದನೋ, ಆ ದಿನವೇ ಶ್ರೀಸೀತಾದೇವಿಯು ಎರಡು ಗಂಡುಮಕ್ಕಳನ್ನು ಪ್ರಸವಿಸಿದಳು.

ರಾಮಾಯಣದ ಉತ್ತರಕಾಂಡದಲ್ಲಿಯೂ ಈ ವಿಷಯವನ್ನು ಕುರಿತು ವಾಲ್ಮೀಕಿ ಋಷಿಗಳು ಇಂತು ಹೇಳಿರುವರು :—

ಯಾಮೇವ ರಾತ್ರಿಂ ಶತ್ರುಘ್ನಃ ಪರ್ಣಶಾಲಾಂ ಸಮಾವಿಶತ್ ।
ತಾಮೇವರಾತ್ರಿಂ ಸೀತಾಽಪಿ ಪ್ರಸೂತಾ ದಾರಕದ್ವಯಂ ॥

ಮೇಲೆ ವಿವರಿಸಿದ ಅರ್ಥವನ್ನೊಳಗೊಂಡ ಈ ಶ್ಲೋಕವನ್ನು ಇಲ್ಲಿ ಉದಹರಿಸಿ ವಾಲ್ಮೀಕಿರಾಮಾಯಣದ ಕಥೆಯ ಉತ್ತರಕಾಂಡದ ಕಡೆಗೆ ವಾಚಕರ ಮನಸ್ಸನ್ನೊಯ್ಯಲಾಗಿದೆ.

೫. ತಾನು ಬಂದ ದಿವಸವೇ ಸೀತೆಯು ಪ್ರಸುವಿಸಿದ ವೃತ್ತಾಂತವನ್ನು ಕೇಳಿ ಶತ್ರುಘ್ನನು ಅತಿಯಾಗಿ ಸಂತೋಷಪಡುತ್ತಾ, ಆ ಮಾರನೇದಿನ ತಂಪುಹೊತ್ತಿನಲ್ಲಿ ಋಷಿಗಳೊಡನೆ ಯಮುನಾನದಿಯನ್ನು ದಾಟಿದನು.

೬. ಯಮುನಾನದಿಯನ್ನು ದಾಟಿದೊಡನೆಯೇ ಆ ನದೀತೀರದಲ್ಲೇ ಶಿಬಿರವನ್ನು ನಿರ್ಮಿಸಿ ಅಲ್ಲಿ ಸೈನಿಕರನ್ನೆಲ್ಲಾ ಬಿಟ್ಟು, ಲವಣಾಸುರನು ವಾಸವಾಗಿದ್ದ ಮಧುವನಕ್ಕೆ ಪ್ರವೇಶಮಾಡಿದನು.

ಪ್ರವಿಶ್ಯ ಚ ಯುಧಾ ತತ್ರ ಲವಣಸ್ಯ ನಿವೇಶನಂ ।
ತಸ್ಥೌ ದ್ವಾರಮುಥಾಶ್ರಿತ್ಯ ವೀರೋ ವಿತತ ಕಾರ್ಮುಕಃ ॥ ೭ ॥

ಏತಸ್ಮಿನ್ನೇವ ಕಾಲೇ ತು ಮೃಗಾನ್ಹತ್ವಾ ಸಹಸ್ರಶಃ ।
ಬಹುನಾ ಮೃಗಭಾರೇಣ ಸ ದದರ್ಶ ಮಧೋಃ ಸುತಂ ॥ ೮ ॥

ವೃತ್ತಾಕ್ಷಮುತ್ಕಟಿಂ ಭೀಮಂ ದಂಷ್ಟ್ರೋತ್ಕೃಷ್ಟೋತ್ತರಸ್ಫದಂ ।
ದಂಷ್ಟ್ರಾಕರಾಲವದನಂ ಪಂಕ್ತಿವತ್ಪರುಷಚ್ಛವಿಂ ॥ ೯ ॥

ಸ ತು ದೃಷ್ಟ್ವೈವ ಶತ್ರುಘ್ನಮುವಾಚ ಪರುಷಂ ಬಹು ।
ಏಪ್ರಧಾವತ ದುಷ್ಟಾತ್ಮಾ ಶತ್ರುಘ್ನವಧಕಾಮ್ಯಯಾ ॥ ೧೦ ॥

---

೭. ಮಧುವನಕ್ಕೆ ಹೋದೊಡನೆಯೇ ಶತ್ರುಘ್ನನು ಲವಣಾಸುರನ ಮೇಲೆ ಯುದ್ಧಮಾಡಬೇಕೆಂಬ ಉದ್ದೇಶದಿಂದ ಧನುಸ್ಸನ್ನು ಹಿಡಿದು ಅವನ ಮನೆಯ ಬಾಗಿಲಿನಲ್ಲಿ ಕಾದು ಕುಳಿತನು.

೮. ಶತ್ರುಘ್ನನು ಲವಣಾಸುರನ ಮನೆಯಬಾಗಿಲಿನಲ್ಲಿ ಬಿಲ್ಲನ್ನು ಬಗ್ಗಿಸಿ ಕೊಂಡು ಕುಳಿತ ಸ್ವಲ್ಪ ಹೊತ್ತಿನಲ್ಲಿಯೇ, ಸಾವಿರಾರು ಮೃಗಗಳನ್ನು ಕೊಂದು ಅವು ಗಳನ್ನು ಹೆಗಲಮೇಲೆ ಹೊತ್ತುಕೊಂಡು ಬರುತ್ತಿದ್ದ ಮಧುಪುತ್ರನಾದ ಲವಣಾಸುರನ ಭಯಂಕರಾಕೃತಿಯನ್ನು ಶತ್ರುಘ್ನನು ನೋಡಿದನು.

೯. ಆಗ ಲವಣಾಸುರನ ಕಣ್ಣುಗಳ ಆಲಿಗಳು ಗಿರ್ರನೆ ತಿರುಗುತ್ತಿದ್ದುವು. ಕಪ್ಪಗಿದ್ದ ಅವನ ಮುಖ (ಬಾಯಿ) ದಲ್ಲಿದ್ದ ಹಲ್ಲುಗಳು ನೋಡಿದವರನ್ನು ಭಯ ಗೊಳಿಸುವಂತೆ ಕಾಣುತ್ತಿದ್ದವು.

೧೦. ಈ ಪ್ರಕಾರ ಬಹು ಭಯಂಕರಾಕಾರನಾದ ಲವಣನು ದೂರದಲ್ಲಿ ಬರುತ್ತಿರುವಾಗಲೇ ತನ್ನ ಮನೆಯ ಬಾಗಿಲಿನಲ್ಲಿ ಧನುರ್ಧಾರಿಯಾಗಿ ಕುಳಿತಿದ್ದ ಶತ್ರುಘ್ನನನ್ನು ನೋಡಿದ ಮಾತ್ರದಿಂದಲೇ, ಬೇಗಬೇಗನೆ ಮನೆಯ ಬಾಗಿಲಿಗೆ ಓಡಿ ಬಂದು ಆ ದುಷ್ಟಾತ್ಮನು ಶತ್ರುಘ್ನನನ್ನು ಕೂಡಲೆ ಕೊಂದುಬಿಡಬೇಕೆಂದು ಪ್ರಯತ್ನ ಮಾಡಿದನು.

ತ್ಯಕ್ತ್ವಾ ಮೃಗಸಹಸ್ರಾಣಿ ದ್ರುಮವಿಕ್ಷೇಪತತ್ಪರಃ ।
ದ್ರುಮವೃಷ್ಟಿಂ ಸುಘೋರಾಂ ತಾಂ ಲವಣೇನ ವಿಸರ್ಜಿತಾಂ ॥ ೧೧ ॥

ಚಿಚ್ಛೇದ ಬಾಣೈಃ ಸೌಮಿತ್ರಿಃ ಶತಶೋಽಥ ಸಹಸ್ರಶಃ ।
ಛಿನ್ನೇ ದ್ರುಮಮಹಾವರ್ಷೇ ಲವಣಃ ಶತ್ರುತಾಪನಃ ॥ ೧೨ ॥

ಜಘಾನ ಸುರಶತ್ರುಘ್ನಂ ಶತ್ರುಘ್ನಂ ಮುಷ್ಟಿನಾ ಭೃಶಂ ।
ಮುಷ್ಟಿಪ್ರಹಾರನಿಶ್ಚೇಷ್ಟಂ ಶತ್ರುಘ್ನಂ ಲವಣಸ್ತದಾ ॥ ೧೩ ॥

ನ ಜಗ್ರಾಹ ಚ ತಚ್ಛೂಲಂ ಮೃತ್ಯುಪಾಶವಶಂಗತಃ ।
ಪ್ರವೇಶಯಾಮಾಸ ಗೃಹಂ ಮೃಗಸಂಘಾನನೇಕಶಃ ॥ ೧೪ ॥

---

೧೧. ಈ ರೀತಿ ಆಲೋಚನೆಮಾಡಿದ ಆ ಲವಣನು ತಾನು ಕೊಂದು ಹೊತ್ತುತಂದಿದ್ದ ಮೃಗಗಳ ರಾಶಿಗಳನ್ನು ಒಂದು ಕಡೆ ಬಿಸುಟು, ಒಂದು ದೊಡ್ಡದಾದ ಮರವನ್ನು ಕಿತ್ತು ಅದನ್ನು ಶತ್ರುಘ್ನನ ಮೇಲೆ ಪ್ರಯೋಗಿಸಿ ಅವನನ್ನು ಕೊಂದು ಬಿಡಬೇಕೆಂಬ ಯೋಚನೆಯಿಂದ, ದೊಡ್ಡ ಗೊಡ್ಡ ಮರಗಳನ್ನು ಕಿತ್ತುತಂದು ಶತ್ರುಘ್ನನಮೇಲೆ ಎಸೆದುಬಿಟ್ಟನು.

೧೨. ಈರೀತಿ ತನ್ನಮೇಲೆ ಪ್ರಯೋಗಿಸಿದ (ಎಸೆದುಬಿಟ್ಟ) ನೂರಾರು ಸಾವಿರಾರು ದೊಡ್ಡ ದೊಡ್ಡ ಮರಗಳನ್ನೆಲ್ಲಾ ಶತ್ರುಘ್ನನು ತನ್ನ ಬಾಣಗಳಿಂದ ದಾರಿಯಲ್ಲಿಯೇ ಕತ್ತರಿಸಿಬಿಟ್ಟನು. ಈ ರೀತಿಯಾಗಿ ತಾನು ಶತ್ರುಘ್ನನ ಮೇಲೆ ಎಸೆದ ಮರಗಳೆಲ್ಲವೂ ವ್ಯರ್ಥವಾದುದನ್ನು ನೋಡಿ ಲವಣಾಸುರನಿಗೆ ಬಲು ಸಿಟ್ಟುಬಂದಿತು.

೧೩. ಸಹಿಸಲಾರದ ಸಿಟ್ಟಿನಿಂದ ಕೂಡಿದ ಲವಣನು ಥಟ್ಟನೆ ಶತ್ರುಘ್ನನ ಹತ್ತಿರಕ್ಕೆ ಓಡಿಬಂದು, ಬಲವಾದ ಮುಷ್ಟಿಯಿಂದ ಶತ್ರುಘ್ನನನ್ನು ಹೊಡೆದುಬಿಟ್ಟನು. ಲವಣಾಸುರನ ಮುಷ್ಟಿಪ್ರಹಾರವನ್ನು ತಡೆಯಲಾರದೆ ಆ ಕೂಡಲೆ ಶತ್ರುಘ್ನನು ನಿಶ್ಚೇಷ್ಟಿತನಾಗಿ (ಜ್ಞಾನತಪ್ಪಿ) ನೆಲಕ್ಕೆ ಬಿದ್ದುಬಿಟ್ಟನು.

೧೪. ಅದೇನು ದೈವಮಾಯೆಯೋ ನಾನು ಬೇರೇ ಕಾಣೆ! ಮೃತ್ಯುಪಾಶಕ್ಕೆ ಸಿಕ್ಕಿದ ಆ ಲವಣಾಸುರನಿಗೆ ತನ್ನ ತ್ರಿಶೂಲವನ್ನು ತೆಗೆದುಕೊಂಡು ಶತ್ರುಘ್ನನನ್ನು ಸಂಹರಿಸಬೇಕೆಂಬ ಬುದ್ಧಿಯು ಆಗ ಹೊಳೆಯದೇ ಹೋಯಿತು. ಇದೇ ಈಶ್ವರಚಿತ್ತವೆನಿಸಿಕೊಳ್ಳುವುದು. ತನ್ನ ಮುಷ್ಟಿಯ ಏಟಿನಿಂದ ಕೆಳಕ್ಕೆ ಬಿದ್ದುಹೋದ ಶತ್ರುಘ್ನನನ್ನು ನೋಡಿದೊಡನೆಯೇ ಆ ಲವಣಾಸುರನು ಶತ್ರುಘ್ನನನ್ನು ಸತ್ತನೆಂದೇ

ಏತಸ್ಮಿನ್ನೇವ ಕಾಲೇ ತು ಲಬ್ಧಸಂಜ್ಞಃ ಸ ರಾಘವಃ ।
ವಿತತ್ಯ ಕಾರ್ಮುಕಂ ತಸ್ಥೌ ದ್ವಾರಮಾವೃತ್ಯ ವೇಶ್ಮನಃ ॥ ೧೫ ॥

ತತಃ ಪಾದಪವರ್ಷೇಣ ಚ್ಛಾದಯಂತಂ ನಿಶಾಚರಂ ।
ಚಕಾರ ವಿಮುಖಂ ಬಾಣೈಶ್ಛಿತ್ವಾ ಛಿತ್ವಾ ಮಹೀರುಹಾನ್ ॥ ೧೬ ॥

ರಾಮದತ್ತಂ ತತೋ ಬಾಣಂ ಸಂಧಾಯ ವರಕಾರ್ಮುಕೇ ।
ನಿರ್ಬಿಭೇದ ಮಹಾತೇಜಾ ಲವಣಂ ರಘುನಂದನಃ ॥ ೧೭ ॥

ಸಂಧೀಯಮಾನೇ ಬಾಣೇ ತು ತ್ರಸ್ತಂ ತ್ರಿಭುವನಂ ತದಾ ।
ಆಶ್ವಾಸಯಾಮಾಸ ವಿಭುರ್ಬ್ರಹ್ಮಾ ಕಮಲಸಂಭವಃ ॥ ೧೮ ॥

---

ನಿರ್ಧರಿಸಿ, ತಾನು ನೆಲದಲ್ಲಿ ಬಿಸುಟಿದ್ದ ಸಹಸ್ರಾರು ನಿರ್ಜೀವ ಮೃಗಗಳ ದೇಹಗಳನ್ನು ಪುನಃ ಹೆಗಲಮೇಲೆ ಹೊತ್ತುಕೊಂಡು ತನ್ನ ಮನೆಯೊಳಕ್ಕೆ ಹೊರಟುಹೋದನು.

೧೫. ಲವಣಾಸುರನು ಮನೆಯೊಳಕ್ಕೆ ಹೊರಟುಹೋದೊಡನೆಯೇ ಶತ್ರುಘ್ನ ನಿಗೆ ಸಂಜ್ಞೆಯುಂಟಾಗಿ ಮೇಲಕ್ಕೆದ್ದು ಕುಳಿತನು. ಆ ಲವಣಾಸುರನ ಮನೆಯ ಬಾಗಿಲಿನಲ್ಲಿ ಕುಳಿತಿದ್ದ ಹಾಗೆಯೇ ಆ ಮಹಾನುಭಾವನು ಧನುಸ್ಸನ್ನು ಟಂಕಾರಮಾಡಿ ಬಾಣಗಳನ್ನು ಹೂಡಿ ಲವಣನ ಮೇಲೆ ಪ್ರಯೋಗಿಸಿದನು.

೧೬. ಇದ್ದಕ್ಕಿದ್ದಂತೆ ತನ್ನ ಮೇಲೆ ಬಾಣಪ್ರಯೋಗವಾದುದನ್ನು ನೋಡಿ ಲವಣನು ಆಸ್ಥಳದಲ್ಲಿದ್ದ ದೊಡ್ಡ ದೊಡ್ಡ ವೃಕ್ಷಗಳನ್ನೆಲ್ಲಾ ಕಿತ್ತು ಕಿತ್ತು ಶತ್ರುಘ್ನನ ಮೇಲೆ ಎಸೆಯಲಾರಂಭಿಸಿದನು. ತನ್ನ ಮೇಲೆ ಎಸೆದ ಮರಗಳನ್ನೆಲ್ಲಾ ಶತ್ರುಘ್ನನು ಬಾಣ ಗಳಿಂದ ಚೂರುಚೂರಾಗಿ ಕತ್ತರಿಸಿ, ಪುನಃ ಲವಣಾಸುರನ ಮೇಲೆ ಬಾಣವನ್ನು ಬಿಟ್ಟು ಅವನ ಮುಖ ಕೆಡುವಂತೆ ಮಾಡಿದನು.

೧೭. ಲವಣಾಸುರನ ಮುಖವು ಬಳಲುತ್ತಿರುವುದನ್ನು ನೋಡಿದೊಡನೆಯೇ ಶತ್ರುಘ್ನನು ರಾಮನ ಹಸ್ತದಿಂದ ಬಂದಿದ್ದ ರಾಮನಾಮಾಂಕಿತವಾದ ಬಾಣವನ್ನು ಬಿಲ್ಲಿನಲ್ಲಿ ಹೂಡಿ ಲವಣಾಸುರನ ಮೇಲೆ ಗುರಿಯಿಟ್ಟು ಹೊಡೆದನು. ಆ ಬಾಣವು ತಾಕಿದೊಡನೆಯೇ ಲವಣಾಸುರನ ದೇಹವು ಛಿನ್ನಭಿನ್ನವಾಗಿ ಭೂಮಿಯಮೇಲೆ ಬಿದ್ದುಹೋಯಿತು.

೧೮. ಶತ್ರುಘ್ನನು ಲವಣಾಸುರನ ಮೇಲೆ ರಾಮಬಾಣವನ್ನು ಬಿಟ್ಟ ಸಮಯ ದಲ್ಲಿ ಮೂರು ಲೋಕವೂ ಗಡಗಡನೆ ನಡುಗಿಹೋಯಿತು. ಆಗ ಕಮಲಸಂಭವ ನಾದ ಬ್ರಹ್ಮನು, ಹೆದರಿಹೋದ ಜನರೆಲ್ಲರನ್ನೂ ಸಮಾಧಾನಮಾಡಿದನು.

ತೇನ ಬಾಣಪ್ರಹಾರೇಣ ನಿರ್ಭಿನ್ನಹೃದಯಃ ಕ್ಷಿತೌ ।
ವ್ಯಸುಃ ಪಪಾತ ಮೇದಿನ್ಯಾಂ ಶೈಲೋ ವಜ್ರಾಹತೋ ಯಥಾ ॥ ೧೯ ॥

ತಸ್ಮಿನ್ನಿಪತಿತೇ ಭೂಮೌ ದೈತ್ಯೇ ದೇವಭಯಂಕರೇ ।
ತ್ರೈಲೋಕ್ಯಂ ವಿಗತಾತಂಕಂ ಕ್ಷಣೇನ ಸಮಪದ್ಯತ ॥ ೨೦ ॥

ತಂ ಚ ದೇಶಮಥಾಜಗ್ಮುಃ ಸುರಾಃ ಸ ಬ್ರಹ್ಮಕಾಸ್ತದಾ ।
ಪೂಜಿತಾಸ್ತೇನ ವೀರೇಣ ಶತ್ರುಘ್ನಂ ವಾಕ್ಯಮಬ್ರುವನ್ ॥ ೨೧ ॥

॥ ದೇವಾ ಊಚುಃ ॥

ವರಂ ವರಯ ಶತ್ರುಘ್ನ ಯತ್ತೇ ಮನಸಿ ಕಾಂಕ್ಷಿತಂ ।
ಅಪನೀತಂ ತ್ವಯಾಸ್ಮಾಕಂ ಭಯಂ ಶೂಲವರಾಯುಧಾತ್ ॥ ೨೨ ॥

---

೧೯. ಶತ್ರುಘ್ನನ ಬಾಣದೇಟಿಗೆ ಕತ್ತರಿಸಿ ಚೂರುಚೂರಾಗಿ ಬಿದ್ದ ದೇಹವನ್ನು ನೋಡಿದರೆ, ವಜ್ರಾಯುಧದ ಏಟಿಗೆ ಸಿಕ್ಕಿ ಕತ್ತರಿಸಿ ಬಿದ್ದ ಮಹಾಮಹಾ ಪರ್ವತಗಳೋ ಎಂಬಂತೆ ಕಾಣುತ್ತಿತ್ತು. ಈ ಪ್ರಕಾರವಾಗಿ ಲವಣನ ಪ್ರಾಣವು ಶತ್ರುಘ್ನನ ಬಾಣದೇಟಿನಿಂದ ಹಾರಿಹೋಯಿತು.

೨೦. ದೇವತೆಗಳಿಗೆ ಭಯವನ್ನುಂಟುಮಾಡುತ್ತಿದ್ದ ಆ ದುಷ್ಟ ರಕ್ಕಸನು ಭೂಮಿಗೆ ಬಿದ್ದೊಡನೆಯೇ ಮೂರು ಲೋಕದ ಜನರೂ ಒಂದು ಕ್ಷಣದೊಳಗಾಗಿ ನಿರಾತಂಕರಾಗಿ ಆನಂದಪರವಶರಾದರು.

೨೧. ಲವಣನ ಪ್ರಾಣವು ಹಾರಿಹೋದೊಡನೆಯೇ ಇಂತಹ ಮಹತ್ಕಾರ್ಯವನ್ನು ಮಾಡಿದ ಶತ್ರುಘ್ನನನ್ನು ನೋಡಿ ಹರಸುವುದಕ್ಕಾಗಿ ಬ್ರಹ್ಮನೇ ಮೊದಲಾದ ದೇವತೆಗಳೆಲ್ಲರೂ ಆ ವೀರಶತ್ರುಘ್ನನಿದ್ದ ಸ್ಥಳಕ್ಕೆ ಬಂದು ಅವನಿಗೆ ದರ್ಶನಕೊಟ್ಟರು. ದೇವತೆಗಳನ್ನು ನೋಡಿದ ಮಾತ್ರದಿಂದಲೇ ಶತ್ರುಘ್ನನು ಸಂತೃಪ್ತನಾಗಿ ಸಕಲ ದೇವತೆಗಳಿಗೂ ಅಡ್ಡಬಿದ್ದು ಪೂಜೆಮಾಡಿದನು. ಈ ಪ್ರಕಾರವಾಗಿ ಶತ್ರುಘ್ನನಿಂದ ಪೂಜಿತರಾದ ಆ ಸಕಲ ದೇವತೆಗಳೂ ಸಂತೃಪ್ತರಾಗಿ ಶತ್ರುಘ್ನನನ್ನು ಕುರಿತಿಂತೆಂದರು .

೨೨-೨೩. ಎಲೈ, ಶತ್ರುಭಯಂಕರನಾದ ಶತ್ರುಘ್ನನೇ! ನಿನ್ನಿಂದ ಈ ಲವಣಾಸುರನು ಮೃತಿಹೊಂದಿದೊಡನೆಯೇ ಅವನ ಸ್ವಾಧೀನದಲ್ಲಿದ್ದ ಮಾಹೇಶ್ವರ ಶೂಲವು ಮಹೇಶ್ವರನ ಸಮೀಪಕ್ಕೆ ಆಕಾಶಮಾರ್ಗವಲ್ಲಿ ಹೋಗುತ್ತಿರುವೀ ದೃಶ್ಯವನ್ನು ಕತ್ತೆತ್ತಿ ಮೇಲೆ ನೋಡು. ಈ ಶೂಲದ ಬಲವಿರುವವರಿಗೂ ಈ ಲವಣಾಸುರನು

ತ್ವಯಾ ತು ನಿಹತೇ ತಸ್ಮಿನ್ಲವಣೇ ಪಾಪರಾಕ್ಷಸೇ ।
ಪಶ್ಯ ಶೂಲವರಂ ಯಾಂತಮೇನಂ ಶಾರ್ವಂ ವಿಹಾಯಸಾ ॥ ೨೩ ॥

॥ ಶತ್ರುಘ್ನ ಉವಾಚ ॥

ಅಸ್ಮಿನ್ದೇಶೇ ಕರಿಷ್ಯಾಮಿ ಪುರೀಂ ರಾಮಾಜ್ಞಯಾ ತ್ವಹಂ ।
ಮಾಸೇ ಸಮಾಪ್ಯತಾಂ ಶೀಘ್ರಂ ವರಮೇತತ್ಪ್ರದೀಯತಾಂ ॥ ೨೪ ॥

॥ ದೇವಾ ಊಚುಃ ॥

ನಿಷ್ಪತ್ತಿಂ ಯಾಸ್ಯತೇ ಧೀರ ಸ್ಥಿರಾ ಚೈವ ಭವಿಷ್ಯತಿ ।
ಪುಣ್ಯಾ ಚ ರಮಣೀಯಾ ಚ ಮಧುರಾ ನಾಮತಃ ಶುಭಾ ॥ ೨೫ ॥

---

ಮಾಡಿದ ಲೋಕಹಿಂಸೆಯನ್ನು ನೆನೆಸಿಕೊಂಡರೆ, ಈಗಲೂ ನಮಗೆ ದಿಗಿಲಾಗುವುದಯ್ಯಾ! ಇಂತಹ ದುಷ್ಟನನ್ನು ನೀನು ರಾಮಾನುಗ್ರಹದಿಂದ ಸಂಹರಿಸಿದುದಕ್ಕಾಗಿ ನಿನ್ನ ವಿಷಯದಲ್ಲಿ ನಾವೆಲ್ಲರೂ ತೃಪ್ತರಾಗಿದ್ದೇವೆ. ನಿನ್ನ ಸಾಹಸಕ್ಕೆ ಮೆಚ್ಚಿದ ನಾವೆಲ್ಲರೂ ನಿನಗೆ ನಿನ್ನ ಮನಸ್ಸಿನಲ್ಲಿರುವ ವರವನ್ನು ಕೊಡಬೇಕೆಂದು ನಿಶ್ಚಯಿಸಿದ್ದೇವೆ. ನಿನಗೆ ಬೇಕಾದ ವರವನ್ನು ಕೇಳಿಕೊಳ್ಳೆನಲು, ಶತ್ರುಘ್ನನಿಂತೆಂದನು :—

೨೪. ಮಹನೀಯರಾದೆಲ್ಲೈ ದೇವತೆಗಳಿರಾ! ಶ್ರೀರಾಮನ ಅಪ್ಪಣೆಯಂತೆ ನಾನು ಈ ಸ್ಥಳದಲ್ಲಿ ಒಂದು ನಗರವನ್ನು ನಿರ್ಮಾಣಮಾಡಬೇಕೆಂದು ಆಲೋಚಿಸಿ ಕೊಂಡಿದ್ದೇನೆ. ಈ ನಗರ ನಿರ್ಮಾಣಕಾರ್ಯವು ಒಂದೇ ತಿಂಗಳಲ್ಲಿ ನಿರ್ವಿಘ್ನವಾಗಿ ನೆರವೇರುವಂತೆ ಅನುಗ್ರಹಮಾಡಿದರೆ ನನಗೆ ಅಷ್ಟೇ ಸಾಕೆಂದು ಹೇಳಿದನು.

೨೫. ದೇವತೆಗಳು ಹೇಳುತ್ತಾರೆ:—ಶತ್ರುಘ್ನ! ನೀನು ಈ ಪ್ರದೇಶದಲ್ಲಿ ನಗರವನ್ನು ಕಟ್ಟು. ಮಧುವೆಂಬ ರಾಕ್ಷಸನ ಮಗ ಲವಣನನ್ನು ಸಂಹರಿಸಿ ಲೋಕೋಪಕಾರ ಮಾಡಿರುವುದಕ್ಕಾಗಿ ಆ ಎರಡು ವಿಗ್ರಹ (ಮಧು+ರಾ) ಪದಗಳ ಸಮಾಸಪದ ನಿಷ್ಪತ್ತಿಯಿಂದ ಮಧುರೆ ಎಂಬ ಹೆಸರಾಗುವುದು. ಈ ಹೆಸರು ಪುಣ್ಯಕರವಾಗಿಯೂ, ಮನೋಹರವಾಗಿಯೂ ಇರುವುದರಿಂದ ನೀನು ಕಟ್ಟುವ ಈ ಪಟ್ಟಣಕ್ಕೆ ಮಧುರೆಯೆಂಬ ಹೆಸರೇ ಆಚಂದ್ರಾರ್ಕವಾಗಿ ನಿಲ್ಲಲಿ.

॥ ನಾರಾಯಣ ಉವಾಚ ॥

ಏವಮುಕ್ತ್ವಾ ಸುರಾಃ ಸರ್ವೇ ಜಗ್ಮುರ್ನಾಕಮತಂದ್ರಿತಾಃ ।
ಆಜಗಾಮ ಸ ತಂ ದೇಶಂ ಸೈನ್ಯೇನ ಚ್ಯವನಃ ಸಹ ॥ ೨೬ ॥

ಸಂವರ್ಧಯಿತ್ವಾ ಶತ್ರುಘ್ನಂ ಜಗಾಮಾಶ್ರಮಮಂಜಸಾ ।
ಸರ್ವಂ ರಾಮವಚಶ್ಚಕ್ರೇ ಶತ್ರುಘ್ನೋಽಪಿ ಮಹಾಯಶಾಃ ॥ ೨೭ ॥

ಕೃತ್ವಾ ಪುರೀನಿವೇಶಂ ಚ ಗೃಹಪ್ರಾವೇಶನಂ ತಥಾ ।
ಉಷಿತ್ವಾ ದ್ವಾದಶ ಸಮಾಃ ಸಂಪ್ರಾಪ್ತೇ ಸುರಕರ್ಮಣಿ ॥ ೨೮ ॥

ಜಗಾಮ ಭ್ರಾತರಂ ದ್ರಷ್ಟುಂ ವಾಲ್ಮೀಕೇರಾಶ್ರಮಂ ಪುನಃ ।
ತತ್ರ ಶುಶ್ರಾವ ಧರ್ಮಾತ್ಮಾ ಶುಭಾಂ ರಾಮಕಥಾಂ ಕೃತಾಂ ॥ ೨೯ ॥

---

೨೬. ನಾರಾಯಣನು ಶೈಲೂಷನನ್ನು ಕುರಿತು ಹೇಳುತ್ತಾನೆ:—ಕೇಳಯ್ಯಾ! ಶೈಲೂಷ! ಈ ಪ್ರಕಾರವಾಗಿ ದೇವತೆಗಳು ಹೇಳಿ. ಆನಂದಿಸುತ್ತಾ ಸ್ವರ್ಗಲೋಕಕ್ಕೆ ಪ್ರಯಾಣಮಾಡಿದರು. ಅವರು ಹೊರಟುಹೋದ ಉತ್ತರಕ್ಷಣದಲ್ಲಿಯೇ, ಆ ಸ್ಥಳಕ್ಕೆ ಚ್ಯವನಮಹರ್ಷಿಗಳು ತಮ್ಮ ಬಹು ಬಲವಾದ ಋಷಿಸೈನ್ಯವನ್ನು ಕೂಡಿಸಿಕೊಂಡು ಶತ್ರುಘ್ನನಿದ್ದಲ್ಲಿಗೆ ಒಂದೇ ಉಸಿರಿನಿಂದ ಓಡಿಯೋಡಿ ಬಂದರು

೨೭. ಆ ಋಷಿಗಳ ಸಂತೋಷಕ್ಕೆ ಆಗ ಮಿತಿಯೇ ಇರಲಿಲ್ಲ. ಎಲ್ಲಿ ತಮ್ಮ ಪ್ರಾಣಗಳೆಲ್ಲಾ ಹಾರಿಹೋಗುವುವೋ ಎಂಬುದಾಗಿ ಲವಣಾಸುರನಿಗೆ ಅಂಜಿದ್ದ ಆ ಋಷಿಪ್ರವರರೆಲ್ಲರೂ ಶತ್ರುಘ್ನನ ತಲೆಯ ಮೇಲೆ ಕೈಯಿಟ್ಟು ಆಶೀರ್ವದಿಸಿ, ಅವನ ಉಪಕಾರವನ್ನು ಕೊಂಡಾಡುತ್ತಾ ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು.

೨೮. ಋಷಿಗಳಿಂದಾಶೀರ್ವದಿಸಲ್ಪಟ್ಟ ಶತ್ರುಘ್ನನು, ಈ ಪ್ರಕಾರವಾಗಿ ರಾಮನು ಹೇಳಿದ್ದಂತೆ ಎಲ್ಲ ಕೆಲಸವನ್ನೂ ಚಾಚೂ ತಪ್ಪದೆ ನೆರವೇರಿಸಿದ ಬಳಿಕ ಪಟ್ಟಣ ನಿರ್ಮಾಣದ ಕೆಲಸವನ್ನೆಲ್ಲಾ ಪೂರೈಸಿ, ಅಲ್ಲಿ ಒಂದು ಮನೋಹರವಾದ ಅರಮನೆಯನ್ನೂ ಸಹ ತನ್ನ ವಾಸಕ್ಕಾಗಿ ನಿರ್ಮಿಸಿ, ಶುಭ ಮುಹೂರ್ತದಲ್ಲಿ ಗೃಹ ಪ್ರವೇಶವಿಧಿಯನ್ನಾಚರಿಸಿ ಆ ಅರಮನೆಗೆ ವಾಸಕ್ಕೆ ಬಂದನು. ಆ ಮನೆಗೆ ಹೋದ ಮೇಲೆ ಹನ್ನೆರಡು ವರ್ಷಕಾಲ ಸುಖವಾಗಿ ಅಲ್ಲಿ ವಾಸಮಾಡುತ್ತಿದ್ದ ಆ ಶತ್ರುಘ್ನನು ಸುರಕರ್ಮ (ಯಜ್ಞಯಾಗಾದಿ) ಗಳನ್ನು ಅನಾಲಸ್ಯದಿಂದ ಮಾಡುತ್ತಾ ಕಾಲ ಗಳೆದನು.

೨೯. ಈ ರೀತಿ ಹನ್ನೆರಡು ವರ್ಷ ಕಳೆದು ಹೋದ ಮೇಲೆ ಶತ್ರುಘ್ನನಿಗೆ ರಾಮನನ್ನು ನೋಡಿಕೊಂಡು ಬರಬೇಕೆಂದು ಆಶೆಯಾಯಿತು. ಆ ಕ್ಷಣವೇ ಮಧುರೆ

ವಾಲ್ಮೀಕಿನಾ ಪ್ರಹೃಷ್ಟೇನ ಗೀಯಮಾನಾಂ ಕುಶೀಲವೈಃ ।
ತತ್ರೋಷ್ಯ ರಜನೀಮೇಕಾಂ ರಾಮಂ ದೃಷ್ಟ್ವಾ ತಥೈವ ಚ ॥ ೩೦ ॥

ತತ್ರೋಷ್ಯ ಪಂಚರಾತ್ರಂ ಚ ಭೂಯೋ ರಾಮವಿಸರ್ಜಿತಃ ।
ಮಧುರಾಯಾಂ ಚ ವಸುಧಾಂ ಪಾಲಯಾಮಾಸ ಧರ್ಮವಿತ್ ॥ ೩೧ ॥

ಏವಂವಿಧಃ ಸ ಶತ್ರುಘ್ನೋ ಭರತೋಽಪ್ಯಧಿಕಸ್ತತಃ ।
ಮಾ ತೇನ ವಿಗ್ರಹಂ ಗಚ್ಛ ಭರತೇನ ಮಹಾತ್ಮನಾ ॥ ೩೨ ॥

---

ಯಿಂದ ಪ್ರಯಾಣಮಾಡಿ ದಾರಿಯಲ್ಲಿ ಯಮುನಾತೀರ (ಪ್ರಯಾಗ) ದಲ್ಲಿದ್ದ ವಾಲ್ಮೀಕಿ ಋಷಿಗಳ ಆಶ್ರಮದಲ್ಲಿ ಒಂದು ದಿನ ಉಳಿದುಕೊಂಡನು. ಆಗ ರಾಮನ (ತನ್ನ ಅಣ್ಣನ) ಮಕ್ಕಳಿಬ್ಬರಿಗೂ ವಾಲ್ಮೀಕಿಋಷಿಗಳು ರಾಮಾಯಣ ಕಥೆಯನ್ನು ಪಾಠ ಹೇಳಿಕೊಡುತ್ತಿದ್ದರು. ಆ ಹುಡುಗರಿಬ್ಬರೂ ಮಧುರವಾಗಿ ಹಾಡುತ್ತಿದ್ದ ರಾಮಾಯಣದ ಕಥೆಯನ್ನು ಕೇಳಿ ಶತ್ರುಘ್ನನಿಗೆ ಹಿಡಿಸಲಾರದಷ್ಟು ಆನಂದವಾಯಿತು.

೩೦. ಆ ಮಕ್ಕಳಿಗೆ ರಾಮಾಯಣವನ್ನು ಹೇಳಿಕೊಡುವಾಗ ವಾಲ್ಮೀಕಿಋಷಿಗಳ ಆನಂದಕ್ಕೆ ಪಾರವೇ ಇರಲಿಲ್ಲ. ಆ ಪುಣ್ಯಕರವಾದ ರಾಮಕಥೆಯನ್ನು ಹರ್ಷಾಶ್ರುಗಳಿಂದ ಹಾಡುತ್ತಾ ತಮ್ಮ ಕಂಠದೊಡನೆ ಆ ಮಕ್ಕಳೀರ್ವರ ಸುಖಶಾರೀರ ವಂಶವನ್ನು ಸೇರಿಸಿ ಐಕಕಂಠ್ಯದಿಂದ ರಾಮಾಯಣ ಕಥೆಯನ್ನು ಹಾಡುತ್ತಿದ್ದಾಗ, ಆ ಕುಶಲವರ ಕೋಮಲಕಂಠದಿಂದ ಹೊರಡುತ್ತಿದ್ದ ಮಧುರಗಾನವನ್ನಾಲೈಸುತ್ತಾ ಶತ್ರುಘ್ನನು ಒಂದು ದಿನ ಅವರ ಆಶ್ರಮದಲ್ಲಿಯೇ ವಾಸಮಾಡಿದವನಾಗಿ ಅಲ್ಲಿಂದ ಹೊರಟು ಅಯೋಧ್ಯಾಪಟ್ಟಣಕ್ಕೆ ಪ್ರಯಾಣಮಾಡಿದನು.

೩೧. ಅಯೋಧ್ಯಾಪಟ್ಟಣಕ್ಕೆ ಬಂದು ವಿಹರಿಸುತ್ತಿದ್ದ ರಾಮಚಂದ್ರಮೂರ್ತಿಯನ್ನು ಮನದಣಿಯುವಂತೆ ನೋಡಿದವನಾಗಿ ಆ ಶತ್ರುಘ್ನಮಹಾರಾಜನು ಅಯೋಧ್ಯಾಪಟ್ಟಣದಲ್ಲಿ ಐದು ದಿನಸ ವಾಸವಾಗಿದ್ದನು. ಐದು ದಿವಸವಾದಮೇಲೆ ರಾಮನ ಅಪ್ಪಣೆಯನ್ನು ಪಡೆದು ಶತ್ರುಘ್ನನು ಮಧುರಾಪಟ್ಟಣಕ್ಕೆ ಬಂದು ಬಹು ಧರ್ಮದಿಂದ ರಾಜ್ಯಭಾರಮಾಡುತ್ತಾ ಸುಖದಿಂದಿದ್ದನು.

೩೨. ಶೈಲೂಷ! ಇದುವರಿಗೆ ನಾನು ಹೇಳಿದ ಲವಣಾಸುರಾಂತಕನಾದ ಶತ್ರುಘ್ನನ ಕಥೆಯನ್ನು ನೀನು ಕೇಳಿದೆಯಷ್ಟೆ? ಈಗ ನಿನ್ನೊಡನೆ ಯುದ್ಧಕ್ಕೆ ಬಂದು ಬಿಡಾರಬಿಟ್ಟಿರುವ ಅವನ ಅಣ್ಣ ಭರತನು ತನ್ನ ತಮ್ಮನಿಗಿಂತ ಹೆಚ್ಚು ಪರಾ

**ಸುಗ್ರೀವನೀಲಾಂಗದವಾಯುಪುತ್ರ**
**ಸುಷೇಣಮೈಂದದ್ವಿವಿದಪ್ರಧಾನಾಃ ।**
**ಮಹಾಬಲಾಃ ಪರ್ವತಮಾತ್ರಕಾಯಾಃ**
**ಸುರಾಸುರೈರ್ಯುದ್ಧಗತಾ ಅಜೇಯಾಃ** ॥ ೩೩ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಶೈಲೂಷಂ ಪ್ರತಿ ನಾಡಾಯನವಾಕ್ಯೇಷು ಲವಣವಧೋನಾಮ ಸಪ್ತಚತ್ವಾರಿಂಶದುತ್ತರ ದ್ವಿಶತತಮೋಽಧ್ಯಾಯಃ.**

---

ಕ್ರಮಶಾಲಿಯೆಂದು ತಿಳಿದುಕೋ. ಅಂತಹ ಮಹಾತ್ಮನಾದ, ಮಹಾಪರಾಕ್ರಮಶಾಲಿಯಾದ ಭರತನ ಕೂಡ ಯುದ್ಧಕ್ಕೆ ಹೋಗುವುದೆಂಬುದು, ನಿನಗೆ ಸುತರಾಂ ಯೋಗ್ಯವಲ್ಲ. ಈ ನಾಲ್ಕು ಮಂದಿ ರಾಘವರೂ, (ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಘ್ನ) ಅಜೇಯರೆಂದು ಖಂಡಿತವಾಗಿ ತಿಳಿದುಕೋ. ಇವರೆಲ್ಲರಿಗೂ ದೇವಾಂಶಸಂಭೂತರಾದ ವಾನರರ (ಕಪಿಗಳ) ದೊಡ್ಡ ಸಹಾಯವು ಬೇರೆ ಇದೆಯಯ್ಯಾ!

೩೩. ಆ ಅಸಹಾಯಶೂರರಾದ ವಾನರರೇನು ಸಾಮಾನ್ಯರೆಂದು ಭಾವಿಸಬೇಡ. ಅವರಲ್ಲಿ ಹಲವರ ಹೆಸರನ್ನು ಹೇಳುತ್ತೇನೆ. ಸ್ವಲ್ಪ ತಾಳ್ಮೆಯಿಂದ ಕೇಳು. ಸುಗ್ರೀವ, ನೀಲ, ಅಂಗದ, ಆಂಜನೇಯ, ಸುಷೇಣ, ಮೈಂದ, ದ್ವಿವಿದ, ಹೀಗೆಯೇ ಎಷ್ಟೋ ಹೆಸರುಗಳಿವೆ. ಇವರೆಲ್ಲರೂ ಮಹಾಬಲಿಷ್ಠರು. ದೊಡ್ಡ ದೊಡ್ಡ ಬೆಟ್ಟಗಳಂತೆ ಇವರ ದೇಹಗಳಿವೆ. ಸುರಾಸುರರೆಲ್ಲರೂ ಸೇರಿ ಇವರ ಮೇಲೆ ಯುದ್ಧಕ್ಕೆ ಬಂದಾಗ್ಯೂ ಇವರು ಅವರಿಗೆ ದಕ್ಕುವವರಲ್ಲವೆಂದು ತಿಳಿಯಯ್ಯಾ! ಶೈಲೂಷ ಮಹಾರಾಜ! ಎಂಬದಾಗಿ ನಾಡಾಯನರು ಹೇಳಿದರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಮಥಖಂಡದ ಮಾರ್ಕಂಡೇಯ ವಜ್ರಸಂವಾದರೂಪವಾದ ಶೈಲೂಷನನ್ನು ಕುರಿತು ನಾಡಾಯನರು ಹೇಳುವ ಮಾತುಗಳಲ್ಲಿ ಲವಣಾಸುರವಧೆಯೆಂಬ ಹೆಸರಿನ ಇನ್ನೂರನಲವತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ ಅಷ್ಟಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯ

॥ ಶೈಲೂಷ ಉವಾಚ ॥

ಪುಲಹಸ್ಯ ಪ್ರಜಾಸರ್ಗಂ ಶ್ರೋತುಮಿಚ್ಛಾಮಿ ತತ್ವತಃ ।
ಯಸ್ಯ ವಂಶೇ ಸಮುತ್ಪನ್ನಾ ವಾನರಾ ಬಲದರ್ಪಿತಾಃ ॥ ೧ ॥

॥ ನಾಡಾಯನ ಉವಾಚ ॥

ಮೃಗಾ ಚ ಮೃಗಮಂದಾ ಚ ಹರಿಸ್ತಾಮ್ರಾ ತಥಾ ಇರಾ ।
ಭೂತಾ ಚ ಕಪಿಶಾ ದಂಷ್ಟ್ರೀ ಸುರಸಾ ಸರಮಾ ತಥಾ ॥ ೨ ॥

---

### ಇನ್ನೂರನಲವತ್ತೆಂಟನೆಯ ಅಧ್ಯಾಯ.

೧. ಶೈಲೂಷನು, ಕಥೆಯ ರುಚಿಯು ಕಿವಿಗೆ ಹತ್ತುತ್ತಾ ಹತ್ತುತ್ತಾ ನಾಡಾಯನರನ್ನು ಕುರಿತು ಮತ್ತು ಪ್ರಶ್ನೆಮಾಡಿದನದೇನೆಂದರೆ:—ಅಯ್ಯಾ! ಋಷಿ ಪ್ರವರ! ಮಹಾವೀರರಾದ ಕಪಿಗಳೆಂದು ಈಗ ನೀನು ನನ್ನೊಡನೆ ಹೇಳಿದೆಯಷ್ಟೆ? ಅಂತಹ ಕಪಿಗಳು ಹೇಗೆ ಉತ್ಪನ್ನರಾದರು? ಇಂತಹ ಕಪಿಗಳ ಸೃಷ್ಟಿಯನ್ನು ಪುಲಹ ಬ್ರಹ್ಮನು ಅದೆಂತು ನಿರ್ಮಿಸಿದನು? ಈ ಸಂಗತಿಯನ್ನು ನಿನ್ನ ಬಾಯಿಂದಲೇ ಕೇಳಬೇಕೆಂದು ಆಶೆಹುಟ್ಟಿದೆ; ಹೇಳುವಿಯಾ?

೨-೩. ನಾಡಾಯನರು ಬೇಸರವಿಲ್ಲದೆ ಆ ಮಾತಿಗೆ ಉತ್ತರ ಹೇಳುತ್ತಾರೆ; ಕೇಳು, ಶೈಲೂಷ! ಕಶ್ಯಪಬ್ರಹ್ಮನು ತನ್ನ ಕೋಪದದೆಶೆಯಿಂದ ಹತ್ತು ಜನ ಹೆಣ್ಣು ಮಕ್ಕಳನ್ನು ನಿರ್ಮಾಣಮಾಡಿದನು. ಅವರುಗಳ ಹೆಸರುಗಳನ್ನೀಗ ಹೇಳುತ್ತೇನೆ. ಮೃಗಾ, ಮೃಗಮಂದಾ, ಹರಿ, ತಾಮ್ರಾ, ಇರಾ, ಭೂತಾ, ಕಪಿಶಾ, ದಂಷ್ಟ್ರಿ,

ಕಶ್ಯಪೋ ಜನಯಾಮಾಸ ಕ್ರೋಧಾತ್ತು ದಶ ಕನ್ಯಕಾಃ ।
ಕಶ್ಯಪೇನ ಚ ತಾ ದತ್ತಾಃ ಪುಲಹಾಯ ಮಹಾತ್ಮನೇ ॥ ೩ ॥

ಪ್ರಜಾಸ್ತಾಸಾಂ ಪ್ರವಕ್ಷ್ಯಾಮಿ ಸರ್ವಾಸಾಂ ತ್ವಂ ನಿಬೋಧ ಮೇ ।
ಮೃಗಾಯಾಸ್ತು ಮೃಗಾ ಜಾತಾ ಹರಿಣ್ಯೈಣಾಃ ಶಶಾಸ್ತಥಾ ॥ ೪ ॥

ರುರವಃ ಪೃಷತಶ್ಚೈವ ನ್ಯಂಕವಃ ಶಶಕಾಸ್ತಥಾ ।
ಸೃಮರಾ ಮೃಗಮಂದಾಯಾ ಗವಯಾ ಮಹಿಷಾಸ್ತಥಾ ॥ ೫ ॥

ಚಮರೋಷ್ಟ್ರವರಾಹಾಶ್ಚ ಖಡ್ಗಾ ಗೌರಖರಾಸ್ತಥಾ ।
ಹರ್ಯಾಶ್ಚ ವಾನರಾ ಜಾತಾ ಗೋಲಾಂಗೂಲಾಃ ಸಕಿನ್ನರಾಃ ॥ ೬ ॥

---

ಸುರಸಾ, ಸರಮಾ, ಈ ಹತ್ತು ಮಂದಿ ಹೆಣ್ಣು ಮಕ್ಕಳನ್ನೂ ಪುಲಹಬ್ರಹ್ಮನಿಗೆ ಮದುವೆಮಾಡಿಕೊಟ್ಟನು.

೪. ಆ ಹತ್ತು ಜನ ಹೆಂಡತಿಯರಲ್ಲೂ ಪುಲಹರು ಪಡೆದ ಪ್ರಜಾವರ್ಗದ ಹೆಸರುಗಳನ್ನೀಗ ಹೇಳಲಾಗುವುದು. ಹರಿಣ, ಏಣ ಮುಂತಾದ ಪ್ರಾಣಿಗಳು. (ಮೊಲ, ಜಿಂಕೆ ಮುಂತಾದ ಬೇಟೆಯಾಡಲರ್ಹವಾದ ಮೃಗಗಳು.)

೫. ರುರುಪ್ರಾಣಿಗಳೆಂದರೆ ಕೃಷ್ಣಮೃಗಗಳು :—ಕರೀಗಂಡುಜಿಂಕೆ, ಕರೀ ಮಚ್ಚೆಗಳುಳ್ಳ ದುಪ್ಪಿ, ಪೃಷತವೆಂದರೆ ಮೈಯೆಲ್ಲಾ ಚುಕ್ಕಿ ಚುಕ್ಕಿಯಾಗಿರುವ ಹುಲ್ಲೀಕರು, ನ್ಯಂಕುವೆಂದರೆ ತಲೆ ಬಗ್ಗಿಸಿಕೊಂಡೇ ನಡೆಯುವ ಗಂಡು ಜಿಂಕೆ, ಮೊಲ ಗಳು, ನರಿಗಳು, ಚಮರೀ (ಚೌರೀ) ಮೃಗಗಳು; ಎಮ್ಮೆಯೇ ಮುಂತಾದ ಪಶು ಜಾತಿಯ ಮೃಗಗಳು. (ಇವು ಭೂಮಿಯಲ್ಲಿ ಮನುಷ್ಯ ಜಾತಿಯಂತೆಯೇ ಕರಚರಣಾ ದ್ಯವಯವಗಳನ್ನು ಧರಿಸಿ ತೋರುತ್ತಿರುವುದಾದರೂ, ಇವುಗಳಿಗೆ ಮನುಷ್ಯನಂತಹ ಬುದ್ಧಿಶಕ್ತಿಯು ಸುತರಾಂ ಇಲ್ಲ. ಆಹಾರ, ನಿದ್ರೆ, ಭಯ, ಮೈಥುನಾದಿಗಳು ಮನುಷ್ಯ ರಂತೆಯೇ ಇವುಗಳಿಗೂ ಉಂಟು, ಆದರೆ ಬುದ್ಧಿ ಮಾತ್ರ ಮನುಷ್ಯನಿಗೆ ಹೆಚ್ಚಾಗಿರುವುದ ರಿಂದ ಈ ಮನುಷ್ಯನು ಬುದ್ಧಿಜೀವಿಯೆನಿಸಿಕೊಂಡಿರುವನು. ಬುದ್ಧಿಜೀವಿಗಳಲ್ಲಿ ಹೆಣ್ಣುಗಂಡೆಂದು ಎರಡು ವಿಧ. ಈ ಎರಡರಲ್ಲಿ ಗಂಡಸು ಶ್ರೇಷ್ಠನೆಂದೂ, ಆ ಆ ಗಂಡಸರಲ್ಲಿಯೂ ಹೆಚ್ಚು ತಿಳಿವಳಿಕೆ (ಬುದ್ಧಿ) ಯುಳ್ಳವರು ಶ್ರೇಷ್ಠರೆಂದೂ ತಿಳಿಯಬೇಕು.)

೬. ಒಂಟೆ, ಹಂದಿಗಳು, ಖಡ್ಗಮೃಗಗಳು, ಕತ್ತೆಗಳು, ಕುದುರೆಗಳು, ಕಪಿ ಗಳು, ಕೊಂಡಮುಸುಕ, ಸಿಂಗಳೀಕಗಳೇ ಮುಂತಾದ ವಿವಿಧ ಕಪಿಭೇದಗಳು.

ಮಂಡೂಕಾ ನಕುಲಾಶ್ಚೈವ ಯೇ ಚಾಪ್ಯನ್ಯೇ ಬಿಲೇಶಯಾಃ ।
ಪಂಚ ಕನ್ಯಾಶ್ಚ ತಾಮ್ರಾಯಾಃ ಪತ್ನ್ಯಸ್ತಾ ವರುಣಸ್ಯ ಚ ॥ ೭ ॥

ಪ್ರಾದಾದ್ಧರ್ಮಭೃತಾಂ ಶ್ರೇಷ್ಠಃ ಪುಲಹಸ್ತಪಸಾಂ ನಿಧಿಃ ।
ಶ್ಯೇನೀ ಭಾಸೀ ತಥಾ ಕ್ರೌಂಚೀ ಧೃತರಾಷ್ಟ್ರೀ ಶುಕೀ ತಥಾ ॥ ೮ ॥

ಶ್ಯೇನೀ ತು ಜನಯಾಮಾಸ ಪುತ್ರಂ ಸಂಪಾತಿನಂ ತಥಾ ।
ಜಟಾಯುಷಂ ಚ ರಾಜಾನಂ ಗೃಧ್ರಾಣಾಂ ಬಲದರ್ಪಿತಂ ॥ ೯ ॥

ಸಂಪಾತೀ ಜನಯಾಮಾಸ ಶ್ಯೇನಗೃಧ್ರವಟಾಂ ಸ್ತಥಾ ।
ಭಾಸೀಪುತ್ರಾಃ ಸ್ಮೃತಾ ಭಾಣಾಃ ಕ್ರೌಂಚಾಃ ಕ್ರೌಂಚೀಸುತಾಃ ಸ್ಮೃತಾಃ ॥

ಧೃತರಾಷ್ಟ್ರೀಸುತಾ ಹಂಸಾ ಧಾರ್ತರಾಷ್ಟ್ರಾಸ್ತಥೈವ ಚ ।
ಚಕ್ರವಾಕಮುಖಾಶ್ಚಾನ್ಯೇ ತಥಾ ಯೇ ಜಲಚಾರಿಣಃ ॥ ೧೧ ॥

---

೭. ಕಪ್ಪೆಗಳು, ಮುಂಗಸಿಗಳೇ ಮುಂತಾದ ಬಿಲದಲ್ಲೇ ಹೊಕ್ಕಿಕೊಂಡು ವಾಸಮಾಡುವ ಪ್ರಾಣಿಗಳು. ಈ ಪ್ರಕಾರವಾಗಿ ಪುಲಹರ ಹತ್ತು ಮಂದಿ ಪತ್ನಿಯರಲ್ಲೂ ಮೇಲೆ ಬರೆದ ಸಂತತಿಯುಂಟಾದ ಬಳಿಕ, ಆ ತಪೋನಿಧಿಯಾದ ಧರ್ಮಾತ್ಮರಲ್ಲಿ ಶ್ರೇಷ್ಠನಾದ ಪುಲಹನು ತಾಮ್ರೆಯೆಂಬ ಪತ್ನಿಯಲ್ಲಿ ಹುಟ್ಟಿದ ತನ್ನ ಐದು ಮಂದಿ ಹೆಣ್ಣು ಮಕ್ಕಳನ್ನೂ ವರುಣನಿಗೆ ಲಗ್ನಮಾಡಿಕೊಟ್ಟನು. ವರುಣನ ಆ ಹೆಂಪತಿಯರ ಹೆಸರುಗಳನ್ನೀಗ ಹೇಳುವೆನು.

೮. ಶ್ಯೇನೀ, ಭಾಸೀ, ಕ್ರೌಂಚೀ, ಧೃತರಾಷ್ಟ್ರೀ, ಶುಕೀ, ಈ ಐವರೇ ವರುಣನ ಹೆಂಡತಿಯರು. ಇವರುಗಳ ಹೊಟ್ಟೆಯಲ್ಲಿ ಹುಟ್ಟಿದ ಸಂತತಿಯನ್ನೀಗ ಹೇಳುವೆನು.

೯. ಶ್ಯೇನಿಯೆಂಬುವಳ ಹೊಟ್ಟೆಯಲ್ಲಿ ಸಂಪಾತಿ, ಜಟಾಯುಗಳೆಂಬ ಇಬ್ಬರು ಗೃಧ್ರರಾಜರು (ಹದ್ದುಗಳಿಗೆ ಧೊರೆ) ಹುಟ್ಟಿದರು. ಇವರಿಬ್ಬರಲ್ಲಿ ಜಟಾಯುವೇ ಬಹಳ ಪ್ರಬಲನಾದ ರಾಜನಾಗಿ ಮಹಾಬಲಶಾಲಿಯೆನಿಸಿಕೊಂಡಿದ್ದನು.

೧೦. ಸಂಪಾತಿಗೆ ಮೂರು ಮಂದಿ ಮಕ್ಕಳಿದ್ದರು. ಶ್ಯೇನ, ಗೃಧ್ರ, ವಟರೆಂಬುದಾಗಿ ಅವರಿಗೆ ಹೆಸರಾಯಿತು. ಭಾಸೀಪುತ್ರರು ಭಾಣರೆನಿಸಿಕೊಂಡರು. ಕ್ರೌಂಚಿಯ ಮಕ್ಕಳು ಕ್ರೌಂಚ (ಪಕ್ಷಿ) ಗಳೆಂದು ಎನಿಸಿಕೊಂಡರು.

೧೧. ಧೃತರಾಷ್ಟ್ರೀಯ ಮಕ್ಕಳಿಗೆ ಹಂಸರೆಂದೂ, ಧಾರ್ತರಾಷ್ಟ್ರರೆಂದೂ ಹೆಸರುಂಟಾಯಿತು. ಮತ್ತು ಅದೇ ಕ್ರೌಂಚಿಯೇ ಚಕ್ರವಾಕವೇ ಮುಂತಾದ ವಿವಿಧಪಕ್ಷಿಸಮೂಹವನ್ನೂ, ಜಲಚರ ಪ್ರಾಣಿಗಳನ್ನೂ ಪಡೆದಳು.

ಶುಕೀಪುತ್ರಾಃ ಶುಕಾ ಜ್ಞೇಯಾಃ ಪಕ್ಷಿಣಶ್ಚಾಪಿ ಕೀರ್ತಿತಾ ।
ಕಶ್ಯಪಸ್ಯ ತು ಯಾ ಪತ್ನೀ ಇರಾ ನಾಮ ಪ್ರಕೀರ್ತಿತಾಃ ॥ ೧೨ ॥

ಕುಂಜರಂ ಜನಯಾಮಾಸ ಸುರಕಾರ್ಯೋಪ್ಯತಂ ಸದಾ ।
ಭೂತಾಪುತ್ರಾಸ್ತಥಾ ಭೂತಾ ಮಹಾದೇವಮನುವ್ರತಾಃ ॥ ೧೩ ॥

ಉಪವೀರೋಲೂಖಲಿಕಾ ಆಸ್ಯಕರ್ಣಾ ಕುಷಂಡಿಕಾ ।
ಪಾಂಸವಃ ಪಾಣಿಪತ್ರಾಶ್ಚ ಚೈತನ್ಯಾನಿ ಪುನಸ್ತಥಾ ॥ ೧೪ ॥

ಸೂಚೀಮುಖಾಃ ಶೋಷಣಿಕಾಃ ಕುಲಾನ್ಯೇತಾನಿ ಷೋಡಶ ।
ಕುಲೇಷ್ವೇತೇಷು ಜಾಯಂತೇ ನಾನಾಕಾರವಿಚೇಷ್ಟಿತಾಃ ॥ ೧೫ ॥

ನಿಷ್ಕುಟೇಷು ಪ್ರತೋಲೀಷು ಚತ್ವರೇಷು ಗುಹಾಸು ಚ ।
ತೇಷಾಂ ಪ್ರಾದಾತ್ತದಾ ಸ್ಥಾನಮಂತರ್ಧಾನಂ ಪ್ರತಾಪಿತಾಃ ॥ ೧೬ ॥

---

೧೨. ಶುಕಿಯ ಮಕ್ಕಳೇ ಶುಕ (ಗಿಣಿ) ಪಕ್ಷಿಗಳು. ಇಷ್ಟು ಹೊತ್ತು ಹೇಳಿದವರೆಲ್ಲರೂ ಪಕ್ಷಿಜಾತಿಗೆ ಸೇರಿದ ಪ್ರಾಣಿಗಳೆಂದು ತಿಳಿದುಕೊಳ್ಳಬೇಕು. ಕಶ್ಯಪರಿಗೆ ಇರೆಯೆಂಬ ಇನ್ನೊಬ್ಬಳು ಹೆಂಡತಿಯಿದ್ದಳು.

೧೩. ಆ ಇರಾದೇವಿಯು ದೇವತಾಕಾರ್ಯಕ್ಕೋಸ್ಕರ ಕುಂಜರ (ಆನೆ) ವನ್ನು ಹೆತ್ತಳು. ಬಳಿಕ ಭೂತೆಯ ಹೊಟ್ಟೆಯಲ್ಲಿ ಭೂತಗಳು ಉತ್ಪತ್ತಿಯಾಗಿ, ಆ ಭೂತಗಳೆಲ್ಲವೂ ಈಶ್ವರನನ್ನನುಸರಿಸಿಕೊಂಡು ಅಲ್ಲಿಯೇ ವಾಸಮಾಡಿಕೊಂಡಿದ್ದುವು.

೧೪. ಈ ಭೂತಗಳು ಹದಿನಾರು ಕುಲಕ್ಕೆ ಸೇರಿದವುಗಳಾಗಿವೆ. ಆ ಹದಿನಾರು ಕುಲಗಳ ಹೆಸರುಗಳನ್ನೀಗ ವಿವರಿಸುತ್ತೇನೆ. ಉಪವೀರಭೂತರು, ಉಲೂಬರು, ಆಸ್ಯಕರ್ಣರು, ಕುಷಂಡಿಕರು, ಪ್ರಾಂಸುಗಳು, ಪಾಣಿಪಾತರು, ಚೈತನ್ಯರು.

೧೫. ಸೂಚೀಮುಖರು, ಶೋಷಣಿಕರು, ಈ ವಿಧವಾಗಿ ಕವಲೊಡೆದ ಹದಿನಾರು ಭೂತಕುಲದಲ್ಲಿ ನಾನಾ ಆಕಾರವಿಕಾರ ಚೇಷ್ಟೆಗಳುಳ್ಳ ಭೂತಗಳು ಹುಟ್ಟುತ್ತವೆ.

೧೬. ಈ ಭೂತಗಳು ಯಾರೂ ವಾಸವಾಗಿಲ್ಲದ ಮನೆಗಳಲ್ಲಿಯೂ, ಊರೊಳಗಿನ ದೊಡ್ಡ ದೊಡ್ಡ ದಾರಿಗಳಲ್ಲಿಯೂ, ನಾಲ್ಕು ದಾರಿ ಸೇರುವ ಸ್ಥಳಗಳಲ್ಲಿಯೂ ಯಾರ ಕಣ್ಣಿಗೂ ಕಾಣಿಸಿಕೊಳ್ಳದೆ ಸಂಚಾರಮಾಡುತ್ತಿರುತ್ತವೆ.

**ಅಣಿಮಾ ಲಘಿಮಾ ಪ್ರಾಪ್ತಿರ್ಯತ್ರ ಕಾಮಾವಸಾಯಿತಾ ।**
**ದಂಷ್ಟ್ರೀಪುತ್ರಾಸ್ತಥಾ ಲೋಕೇ ದಂಷ್ಟ್ರಿಣೋ ಯೇ ಪ್ರಕೀರ್ತಿತಾಃ ॥**

**ಸರಮಾಯಾಸ್ತಥಾ ಸರ್ಪಾಃ ಕೀಟಜಾತ್ಯಶ್ಚ ಸರ್ವಶಃ ।**
**ಶ್ಯಾಮಶ್ಚ ಧವಲಶ್ಚೈವ ಸಾರಮೇಯೌ ತಥಾ ಶುನೌ. ॥ ೧೮ ॥**

**ಯಮಸ್ಯಾನುಚರೌ ತೌ ಚ ಮಹಾಬಲಪರಾಕ್ರಮೌ ।**
**ಇತಿ ಕ್ರೋಧಾದ್ದುಹಿತ್ರೃಣಾಂ ಪ್ರಜಾತಿಃ ಕೀರ್ತಿತಾ ಮಯಾ ।೧೯ ॥**

---

೧೭. ಈ ಭೂತಗಳಿಗೆ ನಾಲ್ಕು ವಿಧವಾದ ಮಹಿಮಾಶಕ್ತಿಯುಂಟು. ಇವು ಎಷ್ಟು ಸಣ್ಣ (ಸೊಳ್ಳೆಗಳಿಗಿಂತ ಚಿಕ್ಕ) ರೂಪವನ್ನಾದರೂ ಧರಿಸಬಲ್ಲುವು. ಬೆಟ್ಟಕ್ಕಿಂತಲೂ ದಪ್ಪದೇಹವನ್ನಾದರೂ ಧರಿಸಬಲ್ಲುವು. ಎಂತಹ ಅಸಾಧ್ಯವಸ್ತುಗಳನ್ನಾದರೂ ತಂದುಕೊಡಬಲ್ಲುವು. ಇವುಗಳ ಕಾಮರೂಪಕ್ಕೆ ತುದಿಮೊದಲೇ ಇಲ್ಲ. (ಅಲ್ಲಾವುದೀನನ ಅದ್ಭುತದೀಪಸ್ತಂಭದ ಕಥೆಯನ್ನು ಜ್ಞಾಪಿಸಿಕೊಳ್ಳಿರಿ. ಮತ್ತು ಬಾಗದಾದಿನ ನಲವತ್ತು ಜನ ಕಳ್ಳರ ಕಥೆಯನ್ನೂ, ಇನ್ನೂ ಭೂತಗಳ ಸಂಬಂಧವಾದ ಅನೇಕ ಕಥೆಗಳನ್ನು ನೀವೆಲ್ಲರೂ ಕೇಳಿಯೇ ಇರುವಿರಷ್ಟೆ! ಇವೆಲ್ಲವೂ ವಿನೋದದ ಕಥೆಗಳೆಂದು ಭಾವಿಸದೆ, ಇದು ನಿಜವಾಗಿಯೂ ಪ್ರಾಚೀನಕಾಲದಿಂದ ನಡೆಯುತ್ತಿರುವ ಪ್ರಮಾಣಭೂತವಾದ ಸಂಗತಿಗಳೆಂದು ಈ ಪುರಾಣದಿಂದಲಾದರೂ ಸರ್ವರೂ ತಿಳಿದುಕೊಳ್ಳಲಿ.)

ಈ ಭೂತಗಳನ್ನಾವನು ತನ್ನ ತಪಶ್ಶಕ್ತಿಯಿಂದ ಸ್ವಾಧೀನಮಾಡಿಕೊಳ್ಳುವನೋ ಅಂತಹವನ ಸಕಲ ಕಾಮನೆಗಳೂ ಸಿದ್ಧಿಯಾಗುವುವು.

ಇನ್ನು ದಂಷ್ಟ್ರಿಯ ಕಥೆಯನ್ನು ಹೇಳೋಣ. ದಂಷ್ಟ್ರಿಯೆಂಬುವಳ ಹೊಟ್ಟೆಯಲ್ಲಿ ಹುಟ್ಟಿದವರೆಲ್ಲರೂ ದಂಷ್ಟ್ರ (ಕೊಂಬು, ಕೋರೆಹಲ್ಲು, ಇತ್ಯಾದಿ) ಗಳುಳ್ಳವರೆಂದೆನಿಸಿಕೊಂಡರು.

೧೮. ಈ ಸರಮೆಯೆಂಬುವಳ ಹೊಟ್ಟೆಯಲ್ಲಿ ಹಾವುಗಳೂ, ಚೇಳುಗಳೇ ಮುಂತಾದ ವಿಷಜಂತುಗಳು ಉತ್ಪತ್ತಿಯಾದುವು. ಮತ್ತು ಅದೇ ಸರಮೆಯು ಎರಡು ನಾಯಿಗಳನ್ನು ಹೆತ್ತಳು. ಅದರಲ್ಲೊಂದು ಕರಿಯದು, ಒಂದು ಬಿಳಿಯದು.

೧೯. ಈ ಕಪ್ಪು, ಬಿಳೀ, ನಾಯಿಗಳೆರಡೂ ಮಹಾದೇಹವೂ, ಮಹಾಪರಾಕ್ರಮವೂ, ಉಳ್ಳವುಗಳಾಗಿ ಯಮನ ಮನೆಯ ಬಾಗಿಲನ್ನು ಕಾದುಕೊಂಡು ನಿಂತವು.

ಟಿಪ್ಪಣಿ: ಈ ಎರಡು ನಾಯಿಗಳ ಕಥೆಯನ್ನು ಎಲ್ಲರೂ ಅವಶ್ಯವಾಗಿ ತಿಳಿದಿರಬೇಕಾದುದು, ಅತ್ಯಗತ್ಯವಾದ್ದರಿಂದ ಅದನ್ನು ಶಾಸ್ತ್ರೀಯವಾಗಿ ಇಲ್ಲಿ ಬರೆಯುತ್ತೇನೆ.

ಶ್ವಾನೌದ್ವೌ ಶ್ಯಾಮ ಶಬಳೌ ವೈವಸ್ವತಕುಲೋದ್ಭವೌ ।
ತಾಭ್ಯಾಂ ಬಲಿಂ ಪ್ರದಾಸ್ಯಾಮಿ ಸ್ಯಾತಾಮೇತಾವಹಿಂಸಕೌ ॥

ಇದರ ಅರ್ಥ ॥ ಯಮನ ಮನೆಯ ಬಾಗಿಲಿನಲ್ಲಿ ಎರಡು ವೈವಸ್ವತ ವಂಶದಲ್ಲಿ ಹುಟ್ಟಿದ ಬಿಳೀನಾಯಿ, ಕಪ್ಪುನಾಯಿಗಳು ನಿಂತಿರುವುವು. ಮನುಷ್ಯ ಜನ್ಮದಲ್ಲಿ ಹುಟ್ಟಿರುವ ನಾನು ಪ್ರತಿದಿನವೂ ಆ ನಾಯಿಗಳ ಪ್ರೀತಿಗಾಗಿ ಅನ್ನ (ಬಲಿಹರಣ) ವನ್ನು ಹಾಕುತ್ತೇನೆ. ಆ ಯಮದ್ವಾರಪಾಲಕರಾದ ಆ ನಾಯಿಗಳು ನಾನು ಸ್ವರ್ಗಕ್ಕೆ ಹೋಗುವಾಗ ದಾರಿಯಲ್ಲಿ ನನ್ನನ್ನು ಕಚ್ಚದೆ ಸುಮ್ಮನಿರಲಿ. ಇದು ವೈಶ್ವದೇವ ಕಾಲದಲ್ಲಿ ಹಾಕುವ ಬಲಿಹರಣ ಮಂತ್ರ ಅಥವಾ ಶ್ವಾನಬಲಿಯು.

ಈ ವೈಶ್ವದೇವವು ಪಂಚಮಹಾಯಜ್ಞಗಳಲ್ಲೊಂದು. ಇದನ್ನು ಪ್ರತಿಯೊಬ್ಬ ಗೃಹಸ್ಥನೂ (ಮದುವೆಯಾದವನು ಅಥವಾ ಕುಟುಂಬಿ) ಪ್ರತಿದಿನವೂ ಅತ್ಯವಶ್ಯಕವಾಗಿ ಮಾಡಲೇಬೇಕೆಂದು ವಿಧಿಯಿದೆ. ಈಗ ಈ ಪಂಚಯಜ್ಞಗಳ ಹೆಸರನ್ನೇ ಅನೇಕರು ಕೇಳಿಲ್ಲವಾದ್ದರಿಂದ ಅವರಿಗೋಸ್ಕರ ಇಲ್ಲಿ ಆ ವಿಚಾರವನ್ನು ಬರೆಯಬೇಕಾದುದು ಅತ್ಯವಶ್ಯಕವೆಂದು ತೋರಿದ್ದರಿಂದ ಇಲ್ಲಿ ಸೂಕ್ಷ್ಮವಾಗಿ ಬರೆಯುತ್ತೇನೆ.

ದೇವತೆಗಳು, ಋಷಿಗಳು, ಪಿತೃಗಳು, ಮನುಷ್ಯರು, ಪ್ರಾಣಿಗಳು ಈ ಐದು ಜನರಿಂದಲೂ ನಾವು ಪ್ರತಿದಿನವೂ ಎಷ್ಟೋ ಉಪಕಾರಗಳನ್ನು ಹೊಂದುತ್ತಲೇ ಇದೇವೆಯಾದ್ದರಿಂದ, ಆ ಐದು ವಿಧ ಜೀವಿಗಳನ್ನೂ ನಾವು ಪ್ರತಿದಿನವೂ ಆರಾಧಿಸ (ಪೂಜಿಸ) ಬೇಕು. ಆ ಕ್ರಮವೆಂತೆಂದರೆ—ದೇವತೆಗಳ ಪ್ರೀತಿಗಾಗಿ ದೇವತಾರ್ಚನೆ (ದೇವರ ಪೂಜೆ) ಮಾಡಬೇಕು. ಋಷಿಗಳ ಪ್ರೀತಿಗಾಗಿ ವಿದ್ಯೆ ಕಲಿಯಬೇಕು. ಪಿತೃಗಳ ಪ್ರೀತಿಗಾಗಿ ಶ್ರಾದ್ಧಾದಿಗಳನ್ನು ಮಾಡಬೇಕು. ಮನುಷ್ಯರ ಪ್ರೀತಿಗಾಗಿ ಅತಿಥಿ ಸತ್ಕಾರ (ಮನೆಗೆ ಬಂದವರಿಗೆ ಅನ್ನದಾನ) ಮಾಡಬೇಕು. ಪ್ರಾಣಿಗಳಿಗೂ, ಇತರ ಭೂತಗಳಿಗೂ ತೃಪ್ತಿಯಾಗುವುದಕ್ಕಾಗಿ ಶ್ವಾನಬಲಿ, ಮಾಂಸಬಲಿ, ಭೂತಬಲಿಗಳನ್ನು ಅಂದರೆ ನಾಯಿಗಳಿಗೂ, ಕಾಗೆಯೇ ಮುಂತಾದ ಖೇಚರಪ್ರಾಣಿಗಳಿಗೂ, ಅದೃಶ್ಯರೂಪದಿಂದ ಸಂಚರಿಸುತ್ತಿರುವ ಭೂತಗಳಿಗೂ ಅನ್ನ ಹಾಕಬೇಕು. (ಬೀದಿಯಲ್ಲಿ ಅನ್ನವನ್ನೆರಚಬೇಕು.) ಹೀಗೆ ಪ್ರತಿದಿನವೂ ಮಾಡುವ ಮನುಷ್ಯನಿಗೆ ಈ ಐದು ವಿಧ ಪ್ರಾಣಿಗಳಿಂದಲೂ ಯಾವಾಗಲೂ ಏನೂ ಭಯವಿಲ್ಲ: ಹಾಗೆ ಮಾಡದೆಬಿಟ್ಟರೆ

**ಕಶ್ಯಪಸ್ಯ ತು ಯಾ ಪತ್ನೀ ಸುರಭಿರ್ನಾಮ ವಿಶ್ರುತಾ ।**
**ಕನೀಯಸಂ ತು ಶೂದ್ರಾಣಾಂ ತಸ್ಯಾಸೀದ್ದುಹಿತೃದ್ವಯಂ　　॥ ೨೦ ॥**

---

ಅಂಘವನಿಗೆ ಈ ಐದು ಪ್ರಾಣಿಗಳಿಂದಲೂ ಭಯವುಂಟು. ಅಂದರೆ ಅವನು ಈ ಕರ್ಮಕ್ಕೆ ತಪ್ಪಿ ನಡೆಯುವುದರಿಂದ ಅವರ ಕೋಪಕ್ಕೆ ಪಾತ್ರನಾಗಿ ಬಡತನ, ಸಂಕಟ ಮುಂತಾದ ದುಃಖಗಳನ್ನನುಭವಿಸಬೇಕಾದೀತೆಂದು ಮುಖ್ಯಾಭಿಪ್ರಾಯ. ಈ ವಿಚಾರವಾಗಿ ಭಗವದ್ಗೀತೆಯಲ್ಲಿ,

" ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ "

ಎಂಬ ಶ್ಲೋಕದಿಂದ ಆರಂಭಿಸಿ ಯಜ್ಞಕಾಂಡವನ್ನೆಲ್ಲಾ ವಿಸ್ತಾರವಾಗಿ ತಿಳಿಸಿ, ಮನುಷ್ಯರಿಗೂ ದೇವತೆಗಳಿಗೂ ಇತರ ಪ್ರಾಣಿಗಳಿಗೂ ಇರುವ ಸಂಬಂಧವನ್ನು ಬಹು ಚೆನ್ನಾಗಿ ವಿವರಿಸಿರುವುದರಿಂದ, ಈ ಪ್ರಸ್ತಾಪವನ್ನು ಇಲ್ಲಿಗೆ ನಿಲ್ಲಿಸಿ ಪ್ರಕೃತ ವೃತ್ತಾಂತಕ್ಕೆ ಕೈಹಾಕೋಣ.

೨೦. ಕೇಳಿದೆಯಾ? ಶೈಲೂಷರಾಜ! ಈಗ ನಾನು ಇದುವರೆಗೆ ಹೇಳಿದಂತೆ ಬ್ರಹ್ಮನ ಕೋಪದಿಂದ ಹುಟ್ಟಿದ ಹೆಣ್ಣುಮಕ್ಕಳ ಸಂತಾನವನ್ನೂ, ಚಿತ್ರವಿಚಿತ್ರವಾದೀ ಪ್ರಪಂಚದಲ್ಲಿ ನಮ್ಮ ಕಣ್ಣಿಗೆ ಕಾಣುತ್ತಿರುವ ನಾನಾವಿಧ ಪ್ರಾಣಿಗಳ ಉತ್ಪತ್ತಿಕ್ರಮವನ್ನೂ ಕೇಳಿದೆಯಷ್ಟೆ? ಇನ್ನು ಈ ವಿಚಾರದಲ್ಲಿ ಉಳಿದಿರುವ ಅಲ್ಪ ಸ್ವಲ್ಪ ಸಂಗತಿಯನ್ನು ಹೇಳಿಯೇ ಬಿಡುತ್ತೇನೆ, ಕೇಳು. ಕಶ್ಯಪಋಷಿಗೆ ಸುರಭಿಯೆಂಬ ಹೆಸರಿನ ಇನ್ನೂ ಒಬ್ಬಳು ಹೆಂಡತಿಯಿದ್ದಳು. ಅವಳ ಹೊಟ್ಟೆಯಲ್ಲಿ ಹುಟ್ಟಿದವರೇ ಶೂದ್ರರು.

ಟಿಪ್ಪಣಿ: ಶೂದ್ರರಿಗೆ ವೇದಾಧಿಕಾರವಿಲ್ಲದಿದ್ದರೂ ಕರ್ಮಾಧಿಕಾರವುಂಟು ಆ ಕರ್ಮವನ್ನು ನಡೆಯಿಸಲು ಪುರೋಹಿತರೂ ಉಂಟು. ಇದಕ್ಕೆ ಬೇರೆ ಪ್ರಯೋಗವೂ ಇದೆ. ಕರ್ಮಕಾಲದಲ್ಲಿ ಶೂದ್ರರು ಗೋತ್ರೋಚ್ಚಾರಣೆ ಮಾಡಬೇಕಾದರೆ ಕಾಶ್ಯಪಸಗೋತ್ರವೆಂದು ಹೇಳಿಕೊಳ್ಳಬೇಕೆಂಬುದಕ್ಕೆ ಇದೇ ಪ್ರಮಾಣ. ಮುಖ್ಯವಾಗಿ ಇದರಿಂದ ತಿಳಿದುಬರುವ ನೀತಿಯೇನೆಂದರೆ, ಜನರು ವರ್ಣಾಶ್ರಮಗಳನ್ನು ದ್ವೇಷಿಸದೆ ಸಕಲ ಜನಾಂಗಗಳೂ ಸಹೋದರಭಾವದಿಂದಿರಬೇಕೆಂಬ ತತ್ತ್ವವನ್ನು ವಿವರಿಸುವುದಕ್ಕಾಗಿಯೇ ಸೃಷ್ಟಿಯ ರಹಸ್ಯವನ್ನು ಈಗ ತಿಳಿಸಲಾಗಿದೆ.

ಆ ಸುರಭಿಯ ಹೊಟ್ಟೆಯಲ್ಲಿ ಶೂದ್ರರು ಜನಿಸಿದ ಬಳಿಕ, ಇಬ್ಬರು ಹೆಣ್ಣುಮಕ್ಕಳೂ ಹುಟ್ಟಿದರು.

**ರೋಹಿಣೀ ಚೈವ ಭದ್ರಂ ತೇ ಗಂಧರ್ವೀ ಚ ಮಹೀಪತೇ ।**
**ಪುಲಹಾಯೈವ ತೇ ದತ್ತೇ ಕಶ್ಯಪೇನ ಮಹಾತ್ಮನಾ ॥ ೨೧ ॥**

**ಸುರೂಪಾ ಹೇಮರೂಪಾ ಚ ಸರ್ವಕಾಮದುಘಾ ತಥಾ ।**
**ರೋಹಿಣ್ಯಾಂ ಜನಯಾಮಾಸ ಪುಲಹಃ ಸ ಮಹಾತಪಾಃ ॥ ೨೨ ॥**

**ಬ್ರಹ್ಮಚರ್ಯವ್ರತಾಸ್ತಾಸ್ತು ಧೇನವೋ ದಶ ಕೀರ್ತಿತಾಃ ।**
**ಮಾನಸೀ ತು ಪ್ರಜಾ ತಾಸಾಂ ಯಥಾ ಸಂಖ್ಯೇನ ಮೇ ಶೃಣು ॥ ೨೩ ॥**

**ಗಾವಶ್ಚೈವ ಮಹಿಷ್ಯಶ್ಚ ಅಜಾಶ್ಚೈವಾವಯಸ್ತಥಾ ।**
**ಗಾಂಧರ್ವೀ ಜನಯಾಮಾಸ ತುರಗಾನ್ವಾತರಂಹಸಃ ॥ ೨೪ ॥**

---

೨೧. ಅವರೇ ಗಂಧರ್ವಸ್ತ್ರೀಯರು. ಅವರ ಹೆಸರು ರೋಹಿಣೀ, ಗಂಧರ್ವೀ ಎಂಬುದಾಗಿ ಪ್ರಸಿದ್ಧವಾಯಿತು. ಕಶ್ಯಪರು ಆ ಹೆಣ್ಣುಮಕ್ಕಳಿಬ್ಬರನ್ನೂ ಪುಲಹನಿಗೇ ಮದುವೆಮಾಡಿಕೊಟ್ಟನು.

೨೨. ಈ ಪುಲಹಬ್ರಹ್ಮನಿಂದ ರೋಹಿಣಿಯು ಹೊಟ್ಟೆಯಲ್ಲಿ ಸುರೂಪಾ, ಹೇಮರೂಪಾ, ಸರ್ವಕಾಮರೂಪಾ, ಎಂಬ ಮಕ್ಕಳು (ಕಾಮಧೇನು-ಹಸು) ಗಳು ಉತ್ಪತ್ತಿಯಾದರು.

೨೩. ಈ ಮೂರು ಮಂದಿ ನಾರಿಯರೂ (ಹಸುಗಳೂ) ಬ್ರಹ್ಮಚಾರಿಣಿಯರಾಗಿಯಾಗಿಯೇ ಇದ್ದುಕೊಂಡಿದ್ದರಾದರೂ ತಮ್ಮ ಮನಸ್ಸಂಕಲ್ಪಮಾತ್ರದಿಂದಲೇ ಹತ್ತು ವಿಧವಾದ ಚತುಷ್ಪ್ರಾಣಿಗಳನ್ನು ಸೃಷ್ಟಿಮಾಡಿದರು. ಅದರ ವಿವರವನ್ನು ಹೇಳುತ್ತೇನೆ, ಕೇಳು.

೨೪. ಹಸುಗಳು, ಎಮ್ಮೆಗಳು, ಆಡುಗಳು, ಕುರಿಗಳು, ಅವುಗಳ ಬೇರೆ ಬೇರೆ ಭೇದಗಳು ಸೇರಿ ಒಟ್ಟು ಹತ್ತು ವಿಧ. ಈ ರೀತಿ ರೋಹಿಣಿಯ ವಂಶವು ಬೆಳೆಯುತ್ತಾ ಬಂದಿದೆಯಷ್ಟೆ? ಇನ್ನು ಗಂಧರ್ವಿಯ ಸಮಾಚಾರವನ್ನು ಕೇಳು. ಈ ಗಂಧರ್ವಿಯು ಬಲು ವೇಗವಾಗಿ ಓಡಬಲ್ಲ ಕುದುರೆಗಳನ್ನು ಪ್ರಸುವಿಸಿದಳು.

ಗರುಡೀ ಚ ಮಯೂರೀ ಚ ದ್ವೇ ತು ಕನ್ಯೇ ಮನೋರಮೇ ।
ಪುಲಹೇನ ತು ತೇ ದತ್ತೇ ಗರುಡಾಯ ಮಹಾತ್ಮನೇ ॥ ೨೫ ॥

ಗರುಡೀ ಜನಯಾಮಾಸ ಸುಪರ್ಣಾನ್ಭೀಮವಿಕ್ರಮಾನ್ ।
ಮಯೂರೀ ಜನಯಾಮಾಸ ಮಯೂರಾದ್ಯಾನ್ವಿಹಂಗಮಾನ್ ॥ ೨೬ ॥

ಗರುಡಾನ್ವಯಸಂಭೂತಾಃ ಸರ್ವೇ ಪನ್ನಗಭೋಜಿನಃ ।
ಪಕ್ಷಿಣಸ್ತು ತ್ವಯಾ ಜ್ಞೇಯಾಃ ಸುಪರ್ಣಾನ್ಗರುಡಾನ್ಶೃಣು ॥ ೨೭ ॥

ಸುವರ್ಣಚೂಡೋ ನಾಗಶ್ಚ ದಾರುಣಶ್ಚೂಡತುಂಡಕಃ ।
ಅನಿಲಶ್ಚಾನಲಶ್ಚೈವ ವಿಶಾಲಾಕ್ಷೋಽಥ ಕುಂಡಲೀ ॥ ೨೮ ॥

ಕರ್ಕಶೋ ಧ್ವಜವಿಷ್ಕಂಭೀ ವಿನತೋ ವಾಮನಸ್ತಥಾ ।
ವಾತವೇಗೋ ದಿಶಾಚಕ್ಷು ರ್ನಿಮಿಷೋಽನಿಮಿಷಸ್ತಥಾ ॥ ೨೯ ॥

---

೨೫. ಗಂಡುಕುದುರೆಗಳ ಸಂತಾನವಾದ ಮೇಲೆ ಗಾಂಧರ್ವಿಯು ಗರುಡೀ, ಮಯೂರೀ ಎಂಬ ಹೆಸರಿನ ಬಲು ಸೊಗಸಾದ ಇಬ್ಬರು ಹೆಣ್ಣು ಮಕ್ಕಳನ್ನು ಹೆತ್ತಳು. ಪುಲಹನು ಆ ಹೆಣ್ಣು ಮಕ್ಕಳಿಬ್ಬರನ್ನೂ ಮಹಾತ್ಮನಾದ ಗರುಡನಿಗೆ ಪಾಣಿಗ್ರಹಣ ವಿಧಾನದಿಂದ ಲಗ್ನ ಮಾಡಿಕೊಟ್ಟು ಕನ್ಯಾದಾಯದಿಂದ ಬಿಡುಗಡೆ ಹೊಂದಿದನು.

೨೬. ಗರುಡಿಯ ಹೊಟ್ಟೆಯಲ್ಲಿ ಮಹಾಶೂರರಾದ ಪಕ್ಷಿರಾಜರು ಉತ್ಪನ್ನ ರಾದರು. ಮಯೂರಿಯ ಹೊಟ್ಟೆಯಲ್ಲಿ ನವಿಲೇ ಮುಂತಾದ ಪಕ್ಷಿಗಳು ಉತ್ಪನ್ನ ವಾದುವು.

೨೭. ಗರುಡವಂಶದಲ್ಲಿ ಹುಟ್ಟಿದ ಸಕಲ (ಗರುಡ) ಪಕ್ಷಿಗಳಿಗೂ ಸರ್ಪಗಳೇ ಆಹಾರವಾದುವು. ಈ ಪಕ್ಷಿಗಳಿಗೆಲ್ಲಾ ಸುಪರ್ಣರೆಂಬ ಹೆಸರುಂಟು. ಈ ಸುಪರ್ಣರ ವಂಶೋತ್ಪನ್ನರಾದ ಗರುಡಪಕ್ಷಿಗಳ ಹೆಸರನ್ನು ಈಗ ವಿವರಿಸುತ್ತೇನೆ, ಕೇಳು.

೨೮-೩೦. ಸುವರ್ಣಚೂಡ, ನಾಗ, ದಾರುಣ, ಚೂಡತುಂಡ, ಅನಿಲ, ಅನಲ, ವಿಶಾಲಾಕ್ಷ, ಕುಂಡಲೀ, ಕರ್ಕಜ, ಧ್ವಜವಿಷ್ಕಂಭಿ, ವಿನತ, ವಾಮನ, ವಾತವೇಗ,

ತ್ರಿವಾರಃ ಸಪ್ತವಾರಶ್ಚ ವಾಲ್ಮೀಕಿರ್ವಿಪ್ರುಕಿಸ್ತಥಾ ।
ದೈತ್ಯದ್ವೀಪಃ ಸರಿದ್ದ್ವೀಪಃ ಸಾರಸಃ ಪದ್ಮಕೇತನಃ ॥ ೩೦ ॥

ಸುಮುಖಶ್ಚಿತ್ರಕೇತುಶ್ಚ ಚಿತ್ರಬರ್ಹಸ್ತಥಾsನಘ ।
ಮೇಘಸತ್ಕುಮುದೋ ದಕ್ಷಃ ಸರ್ವಭುಕ್ಸಾಮಭೋಜನಃ ॥ ೩೧ ॥

ಗುರುಭಾರಃ ಕಪೋತಶ್ಚ ಪೂರ್ವನೇತ್ರಶ್ಚಿರಾತಕಃ ।
ವಿಷ್ಣುಗಂಧಃ ಕುಮಾರಶ್ಚ ಪರಿಬರ್ಹೋ ಹರಸ್ತಥಾ ॥ ೩೨ ॥

ಅಶ್ವಾಂಬರೋ ಮಧುಪರ್ಕಶ್ಚ ಹೇಮವರ್ಣಸ್ತಥೈವ ಚ ।
ಮಲಯೋ ಮಾತರಿಶ್ವಾ ಚ ನಿಶಾಕರದಿವಾಕರೌ ॥ ೩೩ ॥

ಏತೇ ಪ್ರಾದೇಶಮಾತ್ರೇಣ ಮಯೋಕ್ತಾ ಗರುಡಾತ್ಮಜಾಃ ।
ಕುಲಮೇತತ್ಸುಪರ್ಣಾನಾಂ ಧನ್ಯಾನಾಂ ನೃಪಸತ್ತಮ ॥ ೩೪ ॥

ಸರ್ವ ಏತೇ ಶ್ರಿಯಾ ಯುಕ್ತಾಃ ಸರ್ವೇ ಶ್ರೀವತ್ಸಲಕ್ಷಣಾಃ ।
ಕುಲಮೇತದ್ಧಿ ಶೈಲೂಷ ಶ್ಲಾಘ್ಯಂ ವಿಷ್ಣುಪರಿಗ್ರಹಂ ॥ ೩೫ ॥

---

ದಿಶಾಚಕ್ಷು, ನಿಮಿಷ, ಅನಿಮಿಷ, ತ್ರಿವಾರ, ಸಪ್ತವಾರ, ವಾಲ್ಮೀಕಿ, ವಿಪ್ರುಕಿ, ದೈತ್ಯದ್ವೀಪ, ಸರಿದ್ದ್ವೀಪ, ಸಾರಸ, ಪದ್ಮಕೇತನ.

೩೧-೩೪. ಸುಮುಖ, ಚಿತ್ರಕೇತು, ಚಿತ್ರಬರ್ಹ, ಮೇಘ, ಸತ್ಕುಮುದ, ರಕ್ಷ, ಸರ್ವಭುಕ್ಕು, ಸಾಮಭೋಜನ, ಗುರುಭಾರ, ಕಪೋತ, ಪೂರ್ವನೇತ್ರ, ಚಿರಾತಕ, ವಿಷ್ಣುಗಂಧ, ಕುಮಾರ, ಪರಿಬರ್ಹ, ಹರ, ಅಶ್ವಾಂಬರ, ಮಧುಪರ್ಕ, ಹೇಮವರ್ಣ, ಮಲಯ, ಮಾತರಿಶ್ವಾ, ನಿಶಾಕರ, ದಿವಾಕರ, ಇತ್ಯಾದಿ ಎಷ್ಟೆಷ್ಟೋ ವಿಧ ಪಕ್ಷಿಗಳಿವೆ. ಶೈಲೂಷ ! ಈಗ ನಿನಗೆ ಎಲ್ಲೋ ಸ್ವಲ್ಪ ವಿಧವಾದ ಪಕ್ಷಿಗಳ ಹೆಸರನ್ನು ಮಾತ್ರ ಹೇಳಿರುವೆನೇ ಏನಹ, ಈ ಧನ್ಯಕುಲವಾದ ಸುಪರ್ಣವಂಶದ ವಿಸ್ತಾರವನ್ನು ಹೆಚ್ಚಾಗಿ ಹೇಳಿಯೇ ಇಲ್ಲ.

೩೫. ಮೇಲೆ ಹೇಳಿದ ಈ ಮಹಾಪಕ್ಷಿಗಳೆಲ್ಲರೂ ಐಶ್ವರ್ಯಶಾಲಿಗಳೂ ಶ್ರೀವತ್ಸವೆಂಬ ಲಕ್ಷಣ (ಮಚ್ಚೆ) ದಿಂದ ಕೂಡಿದವರೂ ಆಗಿರುತ್ತಾರೆ. ಶೈಲೂಷ ! ಈ ವಂಶವನ್ನು ಶ್ರೀಮನ್ಮಹಾವಿಷ್ಣುವು ಪರಿಗ್ರಹಿಸಿ, ತನ್ನ ವಾಹನಕ್ಕಾಗಿ ಆರಿಸಿಕೊಂಡಿರುವುದರಿಂದ ಈ ಪಕ್ಷಿವಂಶವು ಬಹಳ ಶ್ಲಾಘ್ಯವಾದುದೆಂದು ತಿಳಿದುಕೋ.

ದೈವತಂ ವಿಷ್ಣುರೇತೇಷಾಂ ವಿಷ್ಣುರೇವ ಪರಾಯಣಂ ।
ಹೃದಿ ಯೇಷಾಂ ಸದಾ ವಿಷ್ಣುರ್ವಿಷ್ಣುರ್ಯೇಷಾಂ ಪರಾ ಗತಿಃ　　॥ ೩೬ ॥

ಏತತ್ತ್ವಯೋಕ್ತಂ ಪುಲಹಸ್ಯ ವಂಶ
ಪುತ್ರೈಃ ಸುತಾಭಿಶ್ಚ ಸಮನ್ವಿತಂ ಯತ್ ।
ವಂಶೇ ತು ಸರ್ವೋತ್ತಮವೀರ್ಯಯುಕ್ತಾ
ಜಾತಾ ಖಗೇಂದ್ರಾ ಹರಯಶ್ಚ ವೀರಾಃ　　॥ ೩೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂಪ್ರತಿ ನಾಡಾಯನವಾಕ್ಯೇಷು
ಪುಲಹವಂಶಾನುಕೀರ್ತನಂ ನಾಮಾಷ್ಟ
ಚತ್ವಾರಿಂಶದುತ್ತರದ್ವಿಶತತಮೋಽಧ್ಯಾಯಃ.

---

೩೬. ಈ ಪರಿವಾರಕ್ಕೆಲ್ಲಾ ಮಹಾವಿಷ್ಣುವೇ ಮುಖ್ಯದೇವರು. ವಿಷ್ಣುವೇ ಪರಾಯಣನು (ಗತಿಯು). ಯಾರ ಹೃದಯದಲ್ಲಿ ಸಾಕ್ಷಾಲ್ಲಕ್ಷ್ಮೀಸಮೇತನಾದ ಶ್ರೀಮನ್ಮಹಾವಿಷ್ಣುವು ವಾಸವಾಗಿರುವನೋ, ಯಾರಿಗೆ ವಿಷ್ಣುವೇ ಪರಮಗತಿಯಾಗಿರುವನೋ ಅವರೆಲ್ಲರೂ ಧನ್ಯರೆಂದು ತಿಳಿದುಕೊಳ್ಳಯ್ಯಾ, ಶೈಲೂಷರಾಜ!

೩೭. ಎಲೈ ಶೈಲೂಷನೇ! ಹೆಣ್ಣುಗಂಡು ಸಂತಾನದಿಂದ ಕೂಡಿ ಉತ್ತರೋತ್ತರ ಅಭಿವೃದ್ಧಿ ಹೊಂದಿದ ಪುಲಹನ ವಂಶವನ್ನು ನಿನಗೆ ತಿಳಿಸಿರುತ್ತೇನೆ. ಇಂತಹ ಉತ್ತಮವಾದ ವಂಶದಲ್ಲಿ ಸರ್ವೋತ್ತಮ ಪರಾಕ್ರಮದಿಂದೊಡಗೂಡಿದ ಪಕ್ಷಿರಾಜರೂ ಕಪಿರಾಜರೂ ಸಹ ಉತ್ಪತ್ತಿಯಾದರೆಂಬ ವಿಚಾರವೀಗ ನಿನಗೆ ಗೊತ್ತಾಯಿತಷ್ಟೆ? ಎಂಬುದಾಗಿ ನಾಡಾಯನರು ಶೈಲೂಷನಿಗೆ ಹೇಳಿದರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದ ಮಾರ್ಕಂಡೇಯ
ವಜ್ರಸಂವಾದರೂಪವಾದ ನಾಡಾಯನನ ಮಾತುಗಳ ಪ್ರಸಕ್ತಿಯಲ್ಲಿ
ಪುಲಹವಂಶಾನು ಕೀರ್ತನವೆಂಬ ಹೆಸರಿನ ಇನ್ನೂರ
ನಲವತ್ತೆಂಟನೆಯ ಅಧ್ಯಾಯವು
ಮುಗಿದುದು.

ಶ್ರೀ

---

# ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ಏಕೋನಪಂಚಾಶದುತ್ತರದ್ವಿಶತತಮೋಽಧ್ಯಾಯಃ

---

॥ ವಜ್ರ ಉವಾಚ ॥

**ಕಥಾಪ್ರಸಂಗೈರ್ಬಹುಭಿರ್ಭವತಾ ಮಮ ಕೀರ್ತಿತಂ ।**
**ಸಂಭವಂ ಸರ್ವಭೂತಾನಾಂ ಸರ್ವಕಲ್ಮಷನಾಶನಂ ॥ ೧ ॥**

**ತೇಷಾಂ ವಿಕಾರೇಷ್ವಾಚಕ್ಷ್ವ ರಾಜಾನೋ ಮಮ ಭಾರ್ಗವ ।**
**ಪಾಲಯಂತಿ ದ್ವಿಜಶ್ರೇಷ್ಠ ಸಕಲಂ ಯೇ ಜಗತ್ತ್ರಯಂ ॥ ೨ ॥**

॥ ಮಾರ್ಕಂಡೇಯ ಉವಾಚ ॥

**ಏವಂ ಪ್ರಜಾಸು ಸೃಷ್ಟಾಸು ಸ್ವಯಮೇವ ಪಿತಾಮಹಃ ।**
**ನಿಕಾಯೇಷು ನಿಕಾಯೇಷು ಸೋಽಭ್ಯಷಿಂಚತ ಪಾರ್ಥಿವಾನ್ ॥ ೩ ॥**

---

### ಇನ್ನೂರನಲವತ್ತೊಂಭತ್ತನೆಯ ಅಧ್ಯಾಯವು.

೧. ವಜ್ರಮಹಾರಾಜನು ಮಾರ್ಕಂಡೇಯ ಋಷಿಗಳನ್ನು ಕುರಿತು ಹೇಳುತ್ತಾನೆ:—ಎಲೈ ಮಾರ್ಕಂಡೇಯನೇ ಬಹಳ ಕಥೆಗಳನ್ನು ನೀನು ಹೇಳುತ್ತಿರುವ ಪ್ರಸಂಗ ಮಧ್ಯದಲ್ಲಿ ಸಕಲ ಭೂತಗಳ ಉತ್ಪತ್ತಿವಿಚಾರವನ್ನೂ ನಾನು ಕೇಳಿ ಬಹಳ ಮಟ್ಟಿಗೆ ನಿನಗೆ ಕೃತಜ್ಞನಾಗಿದ್ದೇನೆ. ನೀನು ಈಗ ಹೇಳಿದ ಕಥೆಗಳೆಲ್ಲವೂ ಪಾಪ ಪರಿಹಾರಕವಾದುವುಗಳು.

೨. ಈ ಮೇರೆ ಅನೇಕ ಪ್ರಾಣಿಮಯ (ವಿಕಾರ) ವಾದೀಲೋಕದಲ್ಲಿ, ಸಕಲ ಜಗತ್ತ್ರಯವನ್ನೂ ಆಳುವುದಕ್ಕಾಗಿ ಎಷ್ಟು ಮಂದಿ ರಾಜರೇರ್ಪಟ್ಟರೆಂಬ ಸಂಗತಿಯನ್ನು ನನಗೆ ದಯಮಾಡಿ ತಿಳಿಸು.

೩. ಮಾರ್ಕಂಡೇಯರು ವಜ್ರರಾಜನೊಡನೆ ಹೇಳುತ್ತಾರೆ:—ಮೇಲೆ ವಿವರಿಸಿದ ಕ್ರಮದಿಂದ ಸಕಲ ಪ್ರಜಾವರ್ಗವೂ ಸೃಷ್ಟವಾದ ಬಳಿಕ, ಬ್ರಹ್ಮನು ತಾನೇ

**ಓಷಧೀನಾಂ ದ್ವಿಜಾತೀನಾಂ ನಕ್ಷತ್ರಾಣಾಂ ತಥೈವ ಚ ।**
**ಯಜ್ಞಾನಾಂ ತಪಸಾಂ ಚೈವ ಸೋಮಂ ರಾಜ್ಯೇಽಭಿಷೇಚಯತ್ ॥ ೪ ॥**

**ಪ್ರಜಾಪತೀನಾಂ ಸರ್ವೇಷಾಂ ದಕ್ಷಂ ಪ್ರಾಚೇತಸಂ ಯಥಾ ।**
**ವಲೀಮುಖಾನಾಂ ಶ್ವೇತಾನಾಮೃಕ್ಷಾಣಾಂ ಧೂಮ್ರ ಏವ ಚ ॥ ೫ ॥**

**ಮನಃ ಸರ್ವೇಂದ್ರಿಯಾಣಾಂ ಚ ಸುರಸ್ತ್ರೀಣಾಂ ಚ ಮನ್ಮಥಂ ।**
**ಪ್ರಹ್ಲಾದಂ ಸರ್ವದೈತ್ಯಾನಾಂ ಪಿತೃಣಾಂ ಚ ತಥಾ ಯಮಂ ॥ ೬ ॥**

**ಅಪಾಂ ತು ವರುಣಂ ರಾಜ್ಯೇ ತಥೈವ ಜಲವಾಸಿನಾಂ ।**
**ಯಕ್ಷಾಣಾಂ ರಾಕ್ಷಸಾನಾಂ ಚ ಪಾರ್ಥಿವಾನಾಂ ಧನಸ್ಯ ಚ ॥ ೭ ॥**

---

ಸಾಕ್ಷಾತ್ತಾಗಿ ಪ್ರತಿ ಮನೆಗಳಿಗೂ ಹೋಗಿ ರಾಜರನ್ನು ಗೊತ್ತುಮಾಡಿ ಅವರಿಗೆ ಪಟ್ಟಾಭಿಷೇಕಮಾಡಿದನು.

೪. ಈ ರೀತಿ ಅಭಿಷಿಕ್ತರಾದ ರಾಜರ ವಿವರವನ್ನೀಗ ನಿನ್ನೊಡನುಸಿರುವೆನು. ಶ್ರದ್ಧೆಯಿಂದ ಕೇಳು, ವಜ್ರೇಶ್ವರ! ಔಷಧಿ ವನಸ್ಪತಿಗಳಿಗೂ, ಬ್ರಾಹ್ಮಣರಿಗೂ, ಯಜ್ಞಗಳಿಗೂ, ತಪಸ್ಸುಗಳಿಗೂ ಇಂದ್ರನು ರಾಜನಾಗಿರಬೇಕೆಂದು ತಿಳಿಸಿ ಅವನಿಗೆ ರಾಜ್ಯಾಭಿಷೇಕಮಾಡಿದನು.

೫. ಸಮಸ್ತ ಬ್ರಹ್ಮರುಗಳಿಗೂ ರಾಜನಾಗಿರುವಂತೆ ವರುಣನ ಮಗನಾದ ದಕ್ಷನಿಗೆ ಪಟ್ಟವನ್ನು ಕಟ್ಟಿದನು. ಸಕಲ ಕಪಿಗಳಿಗೂ, ಬಿಳೀಕಪಿಗಳಿಗೂ ಧೂಮ್ರನನ್ನು ಧೊರೆಯನ್ನಾಗಿಮಾಡಿದನು.

೬. ಸಕಲ ಇಂದ್ರಿಯಗಳಿಗೂ ಮನಸ್ಸನ್ನು ರಾಜನನ್ನಾಗಿ ನಿಯಮಿಸಿದನು. ದೇವತಾಸ್ತ್ರೀಯರಿಗೆಲ್ಲಾ ಮನ್ಮಥನು ರಾಜನಾಗಿರುವಂತೆ ಗೊತ್ತುಮಾಡಿದನು. ಸಕಲ ದೈತ್ಯರಿಗೂ ಪ್ರಹ್ಲಾದನನ್ನು ಧೊರೆಯನ್ನಾಗಿ ಮಾಡಿದನು. ಪಿತೃದೇವತೆಗಳಿಗೆ ಧೊರೆಯಾಗಿರಲೆಂದು ಯಮನಿಗೆ ಪಟ್ಟಕಟ್ಟಿದನು.

೭. ಲೋಕದ ಮೇಲಿರುವ ನೀರುಗಳಿಗೂ, ಅದರೊಳಗಡಗಿರುವ ಜಲಚರ ಪ್ರಾಣಿಗಳಿಗೆಲ್ಲಾ ವರುಣನು ಒಡೆಯನಾದನು. ಯಕ್ಷರಿಗೂ, ರಾಕ್ಷಸರಿಗೂ, ಇತರ ಪಾರ್ಥಿವರಿಗೂ, ಹಣಕ್ಕೂ ಸಹ ವಿಶ್ರವಸ್ಸಿನ ಹಿರಿಯಮಗನಾದ ಕುಬೇರನನ್ನು ರಾಜನನ್ನಾಗಿ ಮಾಡಿ, ಅವನಿಗೆ ನರವಾಹನವನ್ನು ನಿಷ್ಕರ್ಷೆಮಾಡಿದನು.

ಪುತ್ರಂ ವಿಶ್ರವಸೋ ಜ್ಯೇಷ್ಠಂ ಕುಬೇರಂ ನರವಾಹನಂ ।
ವಿಪ್ರಚಿತ್ತಿಂ ಚ ರಾಜಾನಂ ದಾನವಾನಾಂ ಮಹಾಬಲಂ ॥ ೮ ॥

ಸರ್ವಭೂತಪಿಶಾಚಾನಾಂ ಗಿರೀಶಂ ಶೂಲಪಾಣಿನಂ ।
ಶೈಲಾನಾಂ ಹಿಮವಂತಂ ಚ ನಿಮ್ನಗಾನಾಂ ಚ ಸಾಗರಂ ॥ ೯ ॥

ಭಾರತಂ ಸರ್ವವರ್ಷಾಣಾಂ ದ್ವೀಪಾನಾಮಥ ಮಧ್ಯಮಂ ।
ಸ್ವಾದೂದಕಂ ಸಮುದ್ರಾಣಾಮಶ್ವತ್ಥಂ ಸರ್ವಶಾಖಿನಾಂ ॥ ೧೦ ॥

ಕರ್ಮಣಾಂ ವ್ಯವಸಾಯಂ ಚ ಮೇರುಂ ಸರ್ವಶಿಲಾಭೃತಾಂ ।
ಗಂಧರ್ವಾಣಾಂ ಚಿತ್ರರಥಂ ಗರುಡಂ ಚ ಪತತ್ರಿಣಾಂ ॥ ೧೧ ॥

ಉಚ್ಚೈಃಶ್ರವಸಮಶ್ವಾನಾಂ ಗೋವೃಷಂ ಚ ತಥಾ ಗವಾಂ ।
ಸುವರ್ಣಂ ಸರ್ವರತ್ನಾನಾಮೌಷಧೀನಾಂ ತಥಾ ಯವಂ ॥ ೧೨ ॥

---

೮. ಸಕಲ ದಾನವ (ದನುವಿನ ಪುತ್ರರ) ಗಣಕ್ಕೂ ಮಹಾಬಲಶಾಲಿಯಾದ ವಿಪ್ರಚಿತ್ತನೆಂಬ ರಾಕ್ಷಸನನ್ನೂ, ಸಕಲ ಭೂತಗಳಿಗೂ ಪಿಶಾಚಿಗಳಿಗೂ ಶೂಲಪಾಣಿಯಾದ ಪರಮೇಶ್ವರನನ್ನೂ ಸಹ ರಾಜರನ್ನಾಗಿಮಾಡಿದನು.

೯-೧೦. ಸಕಲ ವಿಧವಾದ ಬೆಟ್ಟಗಳಿಗೂ ಹಿಮವತ್ಪರ್ವತವೇ ರಾಜಸ್ಥಾನದಲ್ಲಿ ನಿಂತಿತು. ಸಕಲ ನದಿಗಳಿಗೂ ಸಮುದ್ರನು ರಾಜನಾದನು ಸಕಲ ವರ್ಷಗಳಿಗಿಂತ ಭಾರತವರ್ಷವೇ ಶ್ರೇಷ್ಠ (ರಾಜ) ನಾದನು. ಸಕಲ ದ್ವೀಪಗಳಿಗೂ ಮಧ್ಯಮದ್ವೀಪವೇ ರಾಜಸ್ಥಾನದಲ್ಲಿ ನಿಂತಿತು. ಸಕಲ ಸಮುದ್ರಗಳಿಗೂ ಸ್ವಾದೂದಕ ಸಮುದ್ರವು ರಾಜನಾಯಿತು. ಸಕಲ ವೃಕ್ಷಗಳಿಗೂ ಅಶ್ವತ್ಥ (ಅರಳಿ) ವೃಕ್ಷವೇ ರಾಜನಾಯಿತು.

೧೧. ಕೃಷಿಗಳಿಗೆಲ್ಲಾ ವ್ಯವಸಾಯವೇ ಮುಖ್ಯರಾಜ. ಸಕಲ ಪರ್ವತಗಳಿಗೂ ಮೇರುವೇ ರಾಜನು. ಗಂಧರ್ವರಿಗೆಲ್ಲಾ ಚಿತ್ರರಥನೇ ರಾಜ ಪಕ್ಷಿಗಳಿಗೆಲ್ಲಾ ಗರುಡನೇ ರಾಜ.

೧೨. ಕುದುರೆಗಳಿಗೆಲ್ಲಾ ಉಚ್ಚೈಶ್ರವಸ್ಸೇ ರಾಜನು. ಹಸುಗಳಿಗೆಲ್ಲಾ ಗೂಳಿಯೇ ರಾಜ. ಎಲ್ಲಾ ವಿಧವಾದ ರತ್ನಗಳಿಗೂ ಸುವರ್ಣನೇ ರಾಜ. ಓಷಧಿ (ಧಾನ್ಯ) ಗಳಿಗೆಲ್ಲಾ ಗೋಧಿಯೇ ರಾಜ.

ಸತ್ಯಲೋಕಂ ಚ ಲೋಕಾನಾಂ ಪಾತಾಲಾನಾಂ ರಸಾತಲಂ ।
ಶಾಸ್ತ್ರಾಣಾಂ ಚ ಯಜುರ್ವೇದಂ ಸರ್ವೇಷಾಮವಿಶೇಷತಃ ॥ ೧೩ ॥

ಗಾಯತ್ರೀಂ ಸರ್ವಮಂತ್ರಾಣಾಂ ಛಂದಸಾಂ ಚ ಯದೂತ್ತಮ ।
ಮೃಗಾಣಾಮಥ ಶಾರ್ದೂಲಂ ಪನ್ನಗಾನಾಂ ಚ ತಕ್ಷಕಂ ॥ ೧೪ ॥

ಐರಾವತಂ ಗಜೇಂದ್ರಾಣಾಂ ಧರ್ಮಂ ಸರ್ವಸುಖಸ್ಯ ಚ ।
ವಾಸುಕಿಂ ಸರ್ವನಾಗಾನಾಮೃಷೀಣಾಂ ಚ ತಥಾ ಭೃಗುಂ ॥ ೧೫ ॥

ವಿದ್ಯಾಧರಾಣಾಂ ಸರ್ವೇಷಾಂ ತಥಾ ದೇವೀಂ ಸರಸ್ವತೀಂ ।
ಉತ್ಪಾತಾನಾಂ ತಥಾ ರಾಹುಂ ಗ್ರಹಾಣಾಂ ಚ ದಿವಾಕರಂ ॥ ೧೬ ॥

ಕಾಲಸ್ಯಾವಯವಂ ಚೈವ ಕಾಲಂ ಸಂವತ್ಸರಂ ತಥಾ ।
ವ್ಯಾಧೀನಾಂ ಚ ಜ್ವರಂ ರಾಜ್ಯೇ ನೃಣಾಮರ್ಕನಿಶಾಕರೌ । ॥ ೧೭ ॥

---

೧೩. ಲೋಕಗಳಿಗೆಲ್ಲಾ ಸತ್ಯಲೋಕವೇ ರಾಜ. ಪಾತಾಳಲೋಕಗಳಿಗೆಲ್ಲಾ ರಸಾತಲವೇ ರಾಜ. ಸಕಲ ವಿಧವಾದ ವೇದಶಾಸ್ತ್ರಗಳಿಗೂ ಯಜುರ್ವೇದವೇ ರಾಜ.

೧೪. ಸಕಲ ಮಂತ್ರಗಳಿಗೂ, ಛಂದಸ್ಸುಗಳಿಗೂ ಗಾಯತ್ರಿಯೇ ಮಹಾರಾಣಿ. ಮೃಗಗಳಿಗೆಲ್ಲಾ ಸಿಂಹವೇ ರಾಜ. ಹಾವುಗಳಿಗೆಲ್ಲಾ ತಕ್ಷಕನೇ ರಾಜ.

೧೫. ಸಕಲ ವಿಧವಾದ ಆನೆಗಳಿಗೂ ಐರಾವತನೇ ರಾಜ ಸಕಲ ಸುಖಗಳಿಗೂ ಧರ್ಮವೇ ರಾಜ. ಸಕಲ ನಾಗವರ್ಗಕ್ಕೂ ವಾಸುಕಿಯೇ ರಾಜ. ಋಷಿಗಳಿಗೆಲ್ಲರಿಗೂ ಭೃಗುಋಷಿಯೇ ರಾಜ.

೧೬. ಸಕಲ ವಿದ್ಯಾಧರ (ವಿದ್ವಾಂಸ) ರಿಗೂ ಸರಸ್ವತಿಯೇ ಮಹಾರಾಣಿಯು. ಸಕಲ ವಿಧವಾದ ಉತ್ಪಾತಗಳಿಗೂ ರಾಹುವೇ ರಾಜ. (ಅನಿಷ್ಟಕ್ಕೆಲ್ಲಾ ಶನೈಶ್ಚರನೇ ಗುರಿಯೆಂಬಂತೆ.) ಗ್ರಹಗಳಿಗೆಲ್ಲಾ ಸೂರ್ಯನೇ ರಾಜ.

೧೭. ಸಕಲ ವಿಧವಾದ ಕಾಲಾವಯವಗಳಿಗೂ (ದಿನ-ವಾರ-ನಕ್ಷತ್ರ-ಮುಹೂರ್ತ-ಕ್ಷಣ ಇತ್ಯಾದಿ) ಸಂವತ್ಸರ (ವರ್ಷ) ವೇ ರಾಜ. ಸಕಲ ವಿಧವಾದ ಮನುಷ್ಯರಿಗೂ ಸೂರ್ಯಚಂದ್ರರೇ ರಾಜರು. (ರಾಜಶಬ್ದಕ್ಕೆಲ್ಲಾ ಶ್ರೇಷ್ಠವೆಂದೇ ಅರ್ಥಮಾಡಬೇಕು.

**ಅಭಿಷಿಕ್ತೋ ನರೇಂದ್ರೇಂದ್ರ ಬ್ರಹ್ಮಣಾ ಸ್ವಯಮೇವ ಹಿ**
**ಭಾರತೇಽಸ್ಮಿನ್ಪುರಾ ವರ್ಷೇ ಪ್ರಾಪ್ತೇ ವೈವಸ್ವತೇಽಂತರೇ ॥ ೧೮ ॥**

**ತಸ್ಮಾದದ್ಯಾಪಿ ಚ ತಯೋಃಅಂಶಜಾತಾಶ್ಚ ಪಾರ್ಥಿವಾಃ ।**
**ತತೋಽಭಿಷಿಕ್ತೋ ದೇವಾನಾಂ ರಾಜ್ಯೇ ದೇವಃ ಶತಕ್ರತುಃ ।**
**ಸಂಭೂಯ ರಾಜಭಿಃ ಸರ್ವೈಸ್ತ್ರೈಲೋಕ್ಯಪತಿರೂರ್ಜಿತಃ ॥ ೧೯ ॥**

**॥ ವಜ್ರ ಉವಾಚ ॥**

**ರಾಜ್ಯೇಭಿಷಿಕ್ತಃ ಸ ಕಥಂ ಮಹಾತ್ಮಾ**
**ಸಂಭೂಯ ಸರ್ವೈಸ್ತ್ರಿದಶಾರಿಹರ್ತಾ ।**

---

೧೮. ಎಲೈ ವಜ್ರರಾಜನೇ ಕೇಳು. ನಾನು ಇದುವರಿವಿಗೆ ವಿವರಿಸಿದ ಕ್ರಮದಂತೆ, ಈ ವೈವಸ್ವತ ಮನ್ವಂತರವು ಆರಂಭವಾದಾಗ ಈ ಭಾರತವರ್ಷಕ್ಕೆ ಬ್ರಹ್ಮನು ಪ್ರತ್ಯಕ್ಷನಾಗಿ ತಾನೇ ಬಂದು ಸಕಲ ರಾಜರಿಗೂ ಪಟ್ಟಾಭಿಷೇಕಮಾಡಿದನೆಂದು ತಿಳಿದುಕೋ.

೧೯. ಆದ್ದರಿಂದಲೇ ಈಗ ಇರುವ ಮಹಾರಾಜರುಗಳೂ ಸಹ ಆಯಾರಾಜರ ಅಂಶದಿಂದ ಹುಟ್ಟಿದವರೆಂದು ತಿಳಿದುಕೊಳ್ಳಬೇಕು. ಎಲೈ ವಜ್ರರಾಜನೇ! ಕೇಳು. ಇಷ್ಟುಮಂದಿ ರಾಜರನ್ನೂ ಆಯಾಯ ಪಂಗಡಗಳಿಗೆ ಗೊತ್ತುಮಾಡಿದ ಬಳಿಕ ಬ್ರಹ್ಮನು ದೇವತೆಗಳ ರಾಜ್ಯವಾದ ಅಮರಾವತಿಗೆ ಮೇಲೆ ಹೇಳಿದ ಎಲ್ಲಾ ರಾಜರುಗಳನ್ನೂ (ಜಲಚರ-ಭೂಚರ-ಖೇಚರ) ತನ್ನ ಜತೆಯಲ್ಲಿ ಕರೆದುಕೊಂಡು ಬಂದು, ಅಲ್ಲಿ ಶತಕ್ರತುವೆನಿಸಿದ ಇಂದ್ರನಿಗೆ ತ್ರಿಲೋಕಾಧಿಪತ್ಯವನ್ನೂ ವಹಿಸಿ ಪಟ್ಟಾಭಿಷೇಕವಂ ನೆರವೇರಿಸಿದನು.

೨೦. ವಜ್ರರಾಜನು ಮಾರ್ಕಂಡೇಯನನ್ನು ಪ್ರಶ್ನೆಮಾಡುತ್ತಾನೆ:— ಮಾರ್ಕಂಡೇಯ! ಈಗ ನೀನು ಹೇಳಿದ ಸ್ವರ್ಗರಾಜನಾದ ಇಂದ್ರನ ವೃತ್ತಾಂತವನ್ನು ಕೇಳಿ, ಏನೋ ಒಂದು ವಿಧವಾದ ಭಕ್ತಿ ಹುಟ್ಟಿ ಮೇಮೇಲೆಲ್ಲಾ ರೋಮಾಂಚನವಾಗುತ್ತಲಿದೆ. ಸಕಲ ರಾಕ್ಷಸಾಂತಕನಾದ ತ್ರಿದಶೇಶ್ವರನು, ಬ್ರಹ್ಮನಿಂದ ಸಕಲ ರಾಜರ ಮಧ್ಯದಲ್ಲಿ ದೇವರಾಜ್ಯದಲ್ಲಿ ಪಟ್ಟಾಭಿಷಿಕ್ತನಾದನೆಂದು ಹೇಳಿದೆಯಲ್ಲಾ!

ಏತನ್ಮಮಾಚಕ್ಷ್ವ ಭೃಗುಪ್ರಧಾನ
ಭಕ್ತಿರ್ಮಮೇಯಂ ತ್ರಿದಶೇಂದ್ರಶತ್ರೌ || ೨೦ ||

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂಪ್ರತಿ ನಾರಾಯಣವಾಕ್ಯೇ
ಪ್ರತಿಸಮೂಹೇ ರಾಜಕೀರ್ತನಂ ನಾಮೈಕೋನ
ಪಂಚಾಶದುತ್ತರದ್ವಿಶತತಮೋಽಧ್ಯಾಯಃ.

---

ಆ ಇಂದ್ರಪಟ್ಟಾಭಿಷೇಕದ ವೃತ್ತಾಂತವನ್ನು ಸ್ವಲ್ಪ ವಿಸ್ತರಿಸಿ ಹೇಳಬೇಕೆಂದು ಮಾರ್ಕಂಡೇಯನನ್ನು ಕೇಳಿಕೊಂಡನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದ ಮಾರ್ಕಂಡೇಯ
ವಜ್ರಸಂವಾದರೂಪವಾದ ಪ್ರತಿಯೊಂದು ಪ್ರಾಣಿಸಮೂಹದ
ರಾಜಕೀರ್ತನೆಯೆಂಬ ಹೆಸರಿನ ಇನ್ನೂರ
ನಲವತ್ತೊಂಭತ್ತನೆಯ ಅಧ್ಯಾಯವು
ಮುಗಿದುದು.



ಶ್ರೀಃ

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಪಂಚಾಶದುತ್ತರ ದ್ವಿಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ಸುಮೇರೌ ಪರ್ವತಶ್ರೇಷ್ಠೇ ನಾನಾರತ್ನೋಜ್ಜ್ವಲತ್ವಿಷಿ ।
ಪ್ರಜಾಪತಿರಥಾದಾಯ ರಾಜಸಂಘಾನ್ಪ್ರತೀರ್ತಿತಾನ್ ॥ ೧ ॥

ಅಭ್ಯಷಿಂಚತ ದೇವಾನಾಂ ರಾಜ್ಯೇ ಕಶ್ಯಪನಂದನಂ ।
ತೇಜಸ್ವಿನಮಥಾದಿತ್ಯಂ ಜಜ್ಞೇ ನಿರ್ಧೂತಕಲ್ಮಷಂ ॥ ೨ ॥

---

### ಇನ್ನೂರೈವತ್ತನೆಯ ಅಧ್ಯಾಯವು.

೧. ಮಾರ್ಕಂಡೇಯನು ಹೇಳುತ್ತಾನೆ:---ನಾನಾವಿಧವಾದ ರತ್ನಗಳಿಂದ ಅತ್ಯುಜ್ವಲವಾಗಿ ಕಂಗೊಳಿಸುತ್ತಿದ್ದ ಮೇರುಪರ್ವತದಲ್ಲಿ ಬ್ರಹ್ಮನು, ಮೇಲಿನ ಅಧ್ಯಾಯದಲ್ಲಿ ವಿಸ್ತರಿಸಿದಂತೆ ಸಕಲ ವಿಧ ರಾಜರ ಗುಂಪನ್ನೂ ಕೂಡಿಸಿ (ಕರೆದು) ಕೊಂಡು ಅವರೆದುರಾಗಿಯೇ,

೨. ದೇವತೆಗಳ ರಾಜ್ಯದಲ್ಲಿ ಕಶ್ಯಪನ ಮಗನಾದ ಮಹಾತೇಜಸ್ವಿಯಾದ ಅದಿತಿಪುತ್ರನಾದ, ಸಕಲ ವಿಧ ಪಾಪಗಳನ್ನೂ ಬಲು ದೂರ ಅಟ್ಟಿ ಪರಮಪವಿತ್ರನಾದ ಇಂದ್ರನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ, ಆ ತ್ರಿದಶೇಶ್ವರನಾದ ಇಂದ್ರನಿಗೆ ಮಹಾರಾಜ್ಯ ಸಾಮ್ರಾಜ್ಯಾಭಿಷೇಕವನ್ನು ನೆರವೇರಿದನು.

ತಸ್ಯಾಭಿಷೇಕೇ ಪ್ರದದೌ ವಿಶ್ವಕರ್ಮಾ ಮನೋಹರಂ ।
ರತ್ನೋಜ್ಜ್ವಲಂ ಭದ್ರಪೀಠಂ ಕಾಮರೂಪಧರಂ ಶುಭಂ ॥ ೩ ॥

ಅತ್ರೈವಮುಪದಿಶ್ಯಾಥ ಸ್ವಯಂ ಬ್ರಹ್ಮಾ ಜಗದ್ಗುರುಃ ।
ಅಭ್ಯಷಿಂಚತ ದೇವಾನಾಮಾಧಿಪತ್ಯೇ ಶತಕ್ರತುಂ ॥ ೪ ॥

ಬ್ರಹ್ಮಾವಿಷ್ಣುಶ್ಚ ಶಂಭುಶ್ಚ ಸಾಧ್ಯಾಶ್ಚ ಸಮರುದ್ಗಣಾಃ ।
ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾ ಮರುದ್ಗಣಾಃ ॥ ೫ ॥

ಭೃಗವೋಽಂಗಿರಸಃ ಸಾಧ್ಯಾ ಅಶ್ವಿನೌ ಚ ಭಿಷಗ್ವರೌ ।
ಋಷಯಶ್ಚ ಮಹಾಭಾಗಾಸ್ತ್ರೈಕಾಲ್ಯಾಮಲದರ್ಶಿನಃ ॥ ೬ ॥

ಯಾನಿ ತೋಯಾನ್ಯುಪಾದಾಯ ಸಮುದ್ರಾಃ ಸರಿತಸ್ತಥಾ ।
ಸರಾಂಸಿ ಚ ಸತೀರ್ಥಾನಿ ಗಂಧರ್ವಾಪ್ಸರಸಸ್ತಥಾ ॥ ೭ ॥

---

೩. ಆ ದೇವೇಂದ್ರನಿಗೆ ಪಟ್ಟಾಭಿಷೇಕ ನಡೆದ ಕಾಲದಲ್ಲಿ ವಿಶ್ವಕರ್ಮನು ಒಂದು ಮನೋಹರವಾದ, ರತ್ನಖಚಿತವಾದ, ಕಾಮರೂಪವುಳ್ಳ ಸಿಂಹಾಸನವನ್ನು ತಂದು ಓದಿಸಿದನು. (ಸಮರ್ಪಿಸಿದನು. ನಜರು ಕಾಣಿಕೆಯಾಗಿ ಕೊಟ್ಟನು.)

೪. ವಿಶ್ವಕರ್ಮನಿಂದ ಸಮರ್ಪಿತವಾದ ರತ್ನಸಿಂಹಾಸನದಲ್ಲಿ ಬ್ರಹ್ಮನು ಇಂದ್ರನನ್ನು ಕುಳ್ಳಿರಿಸಿ, ಮೊದಲು ತಾನು ಅವನ ಶಿರಸ್ಸಿನಲ್ಲಿ ನಾನಾತೀರ್ಥೋದಕಗಳಿಂದ ಅಭಿಷೇಕಮಾಡಿದನು.

೫-೭. ಬ್ರಹ್ಮನು ಅಭಿಷೇಕಮಾಡಿದ ಬಳಿಕ ವಿಷ್ಣು, ಆಮೇಲೆ ಈಶ್ವರ, ಆ ಬಳಿಕ ಸಾಧ್ಯರು, ಮರುದ್ಗಣಗಳು, ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾದಶ ರುದ್ರರು, ವಿಶ್ವೇದೇವತೆಗಳು, ಸಪ್ತಮರುತ್ತುಗಳು, ಭೃಗುಗಳು, ಅಂಗಿಸರು, ಸಾಧ್ಯರು, ಅಶ್ವಿನೀದೇವತೆಗಳು, ತ್ರಿಕಾಲತತ್ತ್ವಜ್ಞಾನಿಗಳಾದ ಮಹಾತ್ಮರಾದ ಋಷಿಗಳು ಇವರೆಲ್ಲರೂ ಒಬ್ಬರಾಗುತ್ತಲೂ ಮತ್ತೊಬ್ಬರು, ಅವರ ಹಿಂದೆ ಕ್ರಮವಾಗಿ ಬಂದು ಬಂದು ಸಕಲ ಸಮುದ್ರಗಳ, ನದಿಗಳ, ಸರೋವರಗಳ, ಸಕಲ ತೀರ್ಥಕ್ಷೇತ್ರಗಳ ಜಲಗಳನ್ನು ತಂದು ಇಂದ್ರನಿಗೆ ಅಭಿಷೇಕಮಾಡಿದರು. ಬಳಿಕ ಗಂಧರ್ವರೂ, ಅಪ್ಸರನಾರಿಯರೂ ಬಂದು ಅಭಿಷೇಕಜಲದಿಂದ ಅಭಿಷೇಕವಂಗೈದರು.

**ತಸ್ಯೇಂದುಮಂಡಲಾಕಾರಂ ಛತ್ರಂ ಜಗ್ರಾಹ ಕೇಶವಃ ।**
**ಶ್ವೇತೌ ಚ ವಾಲವ್ಯಜನೌ ತಥಾ ಚಂದ್ರದಿವಾಕರೌ ॥ ೮ ॥**

**ಭೃಂಗಾರಂ ಯಾದಸಾಂ ಭರ್ತಾ ದಂಡಂ ದಂಡಧರಃ ಪ್ರಭುಃ ।**
**ಮೇನಕಾ ಚೈವ ರಂಭಾ ಚ ತಾಲವೃಂತೌ ಮನೋಹರೌ ॥ ೯ ॥**

**ವಿಧಿವಚ್ಚ ಜುಹಾವಾಗ್ನಿಂ ದೇವಾಚಾರ್ಯೋ ಬೃಹಸ್ಪತಿಃ ।**
**ತತಸ್ತಸ್ಯ ದದೌ ಪ್ರೀತ್ಯಾ ವಾಹನಾರ್ಥೇ ಮಹೋತ್ಕಟಂ ॥ ೧೦ ॥**

**ಐರಾವಣಂ ಚತುರ್ದಂತಂ ನಾಗಂ ಚ ಪುಲಹಃ ಸ್ವಯಂ ।**
**ಪುಲಹಃ ಸ್ವಸುತಂ ಪ್ರಾದಾಚ್ಚೈಃಶ್ರವಸಂ ತುರಗಮೇವ ಚ ॥ ೧೧ ॥**

**ತುರಗಾಣಾಂ ಸಹಸ್ರಂ ಚ ಹರೀಣಾಂ ವಾತರಂಹಸಾಂ ।**
**ಶ್ರಿಯಾ ದತ್ತಂ ತತಃ ಪ್ರೀತ್ಯಾ ವಾಹನಾರ್ಥೇ ಮಹೋತ್ಕಟಂ ॥ ೧೨ ॥**

---

೮. ಆರೀತಿ ದೇವೇಂದ್ರನಿಗೆ ಪಟ್ಟಾಭಿಷೇಕವಾದ ಬಳಿಕ ಚಂದ್ರಮಂಡಲದಂತೆ ದುಂಡಗಿದ್ದ ಶ್ವೇತಚ್ಛತ್ರಿಯನ್ನು ಕೇಶವನು ಇಂದ್ರನ ತಲೆಯಮೇಲೆ ಹಿಡಿದುನಿಂತನು. ಬಹಳ ಶುಭ್ರವಾದ ಎರಡು ಚಾಮರಗಳನ್ನು ಹಿಡಿದು ಬೀಸುತ್ತಾ ಸೂರ್ಯಚಂದ್ರರಿಬ್ಬರೂ ದೇವೇಂದ್ರನ ಎರಡು ಪಕ್ಕಗಳಲ್ಲಿ ನಿಂತರು.

೯. ವರುಣನು ನೀರಿನ ಗಿಂಡಿಯನ್ನು ಹಿಡಿದುನಿಂತನು. ಯಮಧರ್ಮರಾಜನು ದಂಡವನ್ನು ಹಿಡಿದು ಮುಂದೆ ನಿಂತನು. ಮೇನಕೆಯೂ ರಂಭೆಯೂ ಎರಡು ಮನೋಹರವಾದ ಬೀಸಣಿಗೆಗಳನ್ನು ಹಿಡಿದು ಬೀಸುತ್ತಾ ಇಕ್ಕೆಲದಲ್ಲೂ ನಿಂತರು.

೧೦-೧೧. ದೇವಗುರುವಾದ (ಪುರೋಹಿತನಾದ) ಬೃಹಸ್ಪತ್ಯಾಚಾರ್ಯನು ಅಗ್ನಿಯ ಮುಂದೆ ಕುಳಿತು ವಿಧಿವಿಹಿತವಾದ ಹೋಮಕಾರ್ಯಗಳನ್ನು ನೆರವೇರಿಸಿದನು. ಹವನಹೋಮಗಳಾದ ಬಳಿಕ ಹಸೆಯ ಮೇಲೆ ಕುಳಿತ ಇಂದ್ರನಿಗೆ ಪುಲಹಬ್ರಹ್ಮನು ಬಹು ಪ್ರೀತಿಯಿಂದ ತನ್ನ ವಶದಲ್ಲಿದ್ದ ಬಲು ಮದಿಸಿದ ನಾಲ್ಕು ಕೊಂಬುಗಳುಳ ಐರಾವಣ (ಐರಾವತ) ವೆಂಬ ಆನೆಯನ್ನು ವಾಹನಾರ್ಥ (ಸವಾರಿಗೆ) ವಾಗಿ ಕೊಟ್ಟ ನಲ್ಲದೆ, ತನ್ನ ಸ್ವಂತ ಮಗನಾದ ಉಚ್ಚೈಃಶ್ರವಸ್ಸೆಂಬ ಅಶ್ವರಾಜನನ್ನು ಸಹ ವಾಹನಕ್ಕಾಗಿ ಉಪಯೋಗಿಸಿಕೊಳ್ಳುವಂತೆ ಕೊಟ್ಟನು.

೧೨. ಪುಲಹಬ್ರಹ್ಮನು ಉಚ್ಚೈಃಶ್ರವವನ್ನು ಕೊಡುವಾಗ ಅದರ ಜತೆಯಲ್ಲಿಯೇ ಬಹು ವೇಗಶಾಲಿಗಳಾದ ಒಂದು ಸಾವಿರ ಕುದುರೆಗಳನ್ನೂ, ಅದರೊಡನೆ ಕುದುರೆಯ ಬಂಡಿಗಳನ್ನೂ ಸಹ ಪ್ರೀತಿಯಿಂದ ಅನೇಕ ಐಶ್ವರ್ಯದೊಡನೆ ಕೊಟ್ಟನು.

ತಮಗ್ನಿರ್ಯೋಜಯಾಮಾಸ ಕಾಂಚನೇನ ರಥೇನ ಚ ।
ಇಂದ್ರಾಯುಧಸವರ್ಣಾಭಿಃ ಪತಾಕಾಭಿರನಂತರಂ ॥ ೧೩ ॥

ವಾಯುಸ್ತಂ ಯೋಜಯಾಮಾಸ ಧ್ವಜಂ ನಾಗೇನ ಶಂಕರಃ ।
ಬಬಂಧ ಮುಕುಟಂ ತಸ್ಯ ಸ್ವಯಂ ಬ್ರಹ್ಮಾ ಜಗದ್ಗುರುಃ ॥ ೧೪ ॥

ಉಪಾನಹೌ ದದೌ ತಸ್ಯ ವಿರೂಪಾಕ್ಷಸ್ತಥಾವ್ಯಯಃ ।
ಖಡ್ಗಶ್ಚ ವಿಮಲೋದತ್ತಸ್ತಸ್ಯ ಶುಕ್ರೇಣ ಯಾದವ ॥ ೧೫ ॥

ಚಂದನಾನಿ ಚ ಮುಖ್ಯಾನಿ ಗಂಧಾನಿ ವಿವಿಧಾನಿ ಚ ।
ಹಿಮಾಲಯಃ ಸ್ವಯಂ ತಸ್ಯ ಪ್ರಾದಾಲ್ಲೋಕಗುರುರ್ಗುರುಃ ॥ ೧೬ ॥

ರತ್ನಾನಿ ಸುವಿಚಿತ್ರಾಣಿ ಸಮುದ್ರಃ ಸ್ವಯಮೇವ ಹಿ ।
ದದುಶ್ಚ ಋತವಸ್ತಸ್ಯ ಪುಷ್ಪಾಣಿ ಚ ಫಲಾನಿ ಚ ॥ ೧೭ ॥

---

೧೩. ಅಗ್ನಿಯು ಒಂದು ಚಿನ್ನದ ಬಂಡಿಯನ್ನು (ಕುದುರೆ ಸಾರೋಟು) ಕೊಟ್ಟನು. ಕಾಮನಬಿಲ್ಲಿನ ಹಾಗೆ ವಿವಿಧವರ್ಣಗಳಿಂದ ವಿರಾಜಿಸುತ್ತಿದ್ದ ಬಾವುಟಗಳನ್ನು ಆ ಚಿನ್ನದಬಂಡಿಯ ಸುತ್ತಲೂ ನೆಟ್ಟಿದ್ದರು.

೧೪. ವಾಯುವು ಶ್ರೇಷ್ಠವಾದೊಂದು ಧ್ವಜವನ್ನು ಕೊಟ್ಟನು. ಈಶ್ವರನು ಇಂದ್ರನ ಕಿರೀಟದ ಮೇಲೆ ಸುತ್ತಲೂ ತನ್ನ ಮೈಮೇಲಿದ್ದ ಒಂದು ಒಡವೆ (ಸರ್ಪ) ಯನ್ನು ಕೊಡಲು, ಬ್ರಹ್ಮನು ಅದನ್ನು ಕಿರೀಟಕ್ಕೆ ಸುತ್ತಿ ಆಶೀರ್ವದಿಸಿದನು. ವಿರೂಪಾಕ್ಷನು ಒಂದು ಜೋಡಿ ಪಾದರಕ್ಷೆಗಳನ್ನು ಕೊಟ್ಟನು.

೧೫-೧೬. ಶುಕ್ರಾಚಾರ್ಯನು ಒಂದು ಕತ್ತಿಯನ್ನು ಕೊಟ್ಟನು. ಆ ಕತ್ತಿಯು ಬಹು ಶುಭ್ರವಾಗಿತ್ತು. ಹಿಮಾಲಯ (ರಾಜ) ನು ಬಲು ಸೊಗಸಾದ ಗಂಧದ ಬಿಲ್ಲೆಗಳನ್ನೂ, ಇತರ ವಿಧವಾದ ನಾನಾಪ್ರಕಾರವಾದ ಸುಗಂಧದ್ರವ್ಯಗಳನ್ನೂ ತಂದೊಪ್ಪಿಸಿದನು.

೧೭. ಸಮುದ್ರರಾಜನು ತಾನೇ ಸಾಕ್ಷಾತ್ತಾಗಿ ಬಂದು ಬಹು ವಿಧವಾದ ಚಿತ್ರವಿಚಿತ್ರ ರತ್ನರಾಶಿಗಳನ್ನೇ ಇಂದ್ರನ ಮುಂದೆ ಸುರಿದನು. ಆರು ಋತುಗಳೂ ಶರೀರವನ್ನು ಧರಿಸಿಕೊಂಡು ಬಂದು ನಾನಾವಿಧ ಹಣ್ಣುಗಳನ್ನೂ, ಹೂವುಗಳನ್ನೂ ತಂದೊಪ್ಪಿಸಿದುವು.

ನನೃತುರ್ದೇವಗಂಧರ್ವಾ ಜಗುಶ್ಚಾಪ್ಸರಸಾಂ ಗಣಾಃ ।
ಹೃಷ್ಟಂ ಪ್ರಮುದಿತಂ ಚಾಸೀತ್ತ್ರೈಲೋಕ್ಯಂ ಸಚರಾಚರಂ ॥ ೧೮ ॥

ಸರ್ವಗಂಧಾನುಪಾದಾಯ ಸುರಭಿರ್ಮಾರುತೋ ವವೌ ।
ಮಹತಾ ಸ ವರೌಘೇನ ತರ್ಪಯಿತ್ವಾ ಬೃಹಸ್ಪತಿಂ ॥ ೧೯ ॥

ವರೌಘೈಸ್ತರ್ಪಯಾಮಾಸ ಸರ್ವಾನೇವ ದ್ವಿಜೋತ್ತಮಾನ್ ।
ಸಪ್ತಾಹಂ ಮಾನಸೀಂ ಸಿದ್ಧಿಂ ಪ್ರಾದಾತ್ಸರ್ವೇಷು ಜಂತುಷು ॥ ೨೦ ॥

ವ್ಯಾಧಿಮೃತ್ಯುಜರಾಶೋಕವಿನಿವೃತ್ತಾ ಜಗತ್ತ್ರಯೀ ।
ಸಪ್ತಾಹಂ ನರಕಸ್ಥಾನಾಂ ನೈವ ಸರ್ವಾಶ್ಚ ಯಾತನಾಃ ॥ ೨೧ ॥

---

೧೮. ಆ ಸಮಯದಲ್ಲಿ ದೇವಗಂಧರ್ವರು ಸಂಗೀತವನ್ನು ಹಾಡಿದರು. ಗಂಧರ್ವರು ನರ್ತನಮಾಡಿದರು. ಅಪ್ಸರನಾರಿಯರು ಸೊಗಸಾಗಿ ಗಾನಮಾಡಿದರು. ಚರಾಚರಪ್ರಪಂಚವೆಲ್ಲವೂ ದೇವೇಂದ್ರನ ರಾಜ್ಯಾಭಿಷೇಕ ಸಮಯದಲ್ಲಿ ಬಹಳ ಸುಖವನ್ನನುಭವಿಸಿದುವು.

೧೯. ವಾಯುವು ಆ ಇಂದ್ರನ ಸಭೆಯಲ್ಲಿ ಸಕಲ ಸುಗಂಧಪೂರಿತನಾಗಿ ಸುಖವಾಗಿ ಬೀಸಿದನು. ಆ ಸಂತೋಷಕಾಲದಲ್ಲಿ ಇಂದ್ರನು ತನ್ನ ಗುರುಗಳಾದ ಬೃಹಸ್ಪತ್ಯಾಚಾರ್ಯರಿಗೆ ಅಮೋಘವಾದ ವರ (ಉಡುಗೆರೆ) ವನ್ನು ಕೊಟ್ಟನು.

೨೦. ಗುರುಪೂಜೆಯಾದ ಬಳಿಕ ಸಕಲರಾದ ಬ್ರಹ್ಮರ್ಷಿಗಳಿಗೂ, ದೇವರ್ಷಿಗಳಿಗೂ ಅವರು ಕೋರಿದ ವರ (ಪದಾರ್ಥ)ಗಳನ್ನೆಲ್ಲಾ ಕೊಟ್ಟು ತೃಪ್ತಿಪಡಿಸಿದನು. ಇಂದ್ರರಾಜನು ತನ್ನ ಪಟ್ಟಾಭಿಷೇಕಕಾಲದ ಸಂತೋಷಕ್ಕಾಗಿ ಮೂರು ಲೋಕದಲ್ಲೂ ಏಳು ದಿವಸದ ತನಕ ಯಾವ ಪ್ರಾಣಿಯೂ ರೋಗ, ಮರಣ, ಮುಪ್ಪುಗಳಿಲ್ಲದೆ ಆನಂದ ಪರಂಪರೆಗಳನ್ನನುಭವಿಸುತ್ತಿರಲೆಂದು ವರಪ್ರದಾನಮಾಡಿದನು.

೨೧. ಮತ್ತು ಆ ಏಳುದಿನಗಳವರಿಗೆ ನರಕದಲ್ಲಿ ಯಾತನೆಪಡುತ್ತಿರುವ ಪಾಪಿಗಳಿಗೆ ಯಾವ ಯಾತನೆಯನ್ನೂ ಕೊಡದಂತೆ ಯಮನಿಗೆ ಅಪ್ಪಣೆಮಾಡಿದನು. (ಈಗಲೂ ರಾಜ್ಯಾಭಿಷೇಕ ಸಮಯದಲ್ಲಿ ಸೆರೆಮನೆಯಲ್ಲಿರುವವರನ್ನು ಬಿಡುಗಡೆಮಾಡಿ ಬಿಡುವುದೂ, ತಪ್ಪಿತಸ್ಥರನ್ನು ಕ್ಷಮಿಸುವುದೂ ಸಹ ವಾಡಿಕೆಯಲ್ಲಿಯೇ ಇದೆ. ಇದೆಲ್ಲವೂ ಪ್ರಾಚೀನಕಾಲದಿಂದ ಬಂದ ಪದ್ಧತಿಗಳು)

ಸರ್ವಂ ಮುದಿತಮೇವಾಸೀತ್ತ್ರೈಲೋಕ್ಯಂ ಸಚರಾಚರಂ ।
ಕಿರೀಟೀ ಸ್ವನುಲಿಪ್ತಾಂಗಃ ಕುಂಡಲೋತ್ತಮಭೂಷಿತಃ ॥ ೨೨ ॥

ಕೌಶೇಯವಸನಸ್ತತ್ರ ಶ್ವೇತಮಾಲ್ಯವಿಭೂಷಣಃ ।
ಶ್ರಿಯಂ ದಧಾರ ಸೋಮಸ್ಯ ಶ್ವೇತಸ್ಥಸ್ಯ ಶತಕ್ರತುಃ ॥ ೨೩ ॥

ಭದ್ರಾಸನಗತಂ ಶಕ್ರಂ ಪ್ರಣೇಮುಃ ಸರ್ವದೇವತಾಃ ।
ಖ್ಯಾಪ್ಯಮಾನೋ ಮಹಾರಾಜ ತದಾ ದೇವೇನ ದಂಡಿನಾ ॥ ೨೪ ॥

ಋಷಯಸ್ತುಷ್ಟುವುಸ್ತಂ ಚ ಗಂಧರ್ವಾಪ್ಸರಸಸ್ತಥಾ ।
ಮಂಗಲಾಲಂಭನಂ ಚಕ್ರೇ ತತಃ ಶಕ್ರಃ ಸುರಾರಿಹಾ ॥ ೨೫ ॥

---

೨೨-೨೩. ಸಚರಾಚರ ಪ್ರಪಂಚವೆಲ್ಲವೂ ದೇವೇಂದ್ರಾಭಿಷೇಕ ಸಮಯದಲ್ಲಿ ಬಹಳ ಸಂತೋಷದಿಂದಿತ್ತು. ತನ್ನ ತಲೆಯ ಮೇಲೆ ಅಮೋಘವಾದ ಕಿರೀಟವನ್ನು ಧರಿಸಿ, ಸರ್ವಾಂಗಗಳಿಗೂ ದಿವ್ಯಗಂಧಾನುಲೇಪನವನ್ನು ಮಾಡಿಕೊಂಡಿದ್ದ, ಕಿವಿಗಳೆರಡರಲ್ಲಿಯೂ ದಿವ್ಯಕುಂಡಲಗಳನ್ನು ಧರಿಸಿಕೊಂಡಿದ್ದ ಆ ದೇವೇಂದ್ರನು ಜರತಾರಿ (ರೇಷ್ಮೆಕಲಾಬತ್ತು)ಯ ಬಲು ಸೊಗಸಾದ ವಸ್ತ್ರಗಳನ್ನು ಧರಿಸಿ, ಕತ್ತಿಗೆ ಶುಭ್ರವಾದ ಹಾರಗಳನ್ನು ಹಾಕಿಕೊಂಡಿದ್ದುದನ್ನು ನೋಡಿದರೆ, ಶ್ವೇತಪರ್ವತದಲ್ಲಿ ವಾಸವಾಗಿರುವ ಚಂದ್ರನೇನಾದರೂ ಬಂದು ಕುಳಿತುಕೊಂಡಿರುವನೋ ಎಂಬ ಭ್ರಮೆ ಹುಟ್ಟುವಂತೆ ದೇವೇಂದ್ರನು ಕಂಗೊಳಿಸುತ್ತಿದ್ದನು.

೨೪. ಭದ್ರಸಿಂಹಾಸನದೊಳ್ ರಾರಾಜಿಸುತ್ತಲಿದ್ದ ಅಮರರೊಡೆಯನನ್ನು ಸಕಲ ದೇವತೆಗಳೂ ಮುಂದೆ ಬಂದು ನಮಸ್ಕರಿಸಿದರು. ಆ ಸಮಯದಲ್ಲಿ ದಂಡಧಾರಿಯಾದ ನಂದಿಯೊಬ್ಬನು ದೇವೇಂದ್ರನ ಮುಂದೆ ಪರಾಕನ್ನು ಹೇಳುತ್ತಾ, ತ್ರಿಲೋಕವಿಜಯಿಯಾದ ದೇವೇಂದ್ರನ ಖ್ಯಾತಿಯನ್ನು ಉಚ್ಚಸ್ವರದಿಂದ ಹೇಳುತ್ತಿದ್ದನು.

೨೫. ಆ ಸಮಯದಲ್ಲಿ ಋಷಿಗಳೂ, ಗಂಧರ್ವರೂ, ಅಪ್ಸರರುಗಳೂ ಸಹ ಇಂದ್ರನನ್ನು ವಿಶೇಷವಾಗಿ ಹೊಗಳಿದರು. ದೈತ್ಯಕುಲಾಂತಕನಾದ ಆ ದೇವರಾಜನು ಆ ಸಮಯದಲ್ಲಿ ಸಕಲ ಮಂಗಳವಸ್ತುಗಳನ್ನೂ ನೋಡಿ, ಮಂಗಳಾಲಂಭನ ಕರ್ಮವನ್ನು ಮಾಡಿದನು.

**ಪೂರ್ಣಕುಂಭಂ ಸುಮನಸೋ ರತ್ನಾನ್ಯಾಜ್ಯಂ ತಥಾ ದಧಿ ।**
**ಫಲಾನಿ ಶ್ರೀಫಲಂ ಚೈವ ಉದ್ಭೂತಾನಿ ವಸುಂಧರಾ ॥ ೨೬ ॥**

**ಸ್ವಸ್ತಿಕಾನ್ರುಚಿರಾಂಶ್ಚೈವ ನಂದ್ಯಾವರ್ತಾಂಶ್ಚ ಕಾಂಚನಂ ।**
**ಕಾಂಚನೋಲ್ಲಿಖಿತಾಶ್ಚೈವ ಯಾಶ್ಚ ಮುಖ್ಯಾಃ ಸರಿದ್ವರಾಃ ॥ ೨೭ ॥**

**ಉದಗ್ದಾನಂ ತಥಾ ದೂರ್ವಾಂ ದರ್ಪಣಂ ಚಾಜ್ಯಮೇವ ಚ ।**
**ಧರ್ಮಃ ಸತ್ಯಂ ಚ ಶೀಲಂ ಚ ಬಲಂ ಚ ಯದುನಂದನ ॥ ೨೮ ॥**

**ಉಪಾಸಂತ ಮಹಾಭಾಗಂ ಸಶರೀರಾಃ ಶತಕ್ರತುಂ ।**
**ಕಾಂತಿರ್ಲಕ್ಷ್ಮೀರ್ಧೃತಿಃ ಶ್ರದ್ಧಾ ಪುಷ್ಟಿರ್ಮೇಧಾ ಕ್ರಿಯಾ ಮತಿಃ ॥ ೨೯ ॥**

**ಬುದ್ಧಿರ್ಲಜ್ಜಾ ವಪುಃ ಶಾಂತಿರನಸೂಯಾ ತಥೈವ ಚ ।**
**ಉಪಾಸಂತ ತದಾ ದೇವಂ ಸರ್ವರಾಜೇಶ್ವರಂ ವಿಭುಂ ॥ ೩೦ ॥**

---

೨೬. ಆ ಮಂಗಳಾಲಂಭನ ಕ್ರಮವೆಂತೆಂದರೆ :—ದೇವತೆಗಳು ಪೂರ್ಣ ಕುಂಭವನ್ನೂ. ಬಳಿಕ ವಿವಿಧ ಫಲಗಳನ್ನೂ, ಆಗ ತಾನೇ ತೊಟ್ಟುಬಿಟ್ಟ ಬಿಲ್ವಪತ್ರೆ ಹಣ್ಣನ್ನು ಭೂದೇವಿಯೂ ಸಹ ಮುಂದೆ ತಂದು ಹಿಡಿದಳು.

೨೭. ಮನೋಹರವಾದ ಸರ್ವತೋಭದ್ರಮಂಟಪವನ್ನೂ, ನಂದ್ಯಾವರ್ತ ಪುಷ್ಪಗಳನ್ನೂ, ಚಿನ್ನದ ರೇಕುಗಳನ್ನೂ, ರಂಗವಲ್ಲಿಯ ಹಸೆಗಳನ್ನೂ, ಮೊಸರಿನ ಪಾತ್ರೆಯನ್ನೂ ಇಂದ್ರನು ನಿರೀಕ್ಷಿಸಿದನು.

೨೮ ಸಕಲ ಮಹಾನದಿಗಳೂ ಶರೀರವನ್ನು ಧರಿಸಿ ಉದಕುಂಭ ಪಾತ್ರೆಗಳಲ್ಲಿ ತಮ್ಮ ತಮ್ಮ ಪವಿತ್ರತೀರ್ಥಗಳನ್ನು ತಂದು ತೋರಿಸಿದುವು. ಹುಲ್ಲುಗರಿಕೆ, ಕನ್ನಡಿ, ತುಪ್ಪಗಳನ್ನು ಇಂದ್ರನು ಸಂದರ್ಶನಮಾಡಿದನು. ಆ ಸಮಯದಲ್ಲಿ ಧರ್ಮವೂ, ಸತ್ಯವೂ, ಶೀಲವೂ, ಬಲವೂ ಸಹ ಸಶರೀರವಾಗಿ ಬಂದು ಇಂದ್ರನನ್ನೋಲೈಸಿದವು.

೨೯-೩೦. ಸಕಲ ರಾಜರಾಜೇಶ್ವರ (ತ್ರಿಲೋಕ ಚಕ್ರವರ್ತಿ) ಮೂರ್ತಿಯಾದ ಮಹಾಪ್ರಭುವಾದ ಇಂದ್ರನನ್ನು ಕಾಂತಿಯೂ, ಲಕ್ಷ್ಮಿಯೂ, ಧೃತಿ, (ಧೈರ್ಯ) ಯೂ, ಶ್ರದ್ಧೆಯೂ, ಪುಷ್ಟಿಯೂ, ಮೇಧೆಯೂ, ಕ್ರಿಯೆಯೂ, ಮತಿಯೂ, ಬುದ್ಧಿಯೂ, ಲಜ್ಜೆಯೂ, ಶಾಂತಿಯೂ, ಅನಸೂಯೆಯೂ ಸಹ ಮನೋಹರವಾದ ಸೌಂದರ್ಯ ಶರೀರವಂ ಧರಿಸಿ ಓಲೈಸಿದರು.

ತತೋ ವವಂದೇ ಪಿತರಂ ಮಾತರಂ ಶಂಕರಂ ಹರಿಂ ।
ಬ್ರಹ್ಮಾಣಂ ವರದಂ ಸೌಮ್ಯಮೃಷೀಂಶ್ಚ ಯದುನಂದನ ॥ ೩೧ ॥

ತತೋ ರಥೇನ ಶುಕ್ರೇಣ ಸ ತು ಮಾತಲಿಯಂತ್ರಿಣಾ ।
ವಿನಾಶಯಾಮಾಸ ರಣೇ ದೇವತಾನಾಮರಾತಯಃ ॥ ೩೨ ॥

ಪಾಲಯಾಮಾಸ ಸಕಲಂ ತಥೈವ ಚ ಜಗತ್ತ್ರಯಂ ।
ಶಕ್ರಾಭಿಷೇಕಮೇತತ್ತೇ ಕಥಿತಂ ಯದುನಂದನ ॥ ೩೩ ॥

ಶ್ರೋತವ್ಯಮಭಿಷೇಕಂ ತು ಯಾತ್ರಾಕಾಲೇಷು ಚಾಪ್ಯಥ ।
ಗೃಹಪ್ರವೇಶೇ ವೈವಾಹ್ಯೇ ಪುಣ್ಯಾಹೇಷು ಪರೇಷು ಚ ॥ ೩೪ ॥

---

೩೧. ಬಳಿಕಲಾ ದೇವೇಂದ್ರನು ಸಿಂಹಾಸನದಿಂದಿಳಿದು ಮಾತಾಪಿತೃಗಳನ್ನೂ, ಈಶ್ವರನನ್ನೂ, ವಿಷ್ಣುವನ್ನೂ, ಬ್ರಹ್ಮನನ್ನೂ, ವರಪ್ರದನಾದ ಬುಧನನ್ನೂ, ಸಕಲ ಮಹರ್ಷಿಗಳನ್ನೂ ವಂದಿಸಿದನು.

೩೨. ಅನಂತರದಲ್ಲಾ ಇಂದ್ರನು ಒಂದು ಧವಳರಥವನ್ನೇರಿ ಕುಳಿತನು. ಅದನ್ನು ಮಾತಲಿಯು ನಡೆಸಿದನು. ಆ ರಥದಲ್ಲಿ ಕುಳಿತು ಹೊರಟ ಇಂದ್ರನು ದೇವಶತ್ರುಗಳನ್ನೆಲ್ಲಾ ನಿರ್ಮೂಲವಮಾಡಿದನು.

೩೩. ಈ ಕ್ರಮದಿಂದ ನಿಷ್ಕಂಟಕವಾಗಿ ಮಾಡಲ್ಪಟ್ಟ ತ್ರಿಲೋಕ (ಸ್ವರ್ಗ, ಮರ್ತ್ಯ, ಪಾತಾಳ) ವನ್ನೂ ಸಹ ಇಂದ್ರನು ಪರಿಪಾಲಿಸುತ್ತಾ ಸುಖವಾಗಿ ವಾಸಮಾಡಿ ಕೊಂಡಿದ್ದನು. ಎಲೈ ವಜ್ರರಾಜೇಂದ್ರನೇ! ಈ ಪರಮಪವಿತ್ರವಾದ ಇಂದ್ರ ಪಟ್ಟಾಭಿಷೇಕ ವೃತ್ತಾಂತವನ್ನು ನಿನಗೆ ಹೇಳಿರುತ್ತೇನೆ.

೩೪. ಯಾರಾದರೂ ವಿಜಯಯಾತ್ರೆ ಹೊರಟಾಗ, ಅಥವಾ ಮಂಗಳಕಾರ್ಯಕ್ಕೆ ಹೊರಟಾಗ, ಅಥವಾ ಗೃಹಪ್ರವೇಶ ಸಮಯದಲ್ಲಿ, ವಿವಾಹಸಮಯದಲ್ಲಿ, ಪುಣ್ಯಾಹ (ಮಂಗಳ) ಕಾಲದಲ್ಲಿ, ಇತರ ಶುಭ ಸಮಯಗಳಲ್ಲಿ, ಇಂದ್ರನ ಈ ಪಟ್ಟಾಭೀಕ ಚರಿತ್ರೆ ಯನ್ನು ಕೇಳಿದರೆ, ಸಕಲಾರ್ಥಸಿದ್ಧಿಯಾಗುವುದು.

ಏತತ್ಪವಿತ್ರಂ ಮಂಗಲ್ಯಂ ಧನ್ಯಂ ಶ್ರುತಿಸುಖಾವಹಂ ।
ಪಾಪಾಽಲಕ್ಷ್ಮೀಪ್ರಶಮನಂ ದುಃಸ್ವಪ್ನಕಿಲ್ಬಿಷಾಪಹಂ ॥ ೩೫ ॥

ಪುಣ್ಯಾಹಕಾಲೇಷು ನರೇಂದ್ರಚಂದ್ರ
ಶ್ರುತ್ವಾಽಭಿಷೇಕಂ ಬಲಸೂದನಸ್ಯ ।
ಧರ್ಮಾರ್ಥಕಾಮಾನ್ಪುರುಷಾ ಲಭಂತೇ
ವ್ಯಾಧಿಪ್ರಣಾಶಂ ಚ ಯಶಸ್ತಥಾಽಗ್ರ್ಯಂ ॥ ೩೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶಕ್ರಾಭಿಷೇಕೋನಾಮ ಪಂಚಾಶದುತ್ತರ
ದ್ವಿಶತತಮೋಽಧ್ಯಾಯಃ.

---

೩೫. ಈ ಇಂದ್ರಾಭಿಷೇಕ ವೃತ್ತಾಂತವು ಪರಮಪವಿತ್ರವಾದುದು. ಮಂಗಳ ಪ್ರದವಾದುದು. ಕೇಳುವುದಕ್ಕೆ ಬಹು ಇಂಪಾಗಿರುವುದು. ಕೇಳಿದವರನ್ನು ಧನ್ಯರನ್ನಾಗಿಮಾಡುವುದು. ಪಾಪಗಳನ್ನೂ, ಅಮಂಗಳಗಳನ್ನೂ ನಾಶಗೊಳಿಸತಕ್ಕದು. ದುಸ್ಸ್ವಪ್ನದೋಷವನ್ನೂ ಪಾಪೋಪಪಾಪಗಳನ್ನೂ ಧ್ವಂಸಮಾಡತಕ್ಕದು.

೩೬. ಎಲೈ ವಜ್ರನರಪತಿಯೇ! ಈಗ ನಾನು ನಿನಗೆ ಹೇಳಿದ ಇಂದ್ರಾಭಿಷೇಕದ ಚರಿತ್ರೆಯನ್ನು ಯಾರು ಪುಣ್ಯಾಹ (ಮಂಗಳ) ಕಾರ್ಯಗಳಲ್ಲಿ ಹೇಳಿಸುವರೋ ಅದನ್ನಾರು ಕೇಳುವರೋ ಅಂಥ ಮಹಾನುಭಾವರೆಲ್ಲರೂ ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳನ್ನು ಖಂಡಿತವಾಗಿ ಹೊಂದುತ್ತಾರೆ. (ಅನುಭವಿಸುತ್ತಾರೆ.) ಇದನ್ನು ಕೇಳಿದ ರೋಗಿಗಳು ತಮ್ಮ ರೋಗಬಾಧೆಯನ್ನು ಕಳೆದುಕೊಂಡು, ಆರೋಗ್ಯಭಾಗ್ಯವನ್ನು ಹೊಂದುತ್ತಾರೆ. ಮತ್ತು ಪರಮಪವಿತ್ರವಾದ ಕೀರ್ತಿಯನ್ನೂ ಸಹ ಹೊಂದಿ ಎಲ್ಲರ ಕೈಮೇಲಾಗಿ ಬದುಕುತ್ತಾರೆ. ಹೀಗೆಂದು ವಜ್ರನೊಡನೆ ಮಾರ್ಕಂಡೇಯರು ಹೇಳಿದರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ದೇವೇಂದ್ರ ಪಟ್ಟಾಭಿಷೇಕವೆಂಬ ಹೆಸರಿನ
ಇನ್ನೂರೈವತ್ತನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

---

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ ಏಕಪಂಚಾಶದುತ್ತರದ್ವಿಶತತಮೋಽಧ್ಯಾಯಃ

---

॥ ವಜ್ರ ಉವಾಚ ॥

ಪುಲಹಸ್ಯ ಪ್ರಜಾಸರ್ಗಂ ಶ್ರುತ್ವಾ ಗಂಧರ್ವರಾಟ್ ತದಾ ।
ಪಪ್ರಚ್ಛ ಕಿಂ ತದಾ ಭೂಯಸ್ತತ್ರ ನಾಡಾಯನಂ ದ್ವಿಜಂ ॥ ೧ ॥

ಶ್ರೋತ್ರಾಮೃತಂ ಕಥಯತೋ ಸಂದಸ್ಯಾಪಿ ತವಾನಘ ।
ತ್ವಂ ಹಿ ಜ್ಞಾನನಿಧಿರ್ವಿಪ್ರೈಃ ಪ್ರೋಚ್ಯಸೇ ವೇದಪಾರಗೈಃ ॥ ೨ ॥

---

### ಇನ್ನೂರೈವತ್ತೊಂದನೆಯ ಅಧ್ಯಾಯವು.

೧. ವಜ್ರಮಹಾರಾಜನು ಪ್ರಶ್ನೆಮಾಡುತ್ತಾನೆ:—ಎಲೈ ಮಾರ್ಕಂಡೇಯ ಮಹಾಮುನಿಯೇ, ಪುಲಹಬ್ರಹ್ಮನಿಂದುತ್ಪನ್ನವಾದ ಪ್ರಜಾಸೃಷ್ಟಿಯನ್ನು ಕೇಳಿದ ಬಳಿಕ ಗಂಧರ್ವರಾಜನಾದ ಶೈಲೂಷನು ನಾಡಾಯನಋಷಿಯನ್ನು ಕುರಿತು, ಇನ್ನಾವ ವೃತ್ತಾಂತವನ್ನು ಪ್ರಶ್ನೆಮಾಡಿದನೆಂಬುದನ್ನು ತಿಳಿಸು.

೨. ನೀನು ವೇದವಿದ್ಯಾಪಾರಂಗತರಾದ ತಪೋನಿಧಿಗಳಾದ ಬ್ರಾಹ್ಮಣರ ಗುಂಪಿನಲ್ಲೆಲ್ಲಾ ಅಗ್ರಗಣ್ಯನೂ ಜ್ಞಾನನಿಧಿಯೂ ಆಗಿರುತ್ತೀಯೆ! ನೀನು ಆನಂದದಿಂದ ಹೇಳುತ್ತಿರುವ ಶ್ರೋತ್ರಾಮೃತಪ್ರಾಯವಾದ ವಿವಿಧವೃತ್ತಾಂತಗಳನ್ನು ಕೇಳುತ್ತಾ ಕೇಳುತ್ತಾ ನನಗೆ ಕುತೂಹಲವು ಬಹಳವಾಗಿ ಹೆಚ್ಚುತ್ತಾ ಬರುತ್ತಲಿದೆ.

॥ ಮಾರ್ಕಂಡೇಯ ಉವಾಚ ॥
ಪುಲಹಸ್ಯ ಪ್ರಜಾಸರ್ಗಂ ಶ್ರುತ್ವಾ ಗಂಧರ್ವಸತ್ತಮಃ ।
ಭೂಯಃ ಪಪ್ರಚ್ಛ ತಂ ವಿಪ್ರಂ ಗಜೋತ್ಪತ್ತಿಂ ಸವಿಸ್ತರಂ ॥ ೩ ॥

॥ ಶೈಲೂಷ ಉವಾಚ ॥
ಕುಂಜರಾಣಾಂ ಸಮುತ್ಪತ್ತಿಂ ಶ್ರೋತುಮಿಚ್ಛಾಮಿ ವಿಸ್ತರಾತ್ ।
ಕುಂಜರಾ ಹಿ ಮಹಾಭಾಗ ಭೃಶಂ ಚ ದಯಿತಾ ಮಮ ॥ ೪ ॥

॥ ನಾಡಾಯನ ಉವಾಚ ॥
ಯದಾ ಪ್ರಸೂತಾ ಮಾರ್ತಾಂಡಮದಿತಿರ್ಭಾಸ್ಕರಾರಣಿಃ ॥ ೫ ॥

ತದಾ ತದಂಡಮುತ್ಪಾದ್ಯ ದೃಷ್ಟವಾನ್ಕಶ್ಯಪಃ ಸ್ವಯಂ ।
ತೇಜೋಽಧಿಕತ್ವಾದಂಡಸ್ಥಂ ನಾಪಶ್ಯತ ಯದಾ ಶಿಶುಂ ॥ ೬ ॥

---

೩. ವಜ್ರಮಹಾರಾಜನ ಮಾತನ್ನು ಕೇಳಿ ಮಾರ್ಕಂಡೇಯ ನಿಂತೆಂದನು. ಆ ಗಂಧರ್ವಶ್ರೇಷ್ಠನಾದ ಶೈಲೂಷನು ಪುಲಹನಿಂದುತ್ಪತ್ತಿಯಾದ ಪ್ರಜಾಸೃಷ್ಟಿಗಳನ್ನು ಕೇಳಿ, ಆ ಬ್ರಾಹ್ಮಣೋತ್ತಮನಾದ ನಾಡಾಯನನನ್ನು ಕುರಿತು, ಆನೆಗಳು ಉತ್ಪತ್ತಿಯಾದ ಬಗೆಯನ್ನು ವಿಸ್ತಾರವಾಗಿ ತಿಳಿಸಬೇಕೆಂದು ಪ್ರಶ್ನೆಮಾಡಿದನು.

೪. ಶೈಲೂಷನು ಕೇಳುತ್ತಾನೆ:—ಎಲೈ ನಾಡಾಯನನೇ! ಆನೆಗಳು ಉತ್ಪತ್ತಿಯಾದ ಕ್ರಮವನ್ನು ನೀನು ನನಗೆ ಸ್ವಲ್ಪ ಚೆನ್ನಾಗಿಯೇ ಬಿಡಿಸಿ ಹೇಳಬೇಕಯ್ಯ! ನನಗೆ ಆನೆಗಳೆಂದರೆ ಬಲು ಆಶೆ. ಏಕೆಂದರೆ, ಗಂಧರ್ವರಾದ ನಾವೆಲ್ಲರೂ ಗಜವಾಹನರಾದ್ದರಿಂದ ನಿನಗೆ ಈ ವಿಚಾರವನ್ನು ಸ್ವಲ್ಪ ಹೆಚ್ಚಾಗಿ ಹೇಳೆಂದು ಕೇಳುತ್ತೇನೆ.

೫-೬. ನಾಡಾಯನನು ಪ್ರತ್ಯುತ್ತರ ಹೇಳುತ್ತಾನೆ:—ಅದಿತಿದೇವಿಯು ಸೂರ್ಯನನ್ನು ಹೆತ್ತ ಬಳಿಕ ಮತ್ತೊಂದು ಅದೇ ವಿಧವಾದ ತೇಜಸ್ಸುಳ್ಳ ಮಾರ್ತಂಡ (ಅಂಡ-ಮೊಟ್ಟೆಯನ್ನು) ಹೆತ್ತಳು. ಆ ಮೊಟ್ಟೆಯು ಅವಳ ಹೊಟ್ಟೆಯಿಂದ ಹೊರಬಿದ್ದೊಡನೆಯೇ ಕಶ್ಯಪಬ್ರಹ್ಮನು ಆ ಗುಂಡಾದ ಮೊಟ್ಟೆಯನ್ನು ತನ್ನ ಕೈಗೆ ತೆಗೆದುಕೊಂಡು ನೋಡಲಾಗಿ ಅದು ಮಹಾಪ್ರಕಾಶಮಾನವಾಗಿ (ಕೆಂಡದುಂಡೆಯಂತೆ) ಬೆಳಗುತ್ತಿದ್ದುದರಿಂದ ಅದನ್ನು ಕಣ್ಣಿನಿಂದ ನೋಡುವುದಕ್ಕೇ ಕಷ್ಟವಾಗಿ ಅದರೊಳಗಿನ ಮಗುವು ಹೇಗಿದೆಯೆಂಬುದನ್ನು ತಿಳಿಯಲಾರದೆ ಹೋದನು.

ಉವಾಚ ದೇವ್ಯಾ ಅಂಡೇऽಸ್ಮಿನ್ನಿಮುಸೌ ಬಾಲಕೋ ಮೃತಃ ।
ತತಃ ಸ ಭಾಸಃ ಸಕಲಂ ತೇಜಸಾಭಾಸಯಜ್ಜಗತ್ ॥ ೭ ॥

ತೇನ ಮಾರ್ತಾಂಡತಾऽಭ್ಯಾऽಸ್ಯ ಕಥಿತಾ ದ್ವಿಜಸತ್ತಮೈಃ ।
ತತಸ್ತ್ವಂಡಕಪಾಲೇ ದ್ವೇ ಗೃಹೀತ್ವಾ ತು ಪ್ರಜಾಪತಿಃ ॥ ೮ ॥

ಪೃಥಕ್ಪೃಥಗವಸ್ಥಾಪ್ಯ ರಥಂತರಮಗಾಯತ ।
ಮಂದಃ ಪ್ರವೇಶಯಾಮಾಸ ಇರಾಯಾಸ್ತಾ ಪ್ರಜೇಪ್ಸಯಾ ॥ ೯ ॥

ಉದರೇ ಪುಲಹಾತ್ತೇನ ಜನಯಾಮಾಸ ಸಾ ಗಜಾನ್ ।
ಅಷ್ಟೌ ಮಹಾಬಲಾನ್ನಾಗಾಂಸ್ತೇಷಾಂ ನಾಮಾನಿ ಮೇ ಶೃಣು ॥ ೧೦ ॥

---

೭. ಮತ್ತು ಒಂದರಗಳಿಗೆ ಸುಮ್ಮನಿದ್ದು ಹೇಳಿದುದೇನೆಂದರೆ:-ಅದಿತಿದೇವಿಯು ಹೊಟ್ಟೆಯಲ್ಲಿ ಹುಟ್ಟಿದ ಈ ಮೊಟ್ಟೆಯೊಳಗೆ ಏನೋ ಒಂದು ಮಗುವಿರುವಂತೆಯೂ, ಅದು ಸತ್ತುಹೋಗಿರುವಂತೆಯೂ ಕಾಣುತ್ತಲಿದೆಯೆಂದು ಹೇಳುತ್ತಾ ಇರುವಲ್ಲಿ ಆ ಮೊಟ್ಟೆಯು ಪ್ರಕಾಶವು ಪರಮೋತ್ಕೃಷ್ಟವಾದ ದೇದೀಪ್ಯಮಾನವಾದ ತೇಜಸ್ಸಿನಿಂದ ಬೆಳಗುತ್ತಾ ಮೂರು ಲೋಕವನ್ನೂ ಪ್ರಸರಿಸಿಬಿಟ್ಟಿತು.

೮. ಮೂರು ಲೋಕವನ್ನೂ ಬೆಳಗಿಸಿದುದರಿಂದ ಆ ಅಂಡವನ್ನು ಮಾರ್ತಾಂಡವೆಂದು ಬ್ರಾಹ್ಮಣರು ಹೆಸರಿಟ್ಟು ಕರೆದರು. ಆ ಬಳಿಕ ಪುಲಹಬ್ರಹ್ಮನು ಆ ಮೊಟ್ಟೆಯನ್ನೆರಡು ಪಾಲುಮಾಡಿ ಅವುಗಳನ್ನು ತನ್ನೆರಡು ಕೈಗಳಿಂದಲೂ ಹಿಡಿದುಕೊಂಡನು.

೯. ಹೀಗೆ ಹಿಡಿದುಕೊಂಡ ಈ ಅಂಡಗಳೆರಡನ್ನೂ ಬೇರೆ ಬೇರೆಯಾಗಿ ಇರಿಸಿ ಅವುಗಳನ್ನು ರಥಂತರಸಾಮ (ಸಾಮವೇದದಲ್ಲಿ ಹೇಳಿರುವ ಒಂದು ಗಾನ) ದಿಂದ ಸ್ತೋತ್ರಮಾಡಿದನು. ಈರೀತಿ ಸ್ತುತಿಮಾಡಿದ ಬಳಿಕ ಆ ಎರಡು ಪಾಲನ್ನೂ ಬೇರೆ ಬೇರೆ ಮಕ್ಕಳಾಗಿ ಹುಟ್ಟಲೆಂದು ಇರಾದೇವಿಯು ಗರ್ಭದಲ್ಲಿ ಪ್ರವೇಶಮಾಡಿಸಿದನು.

೧೦. ಈರೀತಿ ಎರಡು ಅಂಡಗಳೂ ಇರೆಯು ಹೊಟ್ಟೆಯಲ್ಲಿ ಪುಲಹನಿಂದ ಪ್ರವೇಶಮಾಡಿಸಲ್ಪಟ್ಟ ಬಳಿಕ, ಆಕೆಯು ಗರ್ಭವು ಪ್ರವೃದ್ಧವಾಗಿ ಆ ಗರ್ಭದಿಂದಲೇ ಗಜಗಳು ಹುಟ್ಟಿದುವು. ಆ ಗಜಗಳನ್ನೆಣಿಸಲಾಗಿ ಅಲ್ಲಿ ಎಂಟು ಮಹಾಬಲಶಾಲಿಗಳಾದ ಆನೆಗಳಿದ್ದುವು.

ಐರಾವಣಸ್ತಥಾ ಪದ್ಮಃ ಪುಷ್ಪದಂತಶ್ಚ ವಾಮನಃ ।
ಸುಪ್ರತೀಕೋಂಜನೋ ನೀಲಃ ಕುಮುದಶ್ಚ ಮತಂಗಜಃ ॥ ೧೧ ॥

ಶಕ್ರಾದ್ಯಾನಾಂ ದಿಗೀಶಾನಾಂ ಯಥಾ ಸಂಖ್ಯೇನ ವಾಹನಾಃ ।
ಚತ್ವಾರೋ ಜಾತಯಸ್ತೇಷಾಮೇಕೈಕಸ್ಯಾನ್ವಯೇ ಸ್ಮೃತಾಃ ॥ ೧೨ ॥

ಭದ್ರಾ ಮಂದಾ ಮೃಗಾ ಚೈವ ಸಂಕೀರ್ಣಾ ಚ ಜನಾಧಿಪ ।
ಭದ್ರಾ ಶ್ರೇಷ್ಠಾ ಭವೇತ್ತಾಸಾಂ ಮಂದಾ ಮಧ್ಯಾ ಕನೀಯಸೀ ॥ ೧೩ ॥

ಮೃಗಾ ಜ್ಞೇಯಾ ಚ ಬಾಹುಲ್ಯಾತ್ಸಂಕೀರ್ಣಾ ಪಾರ್ಥಿವೋತ್ತಮ ।
ಭದ್ರಮಂದಮೃಗಾಣಾಂ ಚ ತಥಾ ವಕ್ಷ್ಯಾಮಿ ಲಕ್ಷಣಂ ॥ ೧೪ ॥

---

೧೧. ಆ ಎಂಟು ಆನೆಗಳ ಹೆಸರನ್ನು ಹೇಳುತ್ತೇನೆ, ಕೇಳು.—ಐರಾವಣ (ತ), ಪದ್ಮ, ಪುಷ್ಪಗಂತ, ವಾಮನ, ಸುಪ್ರತೀಕ, ಅಂಜನ, ನೀಲ, ಕುಮುದ, ಇವೇ ಆ ಅಷ್ಟದಿಗ್ಗಜಗಳು.

ಟಿಪ್ಪಣಿ:—ಅಮರದಲ್ಲಿ ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕವೆಂದು ಅಷ್ಟದಿಗ್ಗಜಗಳ ಹೆಸರನ್ನು ಹೇಳಿರುತ್ತಾರೆ. ಇದು ಪಾಠಾಂತರವಿರಬಹುದೆಂದು ಊಹಿಸಲಾಗಿದೆ. ಬೇರೆ ಬೇರೆ ಪುರಾಣಗಳಲ್ಲಿ ಬೇರೆ ಬೇರೆ ಪದಗಳಿರಬಹುದು. ಸ್ವಲ್ಪ ನಾಮವ್ಯತ್ಯಾಸವಿರುವುದರಿಂದ ಈ ವಿಚಾರವನ್ನು ಪ್ರಸಕ್ತಿಮಾಡಲಾಗಿದೆ.

೧೨. ಈ ಎಂಟು ಆನೆಗಳೂ ಸಹ ಇಂದ್ರಾದ್ಯಷ್ಟದಿಕ್ಪಾಲಕರ ವಾಹನಗಳಾಗಿ ಅವರವರ ಬಳಿಯಲ್ಲಿ ನೆಲಸಿದುವು. ಈ ಎಂಟು ವಿಧ ಹೆಸರುಳ್ಳ ಆನೆಗಳಲ್ಲಿ ಪ್ರತಿಯೊಂದರ ವಂಶದಲ್ಲೂ ನಾಲ್ಕು ನಾಲ್ಕು ಜಾತಿ ಆನೆಗಳವೆ.

೧೩. ಈ ನಾಲ್ಕುಜಾತಿಗೂ ಭದ್ರಾ, ಮಂದಾ, ಮೃಗಾ, ಸಂಕೀರ್ಣಾ ಎಂದು ಹೆಸರು. ಈ ನಾಲ್ಕು ಜಾತಿಗಳೊಳಗೆ ಭದ್ರಾಜಾತಿಯ ಆನೆಯು ಪರಮಶ್ರೇಷ್ಠವಾದುದು. (ಈ ಜಾತಿಯ ಆನೆಯೇ ಪಟ್ಟದಾನೆಯಾಗಲು ಯೋಗ್ಯವಾದುದು.) ಮಂದಾಜಾತಿಯ ಆನೆಯು ಮಧ್ಯಸ್ಥವಾದುದು. ಮೃಗಾಜಾತಿಯ ಆನೆಯು ಕನಿಷ್ಠವಾದುದು.

೧೪. ಉಳಿದ ಎಲ್ಲಾ ವಿಧವಾದ ಅನೇಕ ಸಂಖ್ಯಾಕವಾಗಿ ನಾವು ನೋಡುತ್ತಲಿರುವ ಸಾಮಾನ್ಯವಾದ ಆನೆಗಳೆಲ್ಲವೂ ಸಂಕೀರ್ಣಜಾತಿಯ ಆನೆಗಳೆಂದು ತಿಳಿದುಕೊಳ್ಳಬೇಕು.

ಸಂಕೀರ್ಣಾನಾಂ ಚ ಸಂಕೀರ್ಣಂ ಲಕ್ಷಣಂ ಭಣಿತಾ ತಥಾ ।
ಗೂಢೋಷ್ಮಮಸ್ತಕಃ ಸ್ವಕ್ಷಃ ಪೃಥ್ವಾಯತಮುಖಾಂಗುಲಿಃ ॥ ೧೫ ॥

ಉದಗ್ರಶ್ಚೋಗ್ರಸತ್ತ್ವಶ್ಚ ಸಮಸಾಧ್ಯೋ ಮಹಾಕರೀ ।
ತಾಮ್ರತಾಲ್ವೀಕ್ಷಣಃ ಸ್ನಿಗ್ಧಃ ಸಹಿಷ್ಣುಃ ಸ್ವಾಸನಸ್ತಥಾ ॥ ೧೬ ॥

ಅನ್ವರ್ಥವೇದೀ ಬಲವಾನ್ಭದ್ರೋ ಜ್ಞೇಯೋ ಮತಂಗಜಃ ।
ಗಭೀರವೇದೀ ನಿಃಶಂಕಸ್ತೀಕ್ಷ್ಣಸಾಧ್ಯೋ ಮಹೋದರಃ ॥ ೧೭ ॥

ದೀರ್ಘಮೇಢ್ರಾಂಗುಲಿಶ್ಚೈವ ಸುವಿಭಕ್ತಶಿರೋಧರಃ ।
ಸ್ಥಿರಃ ಕಚಬಲಃಸ್ಥೂಲೋ ದೀರ್ಘಬಾಲಧಿಪುಷ್ಕರಃ ॥ ೧೮ ॥

ಪರ್ಯಕ್ಷಃ ಸೂಕ್ಷ್ಮನಾಭಿಶ್ಚ ಮಂದೋ ಜ್ಞೇಯೋ ಮತಂಗಜಃ ।
ಹ್ರಸ್ವಃ ಶುಷ್ಕಾವಟುಹನುರ್ಭೀರುರ್ಬಹ್ವಾಶನಸ್ತಥಾ ॥ ೧೯ ॥

---

೧೫. ಈಗ ನಾನು ಮೇಲೆ ವಿವರಿಸಿದ ಭದ್ರ, ಮಂದ, ಮೃಗ, ಸಂಕೀರ್ಣಗಳೆಂಬ ಹೆಸರಿನ ಆನೆಗಳ ಲಕ್ಷಣವನ್ನೂ, ಆ ಸಂಕೀರ್ಣಕ್ಕಿಂತ ಸಂಕೀರ್ಣಜಾತಿಯ ಆನೆಗಳ ಲಕ್ಷಣವನ್ನೂ ಮುಂದೆ ವಿವರಿಸುವೆನು.

೧೬. ಭದ್ರಗಜ (ಪಟ್ಟದಾನೆ) ದ ಲಕ್ಷಣವೇನೆಂದರೆ :—ಗುಪ್ತವಾದ ತುಟಿ ಮತ್ತು ಕಂಠವನ್ನುಳ್ಳುದಾಗಿ ಚೆಳ್ಳಗೆ ಬಿಳುಪಾಗಿಯೂ, ದಪ್ಪನಾಗಿಯೂ ಅಗಲವಾಗಿಯೂ ಇರುವ ಮುಖವನ್ನುಳ್ಳುದಾಗಿ, ಬಲು ವೇಗವಾಗಿಯೂ, ಭಯಂಕರ ಬಲದಿಂದಲೂ ಕೂಡಿ, ಸಾಮೋಪಾಯದಿಂದ ಮಾತ್ರವೇ ಸ್ವಾಧೀನವಾಗುವ ಸ್ವಭಾವವನ್ನುಳ್ಳುದೇ ಭದ್ರಗಜವೆನಿಸುವುದು. ಮತ್ತು ಇದರ ಲಕ್ಷಣವೇನೆಂದರೆ :—

೧೭. ಕೆಂಪಗಿರುವ ತುಟಿ, ಕೆಂಪಾದ ಕಣ್ಣುಗಳು, ನೋಡುವುದಕ್ಕೆ ಬಲು ಅಂದವಾದ, ಎಷ್ಟೇ ಶ್ರಮವನ್ನಾಗಲಿ ಸಹಿಸಬಲ್ಲುದಾದ, ಸುಖಾಸೀನ ಸ್ವಭಾವವುಳ್ಳ, ತನ್ನ ಅರ್ಥವನ್ನನುಸರಿಸಿ, ಮಂಗಳಕರವಾದ ಭದ್ರಗಜಕ್ಕೆ ಭದ್ರಜಾತಿಯ ಆನೆಯೆಂದು ಹೆಸರು.

೧೮-೧೯. ಇನ್ನು ಮಂದಜಾತಿಯ ಆನೆಯ ಲಕ್ಷಣವನ್ನು ವಿವರಿಸುವೆನು. ಗಂಭೀರವಾದ ನಡಿಗೆ, ನಿರಾತಂಕವಾದ ಸ್ವಭಾವ, ಬಹು ಕಷ್ಟದಿಂದ ಪಳಗಿಸಬೇಕಾದ ಸ್ವಭಾವ, ದೊಡ್ಡ ಹೊಟ್ಟೆ, ದೊಡ್ಡ ಬೆನ್ನು, ಉದ್ದವಾದ ಶೇಫ (ಜನನೇಂದ್ರಿಯ), ಎರಡು ಭಾಗವಾಗಿರುವಂತೆ ಕಾಣುವ ಕುಂಭಸ್ಥಳ (ಶಿರೋಧರ), ಬಹಳವಾದ

ಹ್ರಸ್ವೋಪ್ತನಖೀ ದುರ್ಮೇಧಾಯುಥಸ್ಯಾನುಚರಸ್ತಥಾ ।
ದೀರ್ಘಜಿಹ್ವವಿಷಾಣಶ್ಚ ದೀರ್ಘಕಕ್ಷಾಸನಸ್ತಥಾ ॥ ೨೦ ॥

ಕ್ಲೇಶಾಕ್ಷಮಶ್ಚ ದೀರ್ಘಾಶೀ ಮೃಗೋ ಜ್ಞೇಯೋ ಮತಂಗಜಃ ।
ಸಂಕೀರ್ಣಲಕ್ಷಣೋ ನಾಗಃ ಸಂಕೀರ್ಣಶ್ಚ ನಿಗದ್ಯತೇ ॥ ೨೧ ॥

ಅತಃ ಪರಂ ಪ್ರವಕ್ಷ್ಯಾಮಿ ಗಜಾನಾಂ ತೇ ವನಾಷ್ಟಕಂ ।
ಹಿಮವತ್ಪ್ರಯಾಗಲೌಹಿತ್ಯಗಂಗಾಮಧ್ಯೇ ಮಹದ್ವನಂ ॥ ೨೨ ॥

ಪ್ರಾಚ್ಯಾಮೈರಾವತಸ್ಯೋಕ್ತಂ ವನಂ ಯತ್ರ ಮತಂಗಜಾಃ ।
ಕಿಂಚಿತ್ಕಮಲವರ್ಣಾಭಾಶ್ಚಪಲಾಃ ಪೃಥುಮಸ್ತಕಾಃ ॥ ೨೩ ॥

---

ಸ್ಥೈರ್ಯ, ಬಲವಾದ ಮುಂದಲೆ, ದಪ್ಪವಾಗಿಯೂ ಉದ್ದವಾಗಿಯೂ ಇರುವ ಬಾಲ, ಸಿಂಹದಂತೆ ಕಣ್ಣು, ಸೂಕ್ಷ್ಮವಾದ ಹೊಕ್ಕಳು ; ಇಂತಹ ಲಕ್ಷಣವಿರುವ ಆನೆಗೆ ಮಂದ ಜಾತಿಯ (ಅಂಬಾರಿಯ) ಆನೆಯೆಂದು ಹೆಸರು.

೨೦-೨೧. ಕುಳ್ಳಾಗಿದ್ದು ಬೆನ್ನು ಶುಷ್ಕವಾಗಿ, ಭಯಂಕರ ಗಂಡಸ್ಥಳವುಳ್ಳದ್ದಾಗಿ, ಹೆಚ್ಚು ಆಹಾರವನ್ನು ತಿನ್ನುವ, ಮೊಟಕಾದ ಉಗುರುಳ್ಳ, ಅಸಾಧ್ಯ ಬುದ್ಧಿಯುಳ್ಳ, ಸಲಗದ ಹಿಂದೆಯೇ ಸಂಚರಿಸುವ, ಉದ್ದವಾದ ನಾಲಿಗೆ, ಉದ್ದವಾದ ಕೊಂಬುಳ್ಳ, ದೀರ್ಘ ಕಕ್ಷಾಸನವುಳ್ಳ ಕ್ಲೇಶವನ್ನು ಸಹಿಸಬಲ್ಲ, ನಿಧಾನವಾಗಿಯೂ ಬಹು ದೀರ್ಘವಾಗಿಯೂ ಆಹಾರವಂ ಸ್ವೀಕರಿಸುವ ಲಕ್ಷಣವುಳ್ಳ ಆನೆಗೆ ಮೃಗಜಾತಿಯ ಆನೆಯೆಂದು ಹೆಸರು. ಸಂಕೀರ್ಣ (ಬೆರಿಕೆ) ಲಕ್ಷಣವುಳ್ಳಆನೆಗೆ ಸಂಕೀರ್ಣ ಜಾತಿಯ ಆನೆಗಳೆಂದು ಹೆಸರು.

೨೨. ಇನ್ನು ಮುಂದೆ ಈ ಗಜಗಳು ವಾಸಮಾಡುವ ಎಂಟು ಅರಣ್ಯಗಳ ಹೆಸರನ್ನು ಹೇಳುತ್ತೇನೆ, ಕೇಳು, ಹಿಮವತ್ಪರ್ವತದ ತಪ್ಪಲಿನ ಕಾಡು, ಪ್ರಯಾಗ ವನ, ಲೌಹಿತ್ಯಾರಣ್ಯ, ಗಂಗಾತೀರಾರಣ್ಯಗಳು.

೨೩. ಪೂರ್ವದಿಕ್ಕಿನಲ್ಲಿರುವ ಕಾಡುಗಳಲ್ಲಿ ವಾಸಮಾಡುವ ಆನೆಗಳೆಲ್ಲವೂ ಐರಾವತದ ವಂಶೋತ್ಪನ್ನವಾದುವುಗಳು. ಅವುಗಳೆಲ್ಲಾ ಕಮಲದಂತೆ ವರ್ಣವುಳ್ಳವುಗಳು. ಬಹು ಚಂಚಲವಾದುವುಗಳು. ದಪ್ಪತಲೆ (ಕುಂಭಸ್ಥಳ) ಯುಳ್ಳವುಗಳು. ಇವೆಲ್ಲಾ ಭದ್ರಗಜ ಜಾತಿಗೆ ಸೇರಿದುವು.

**ಕುನಖಾ ರೂಪವಂತಶ್ಚ ತಥಾ ಮಂದಮುದಾ ಗಜಾಃ ।**
**ಉನ್ಮತ್ತಗಂಗಾಸ್ತ್ರಿಪುರೀ ದಶಾರ್ಣಂ ಮೇಖಲಾಸ್ತಥಾ　　॥ ೨೪ ॥**

**ತೇಷಾಂ ಮಧ್ಯೇ ಕರೂಷಾಖ್ಯಂ ವನಂ ಪದ್ಮಸ್ಯ ಕೀರ್ತಿತಂ ।**
**ಹ್ರಸ್ವಾಶ್ಚಂಡಾಸ್ತಥಾ ಶ್ಯಾಮಾಃ ಶೀಘ್ರೋದಗ್ರಮಹಾಸ್ವನಾಃ　　॥ ೨೫ ॥**

**ಸೂಕ್ಷ್ಮಬಿಂದುಚಿತಾಸ್ತತ್ರ ಭವಂತ್ಯತ್ಯರ್ಥವೇದಿನಃ ।**
**ಬಿಲ್ವಶೈಲಂ ವೇತ್ರವತೀ ದಶಾರ್ಣಂ ಚ ಮಹಾಗಿರಿಂ　　॥ ೨೬ ॥**

**ತೇಷಾಂ ದಶಾರ್ಣಕಂ ಮಧ್ಯೇ ಪುಷ್ಪದಂತಸ್ಯ ಕಾನನಂ ।**
**ಸವೃತ್ತಜಘನಶ್ಯಾಮಾಃ ಸೂಕ್ಷ್ಮಬಿಂದುವಿಚಿತ್ರಿತಾಃ　　॥ ೨೭ ॥**

---

೨೪. ಇನ್ನು ಮಂದಜಾತಿಯ ಆನೆಗಳ ವಿಚಾರವೇನೆಂದರೆ :—ಇವು ನೋಡುವುದಕ್ಕೆ ಬಲು ಸೊಗಸಾಗಿರುತ್ತವೆ. ಕೆಟ್ಟ ಉಗುರು, ಮಂದ (ಮೆಲ್ಲನೆ) ಗಮನವುಳ್ಳವು. ಇವು ಬಹು ಕೊಬ್ಬಿದವುಗಳಾಗಿ ತ್ರಿಪುರಾರಣ್ಯ, ದಶಾರ್ಣವನ, ಮೇಖಲಾರಣ್ಯಗಳಲ್ಲಿ ವಾಸಿಸುತ್ತಾ ಸಂಚರಿಸುತ್ತಿರುವುವು.

೨೫. ಮೇಲೆ ಹೇಳಿದ ಈ ಮಹಾರಣ್ಯಗಳ ಮಧ್ಯೆ ಕರೂಷವೆಂಬ ಹೆಸರುಳ್ಳ ಒಂದು ಪದ್ಮವನವಿದೆ. ಆ ವನದಲ್ಲಿ ಬಹು ಭಯಂಕರ ವೇಗವುಳ್ಳ, ಕುಳ್ಳಾಗಿಯೂ ಕಪ್ಪಾಗಿಯೂ ಇರುವ, ಮಹತ್ತಾದ ಬೃಂಹಿತ (ಕೂಗು) ಧ್ವನಿಯುಳ್ಳ ಮೃಗಜಾತಿಯ ಗಜಗಳು ಇಲ್ಲಿ ಸಂಚರಿಸುವುವು.

೨೬. ಮೈಮೇಲೆಲ್ಲಾ ಚುಕ್ಕಿ ಚುಕ್ಕಿಯಾಗಿರುವ ಬಲು ವೇಗವಾದ ಓಟವುಳ್ಳ, ಬಿಲ್ವ, ಶೈಲವನ, ವೇತ್ರವತೀ, ದಶಾರ್ಣ ಮತ್ತು ಮಹಾಗಿರಿ ವನಗಳಲ್ಲೋಡಾಡುವ ಆನೆಗಳೆಲ್ಲವೂ ಸಂಕೀರ್ಣಜಾತಿಯ ಗಜಗಳು.

೨೭. ದಶಾರ್ಣದೇಶದ ಮಧ್ಯದಲ್ಲಿರುವ ಕಾಡಿಗೆ ಪುಷ್ಪದಂತವೆಂಬ ಗಜದ ವಾಸಸ್ಥಾನವಾದ ಕಾಡೆಂದು (ಪುಷ್ಪದಂತವನ) ಹೆಸರು. ಆ ಪುಷ್ಪದಂತ ವಂಶೋದ್ಭವವಾದ ಆನೆಗಳಿಗೆ ಬೆನ್ನು ಬಲು ಅಗಲ. ನೋಡುವುದಕ್ಕೆ ಇವು ದುಂಡಾಗಿದೆ. ಬಲು ಕಪ್ಪಾಗಿದೆ. ಚಿತ್ರವಿಚಿತ್ರವಾದ ಸಣ್ಣ ಸಣ್ಣ ಚುಕ್ಕಿಗಳು ಮೈಮೇಲೆ ತುಂಬಿವೆ.

**ಸ್ಥೂಲಹಸ್ತಶಿರೋಗ್ರೀವಾಸ್ತತ್ರ ಜಾತಾ ಮತಂಗಜಾಃ ।**
**ಪಾರಿಯಾತ್ರಕವೈದೇಶ್ಯನರ್ಮದಾಬ್ರಹ್ಮವರ್ಧನಂ ॥ ೨೮ ॥**

**ವಾಮನಸ್ಯ ವನಂ ಮಧ್ಯೇ ತೇಷಾಂ ವೈ ಮಾರ್ಗರೋಯುಕಂ ।**
**ಸುಪ್ರಮಾಣಾಶ್ಚ ಮಧ್ಯಾಕ್ಷಾಃ ಶೀಘ್ರಗಾಶ್ಚ ಸುವಿಗ್ರಹಾಃ ॥ ೨೯ ॥**

**ಕರೇಣುನಾಮಧೇಯಾಶ್ಚ ತತ್ರೋಕ್ತಾಶ್ಚ ಸುಗಂಧಿನಃ ।**
**ವಿಂಧ್ಯಸಹ್ಯೋತ್ಕಲಾನಾಂ ಚ ದಕ್ಷಿಣಸ್ಯಾರ್ಣವಸ್ಯ ಚ ॥ ೩೦ ॥**

**ವನಂ ಚ ಮಧ್ಯೇ ಕಾಲೇಶಂ ಸುಪ್ರತೀಕಸ್ಯ ಕೀರ್ತಿತಂ ।**
**ಚಾಪವಂಶಾವೃತನಖಾಃ ಪೀನಪ್ರಸ್ವಶಿರೋಧರಾಃ ॥ ೩೧ ॥**

**ತನುತ್ವಗುತ್ತರಾ ದೀರ್ಘಾಃ ಪದ್ಮಾಭಾಸ್ತತ್ರ ದಂತಿನಃ ।**
**ಸೇವಾದೇಶಃ ಸಮುದ್ರಶ್ಚ ಪ್ರೇಮಹಾರಂ ಚ ನರ್ಮದಾ ॥ ೩೨ ॥**

---

೨೮. ಅವುಗಳ ಸೊಂಡಿಲು ಬಲುದಪ್ಪ. ಕತ್ತು ತಲೆಗಳೂ ಸಹ ದಪ್ಪವಾಗಿಯೇ ಇರುತ್ತವೆ. ಈ ವಿಧವಾದ ಆನೆಗಳ ಗುಂಪು ಪಾರಿಯಾತ್ರಕ ಪರ್ವತ, ವೈದೇಶ್ಯಗಿರಿ ನರ್ಮದಾ ಬ್ರಹ್ಮವರ್ಧನ ಪ್ರದೇಶದ ಕಾಡುಗಳಲ್ಲಿ ಯಥೇಚ್ಛವಾಗಿ ಸಂಚರಿಸುತ್ತವೆ.

೨೯. ಇನ್ನು ವಾಮನವೆಂಬ ದಿಗ್ಗಜದ ವಸತಿಸ್ಥಾನವನ್ನು ತಿಳಿಸುತ್ತೇನೆ ಇವು ಸಮಪ್ರಮಾಣದಿಂದ ಕೂಡಿರುತ್ತವೆ. ಬಹು ವೇಗವಾದ ಗಮನ, ನೋಡುವುದಕ್ಕೆ ಬಹು ಒಳ್ಳೇ ಆಕಾರವುಳ್ಳವು.

೩೦. ವಿಂಧ್ಯಪರ್ವತ, ಸಹ್ಯಪರ್ವತ, ಉತ್ಕಲ, ದಕ್ಷಿಣಸಮುದ್ರ ತೀರಗಳಲ್ಲಿರುವ ಆನೆಗಳು ಕರೇಣುವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವುವು. ಇವು ಯಾವಾಗಲೂ ಮದೋದಕವನ್ನು ಸುರಿಸುತ್ತಾ ಬಹು ಸುಗಂಧದಿಂದ ವ್ಯಾಪ್ತವಾಗಿರುವುವು.

೩೧-೩೨. ಇದಲ್ಲದೆ ಕಾಲೇಶವನಮಧ್ಯದಲ್ಲಿ ಸುಪ್ರತೀಕಗಜದ ವಂಶೋದ್ಭವವಾದ ಆನೆಗಳು ಸಂಚರಿಸುತ್ತವೆ. ಇವುಗಳ ಉಗುರುಗಳು ಬಿಲ್ಲು ಬಗ್ಗಿಸಿದಂತೆ ಇರುತ್ತವೆ. ಉನ್ನತವಾಗಿಯೂ ಹ್ರಸ್ವವಾಗಿಯೂ ಇರುವ ಕಂಠಪ್ರದೇಶವನ್ನುಳ್ಳವುಗಳು ಆನೆಗಳು. ಮೈಮೇಲಿನ ಚರ್ಮವು ಬಹಳ ಉದ್ದವಾಗಿಯೂ ಪದ್ಮಾಕಾರವಾಗಿಯೂ ಇರುತ್ತದೆ. ಇವು ಸಮುದ್ರತೀರದಲ್ಲೂ ನರ್ಮದಾತೀರಗಳಲ್ಲಿಯೂ ಸಂಚರಿಸುತ್ತವೆ.

ತೇಷಾಂ ಮಧ್ಯೇಽಂಜನಸ್ಯಾಖ್ಯಸ್ಯ ವನಂ ಖಲ್ವಪರಾಂತಕಂ ।
ಹೀನಾಯುತವಿಷಾಣಾಸ್ತ್ಯಾ ಮಹಾಕಾಯಾ ಬಲಾಧಿಕಾಃ ॥ ೩೩ ॥

ರಕ್ತತಾಲ್ವೋಷ್ಠಜಿಹ್ವಾಶ್ಚ ಜಾಯಂತೇ ತತ್ರ ದಂತಿನಃ ।
ಕುಶಸ್ಥಲೀ ಮಹೀಪಾಲ ಅವಂತ್ಯಬುರ್ದದನರ್ಮದಾಃ ॥ ೩೪ ॥

ತೇಷಾಂ ಮಧ್ಯೇ ತು ಸೌರಾಷ್ಟ್ರಂ ವನಂ ನೀಲಸ್ಯ ಕೀರ್ತಿತಂ ।
ತಸ್ಯ ವಂಶೇ ತು ಜಾಯಂತೇ ಚಂಡಾಶ್ಚೈವಾಲ್ಪದೇಹಕಾಃ ॥ ೩೫ ॥

ಸೂಕ್ಷ್ಮರೂಕ್ಷತ್ವಚೋ ವ್ಯಾಲಾಸ್ತಥಾ ಶಿಕ್ಷಾತ್ಯಜಾ ಗಜಾಃ ।
ಹಿಮವತ್ಕಾಲಿಕಾಸಿಂಧುಕುರುಜಾಂಗಲಮೇವ ಚ । ॥ ೩೬ ॥

ತೇಷಾಂ ಪಂಚನದಂ ಮಧ್ಯೇ ಕುಮುದಸ್ಯ ಮಹದ್ವನಂ ।
ಸ್ಫುಟಿತಾಗ್ರದ್ವಿಜಾಸ್ತತ್ರ ಜಾಯಂತೇ ಮಲವಿದ್ವಿಷಃ ॥ ೩೭ ॥

---

೩೩. ಇನ್ನು ದಿಗ್ಗಜಗಳಲ್ಲೊಂದಾದ ಅಂಜನಗಜದ ವಿಚಾರವನ್ನೀಗ ಹೇಳುತ್ತೇನೆ. ಇದರ ವಂಶೋದ್ಭವವಾದ ಆನೆಗಳು ಅಪರಾಂತಕವನದಲ್ಲಿ ವಾಸಮಾಡುತ್ತವೆ. ಇವುಗಳ ಕೊಂಬುಗಳು ಬಲು ಎತ್ತರವಾಗಿಯೂ ಬಲು ಅಗಲವಾಗಿಯೂ ಇವೆ. ಇವುಗಳ ದೇಹ ಬಹಳ ಸ್ಥೂಲ ; ಬಲವೂ ಬಹಳವಾಗಿಯೇ ಇವೆ.

೩೪. ಮೇಲೆ ಹೇಳಿದ ಲಕ್ಷಣವುಳ್ಳ ಆನೆಗಳು ಕೆಂಪಗಿರುವ ತುಟಿ, ಕೆಂಪಾದ ನಾಲಿಗೆಯುಳ್ಳವುಗಳಾಗಿ ಆ ಪ್ರದೇಶದಲ್ಲಿ ವಿಶೇಷವಾಗಿರುತ್ತವೆ. ಇವು ಕುಶಸ್ಥಲ, ಅವಂತೀ, ಅರ್ಬುದ, ನರ್ಮದಾತೀರ ವನಗಳಲ್ಲಿ ಸಂಚರಿಸುತ್ತವೆ.

೩೫. ಮೇಲೆ ಹೇಳಿದ ಪ್ರದೇಶಗಳ ಮಧ್ಯದಲ್ಲಿ ಸೌರಾಷ್ಟ್ರದೇಶದ ವನವಿದೆ. ನೀಲಗಜ (ದಿಗ್ಗಜಗಳಲ್ಲಿ ಮತ್ತೊಂದು) ದ ವಾಸಸ್ಥಾನವೇ ಅದು. ಈ ನೀಲಗಜದ ವಂಶದಲ್ಲಿ ಪ್ರಚಂಡವೇಗವುಳ್ಳ ಸಣ್ಣ ಆಕಾರದ ಆನೆಗಳು ಹುಟ್ಟುತ್ತವೆ.

೩೬. ಇವು ಬಹು ಸೂಕ್ಷ್ಮವಾಗಿಯೂ ಒರಟಾಗಿಯೂ ಇರುವ ಚರ್ಮಗಳನ್ನುಳ್ಳವಾಗಿರುತ್ತವೆ. ಇವುಗಳು ಯಾರ ಕೈಗೂ, ಯಾರ ಶಿಕ್ಷೆಗೂ ಸಿಕ್ಕತಕ್ಕವುಗಳೇ ಅಲ್ಲ. ಇವು ಹಿಮಾರಣ್ಯ, ಕಾಲಿಕಾ (ಯಮುನಾ), ಸಿಂಧು, ಕುರುಜಾಂಗಲದೇಶಗಳ ಅರಣ್ಯಗಳಲ್ಲಿ ಓಡಾಡುತ್ತಿರುತ್ತವೆ.

೩೭. ಮೇಲೆ ಹೇಳಿದ ಪ್ರದೇಶಗಳಲ್ಲಿ ಅದೇ ಹೆಸರುಳ್ಳ ಪಂಚ ವನಗಳ ಮಧ್ಯಾರಣ್ಯದಲ್ಲಿ ಕುಮುದಗಜದ ಮಹದ್ವನವಿದೆ. ಈ ವಂಶದ ಆನೆಗಳು

ದಾನಶೀಲಾಶ್ಚ ಭೂತಾಶ್ಚ ದುರ್ವಿಧೇಯಾಶ್ಚ ವಾರಣಾಃ ॥ ೩೮ ॥

ಏತತ್ತವೋಕ್ತಂ ತು ಮತಂಗಜಾನಾಂ
ಕುಲಾಷ್ಟಕಂ ಚೈವ ವನಾಷ್ಟಕಂ ಚ ।
ಅತಃ ಪರಂ ಕಿಂ ಕಥಯಾಮಿ ತುಭ್ಯಂ
ತನ್ಮೇ ವದಸ್ವಾಯತಲೋಹಿತಾಕ್ಷ ॥ ೩೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂಪ್ರತಿ ನಾರಾಯಣವಾಕ್ಯೇಷು
ಗಜೋತ್ಪತ್ತಿರ್ನಾಮೈಕ ಪಂಚಾಶದುತ್ತರ
ದ್ವಿಶತತಮೋಽಧ್ಯಾಯಃ.

---

ಬಹು ಶುಭ್ರದೇಹದಿಂದಲೂ, ಶುಭ್ರವಾದ ಕೊಂಬುಗಳಿಂದಲೂ ಕೂಡಿ ಮನೋಹರವಾಗಿ ಕಾಣುತ್ತಲಿರುತ್ತವೆ.

೩೮. ಮೇಲೆ ಹೇಳಿದ ಸಕಲ ವಿಧ ಲಕ್ಷಣಗಳುಳ್ಳ ಆನೆಗಳೆಲ್ಲವೂ ಸಹ ದಾನಶೀಲ (ಮದೋದಕವನ್ನು ಸುರಿಸುವುವು) ಗಳಾಗಿಯೂ, ಅದ್ಭುತಾಕಾರವುಳ್ಳವುಗಳಾಗಿಯೂ, ಒಬ್ಬರಿಗೂ ಜಗ್ಗದೆ ಇರುವ ಸ್ವಭಾವವುಳ್ಳವುಗಳಾಗಿಯೂ ಇರತಕ್ಕವುಗಳೆಂದು ತಿಳಿಯಯ್ಯಾ, ಶೈಲೂಷ !

೩೯. ಎಲೈ ಶೈಲೂಷನೆ! ನಿಮ್ಮ ಗಂಧರ್ವರ ವಂಶಕ್ಕೆ ಪರಮಪ್ರೀತಿಕಾರಣಗಳಾದ ಗಜಗಳ ಕುಲಾಷ್ಟಕವನ್ನೂ ವನಾಷ್ಟಕವನ್ನೂ ನಿನ್ನೊಡನೆ ವಿಸ್ತಾರವಾಗಿ ತಿಳಿಸಿರುತ್ತೇನೆ. ಇನ್ನು ಮುಂದೆ ನೀನು ಏನು ಕೇಳಬೇಕೆಂದಾಶಿಸುವೆಯೋ ಅದನ್ನು ಕೇಳಯ್ಯ, ಶೈಲೂಷ ! ಎಂಬುದಾಗಿ ನಾರಾಯಣರು ಹೇಳಿದರು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಗಜೋತ್ಪತ್ತಿ ವರ್ಣನವೆಂಬ ಹೆಸರಿನ
ಇನ್ನೂರಐವತ್ತೊಂದನೆಯ ಅಧ್ಯಾಯವು
ಮುಗಿದುದು.

---

ಶ್ರೀ

# ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ದ್ವಿಪಂಚಾಶದುತ್ತರದ್ವಿಶತತಮೋಽಧ್ಯಾಯಃ

॥ ಶೈಲೂಷ ಉವಾಚ ॥

ವಿಸ್ತರೇಣ ಸಮಾಚಕ್ಷ್ವ ವಾನರಾಣಾಂ ತು ಸಂಭವಂ ।
ಅಲಂಕೃತ ಇವಾಭಾತಿ ಯೈರ್ವಂಶಃ ಪುಲಹಸ್ಯ ಚ ॥ ೧ ॥

॥ ನಾಡಾಯನ ಉವಾಚ ॥

ಕಾಶ್ಯಪೇಯೀ ಹರಿರ್ನಾಮ ಯಾ ಭಾರ್ಯಾ ಪುಲಹಸ್ಯ ಚ ।
ಪುಲಹಾಜ್ಜನಯಾಮಾಸ ಶ್ವೇತಂ ನಾಮ ವಲೀಮುಖಂ ॥ ೨ ॥

ಶ್ವೇತಸ್ತದೋರ್ಧ್ವದೃಷ್ಟಿಂ ಚ ಜನಯಾಮಾಸ ವಾನರಂ ।
ಊರ್ಧ್ವದೃಷ್ಟಿಸ್ತಥಾ ವ್ಯಾಘ್ರಂ ವ್ಯಾಘ್ರಶ್ಚ ಶರಭಂ ತಥಾ ॥ ೩ ॥

---

### ಇನ್ನೂರೈವತ್ತೆರಡನೆಯ ಅಧ್ಯಾಯವು.

೧. ಶೈಲೂಷನು ಹೇಳುತ್ತಾನೆ:—ಪುಲಹಬ್ರಹ್ಮನ ವಂಶವು ಆದಾವ ಕಪಿಶ್ರೇಷ್ಠರಿಂದ ಅಲಂಕೃತವಾಗಿರುವುದೋ ಅಂತಹ ವಾನರರಾಜರು ಉತ್ಪತ್ತಿಯಾದ ವಿಚಾರವನ್ನು ವಿಸ್ತಾರವಾಗಿ ತಿಳಿಸಯ್ಯಾ, ನಾಡಾಯನ!

೨. ನಾಡಾಯನನು ಹೇಳುತ್ತಾನೆ:—ಕಾಶ್ಯಪನ ಮಗಳಾದ ಹರಿಯೆಂಬುವಳು ಪುಲಹಬ್ರಹ್ಮನನ್ನು ಮದುವೆಯಾದವಳು. ಈ ರೀತಿ ಪುಲಹಬ್ರಹ್ಮನು ಈ ತನ್ನ ಹೆಂಡತಿಯಲ್ಲಿ ಮೊದಲು ಶ್ವೇತನೆಂಬ ವಾನರನನ್ನು ಪಡೆದನು.

೩. ಆ ಶ್ವೇತನಿಗೆ ಊರ್ಧ್ವದೃಷ್ಟಿಯೆಂಬ ಮಗನು ಹುಟ್ಟಿದನು ಊರ್ಧ್ವದೃಷ್ಟಿಗೆ ವ್ಯಾಘ್ರನೆಂಬುವನೂ, ವ್ಯಾಘ್ರನೆಂಬುವನಿಗೆ ಶರಭನೆಂಬುವನೂ ಮಕ್ಕಳಾಗಿ ಜನಿಸಿದರು.

ಶರಭಶ್ಚ ತಥಾರ್ಕ್ಷಂ ಚ ಸಿಂಹಮೃಕ್ಷಶ್ಚ ವಾನರಂ ।
ಋಕ್ಷೀ ಚ ಜನಯಾಮಾಸ ಋಕ್ಷಾಂಶ್ಚೈವ ಜನಾಧಿಪ ॥ ೪ ॥

ವಾನರಾಂಶ್ಚ ಮಹಾಕಾಯಾನ್ ಶತಶೋಽಥ ಸಹಸ್ರಶಃ ।
ಯೇಷಾಮನ್ವಯಸಂಭೂತಾ ದೇವಪುತ್ರಾ ಮಹಾಬಲಾಃ ॥ ೫ ॥

ಉತ್ಪನ್ನಾ ರಾಮಸಾಹಾಯ್ಯೇ ರಾವಣಸ್ಯ ವಧೈಷಿಣಃ ।
ಋಕ್ಷಸ್ಯ ಭಗಿನೀ ಋಕ್ಷೀ ಪ್ರಜಾಪತಿಸುತಾವುಭೌ ॥ ೬ ॥

ಧೂಮ್ರಂ ಚ ಜಾಂಬವಂತಂ ಚ ಜನಯಾಮಾಸ ಋಕ್ಷಜೌ ।
ಜಾಂಬವಾನ್ಜನಯಾಮಾಸ ಮಾರ್ಜಾರಂ ಭೀಮವಿಕ್ರಮಂ ॥ ೭ ॥

---

೪. ಶರಭನ ಮಗ ಋಕ್ಷ. ಋಕ್ಷನ ಮಗ ಸಿಂಹ. ಮತ್ತು ಈ ಋಕ್ಷನ ಹೆಂಡತಿಯು ಸಿಂಹನನ್ನು ಹೆತ್ತಮೇಲೆ ಅನೇಕ ಮಂದಿ ಋಕ್ಷ(ಕಪಿ) ರಾಜರನ್ನು ಮಕ್ಕಳನ್ನಾಗಿ ಪಡೆದಳು.

೫. ಈ ಕಪಿರಾಜರುಗಳು ಬಹಳ ದೊಡ್ಡ ದೊಡ್ಡ ದೇಹವುಳ್ಳವರು. ಇಂತಹ ನೂರಾರು ಸಾವಿರಾರು ಜನರು ಹರಿಯ ಹೊಟ್ಟೆಯಲ್ಲಿ ಹುಟ್ಟಿದರು. ಇವರ ವಂಶದಲ್ಲಿ ಬಲ ಪರಾಕ್ರಮಶಾಲಿಗಳಾದ ದೇವಪುತ್ರರೆಲ್ಲರೂ ಕಪಿರೂಪದಿಂದ ಅವತರಿಸಿದರೆಂದು ತಿಳಿದುಕೊಳ್ಳಯ್ಯಾ !

೬. ಶ್ರೀವಿಷ್ಣುವು ರಾಮಾವತಾರ ಮಾಡಿದ ಕಾಲದಲ್ಲಿ ರಾವಣನ ಸಂಹಾರಕ್ಕಾಗಿ ಲಂಕೆಗೆ ಹೊರಟ ಸಂದರ್ಭದಲ್ಲಿ ಈ ವಾನರಶ್ರೇಷ್ಠರೆಲ್ಲರೂ ಪರಬ್ರಹ್ಮಮೂರ್ತಿಯಾದ ಶ್ರೀರಾಮನ ಹಿಂದೆ ಸಹಾಯಕ್ಕಾಗಿ ಹೋಗುವುದಕ್ಕಾಗಿಯೇ ಉತ್ಪನ್ನರಾದವರೆಂದು ತಿಳಿದುಕೋ. ಋಕ್ಷನಿಗೊಬ್ಬಳು ತಂಗಿಯಿದ್ದಳು. ಅವಳ ಹೆಸರು ಋಷಿಯೆಂದೇ ವ್ಯವಹಾರ. ಇವರಿಬ್ಬರೂ ಬ್ರಹ್ಮನ ಮಕ್ಕಳು.

೭. ಈ ಋಕ್ಷನಿಗೆ ಧೂಮ್ರ ಮತ್ತು ಜಾಂಬವಂತರೆಂಬ ಇಬ್ಬರು (ಕರಡಿಗಳು) ಮಕ್ಕಳಾದರು. ಆ ಪೈಕಿ ಜಾಂಬವಂತನಿಗೆ ಮಹಾಪರಾಕ್ರಮಶಾಲಿಯಾದ ಮಾರ್ಜಾರನೆಂಬ ಮಗನು ಹುಟ್ಟಿದನು

ಮಾರ್ಜಾರಸ್ಯ ಚ ಮಾರ್ಜಾರಾಃ ಕುಲೇ ಜಾತಾ ಮಹಾಬಲಾಃ ।
ಋಕ್ಷಸ್ಯ ವಾನರೇಂದ್ರಸ್ಯ ದುಹಿತಾಂ ಮಾನಸೀಂ ಸ್ವಯಂ ॥ ೮ ॥

ದದೌ ಪ್ರಜಾಪತಿಃ ಶ್ರೀಮಾನ್ರೂಪಯೌವನಸಂಯುತಾಂ ।
ಕಾಮಯಾಮಾಸ ತಾಂ ಶಕ್ರಸ್ತತೋ ವಾಲಿರಜಾಯತ ॥ ೯ ॥

ತಾಮೇವ ಕಾಮಯಾಮಾಸ ಭಾಸ್ಕರಃ ಸ್ವಯಮೇವ ತು ।
ಸುಗ್ರೀವಂ ಜನಯಾಮಾಸ ಭಾಸ್ಕರಾತ್ಸಾ ಸುಮಧ್ಯಮಾ ॥ ೧೦ ॥

ತತ್ರ ವಾನರರಾಜೋಽಭೂದ್ವಾಲಿರ್ವಿಕ್ರಾಂತಪೌರುಷಃ ।
ಯಸ್ತು ರಾಮೇಣ ನಿಹತಃ ಸುಗ್ರೀವಸ್ತ್ವಭಿಷೇಚಿತಃ ॥ ೧೧ ॥

---

೮. ಆ ಮಾರ್ಜಾರನ ಹೊಟ್ಟೆಯಲ್ಲಿ ಅನೇಕ ಮಂದಿ ಪರಾಕ್ರಮಶಾಲಿಗಳಾದ ಮಾರ್ಜಾರರು ಹುಟ್ಟಿದರು. ಮತ್ತು ಆ ಋಕ್ಷನಿಗೆ ಮಾನಸಿಯೆಂಬ ಹೆಣ್ಣು ಮಗಳಿದ್ದಳು. ( ಇಲ್ಲಿ ದುಹಿತರಂ ಎಂದಿರಬೇಕು. ದುಹಿತಂ ಎಂದಿದೆ. ಇದು ಮಹಾಕವಿ ಪ್ರಯೋಗವಾದ್ದರಿಂದ ಮಾನ್ಯವು. )

೯. ಆ ಮಾನಸಿಯು ಮಹಾರೂಪಯೌವನ ಸಂಪತ್ತಿನಿಂದ ಕೂಡಿದ್ದುದನ್ನು ನೋಡಿ ಇಂದ್ರನು ಅವಳನ್ನು ಮೋಹಿಸಿದನು. ಈರೀತಿ ಮೋಹಿಸಿದ ಇಂದ್ರನಿಗೆ ಬ್ರಹ್ಮನೇ ಆ ಮಾನಸಿಯನ್ನು ಕೊಟ್ಟು ಲಗ್ನಮಾಡಿದನು. ಅವಳ ಹೊಟ್ಟೆಯಲ್ಲಿ ಇಂದ್ರನಿಗೆ ಹುಟ್ಟಿದವನೇ ವಾಲಿಯೆಂದು ತಿಳಿದುಕೋ. (ಇವನೇ ಕಿಷ್ಕಿಂಧಾರಾಜ.)

೧೦. ಈ ಮಾನಸಿಯು ರೂಪಸಂಪತ್ತಿಗೆ ಮರುಳಾಗಿ ಸೂರ್ಯನೂ ಸಹ ಅವಳ ಮೇಲೆ ಕಣ್ಣಿಟ್ಟನು. ಆ ಬಳಿಕ ಅವಳೊಡನೆ ರಮಿಸಿ ಸುಗ್ರೀವನನ್ನು ಹುಟ್ಟಿಸಿದನು. ಈ ಪ್ರಕಾರವಾಗಿ ಹುಟ್ಟಿದವನೇ ಸುಗ್ರೀವ. ವಾಲಿಸುಗ್ರೀವರಿಬ್ಬರೂ ಇಂದ್ರಸೂರ್ಯರಿಗೆ ಈ ಮೇರೆ ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿ ಸಹೋದರರಾದವರು.

ಇವರಲ್ಲಿ ವಾಲಿಯಂತಹ ಜಗದೇಕವೀರರಾರೂ ಇರಲಿಲ್ಲವಾದ್ದರಿಂದ, ಈ ವಾಲಿಯೇ ಸಕಲ ಕಪಿಸೈನ್ಯಕ್ಕೂ ರಾಜನಾದನು. ರಾಮಾಯಣಕಾಲದಲ್ಲಿ (ತ್ರೇತಾಯುಗದಲ್ಲಿ) ರಾಮನಿಂದ ಸಂಹೃತನಾದವನೇ ಈ ವಾಲಿಯು. ರಾಮನ ಹಸ್ತದಿಂದ ಕಿಷ್ಕಿಂಧೆಯಲ್ಲಿ ಪಟ್ಟಾಭಿಷಿಕ್ತನಾದವನೇ ಈ ಸುಗ್ರೀವರಾಜ.

**ತಸ್ಯಾಸನ್ವಶಗಾಃ ಸರ್ವೇ ವಾನರಾ ದೇವಯೋನಯಃ ।**
**ವಾಲಿಪುತ್ರೋಽಂಗದೋ ನಾಮ ಹನುಮಾನ್ವಾಯುನಂದನಃ ॥ ೧೨ ॥**

**ನೀಲೋ ವಹ್ನಿಸುತಃ ಶ್ರೀಮಾನ್ವಿಶ್ವಕರ್ಮಸುತೋ ನಲಃ ।**
**ಧರ್ಮಪುತ್ರಃ ಸುಷೇಣಶ್ಚ ಋಷಭೋ ಗರುಡಾತ್ಮಜಃ ॥ ೧೩ ॥**

**ದ್ವಾವಶ್ವಿನಸುತೌ ವೀರೌ ಮೈಂದೋ ದ್ವಿವಿದ ಏವ ಚ ।**
**ಧೂಮ್ರಶ್ಚ ಜಾಂಬವಾಂಶ್ಚೈವ ವೇಗದರ್ಶೀ ಚ ವಾನರಃ ॥ ೧೪ ॥**

**ಮೃತ್ಯೋಃ ಪುತ್ರಾ ಮಹಾವೀರ್ಯಾ ಮೃತ್ಯುತುಲ್ಯಪರಾಕ್ರಮಾಃ ।**
**ಗಜೋ ಗವಾಕ್ಷೋ ಗವಯಃ ಶರಭೋ ಗಂಧಮಾದನಃ ॥ ೧೫ ॥**

**ಯಮಸ್ಯ ತನಯಾಃ ಪಂಚ ಗೋಲಾಂಗೂಲಾ ಮಹಾಬಲಾಃ ।**
**ಶ್ವೇತೋ ಜ್ಯೋತಿರ್ಮುಖಶ್ಚಾನ್ಯೋ ಭಾಸ್ಕರಸ್ಯಾತ್ಮಜಾವುಭೌ ॥ ೧೬ ॥**

೧೨. ದೇವಯೋನಿ ವಿಶೇಷರೆಂದೆನಿಸಿದ ಸಕಲ ವಾನರರೂ ಈರೀತಿ ವಾಲಿಯ ವಂಶಸ್ಥರೆಂದು ತಿಳಿದುಕೋ. ವಾಲಿಯ ಔರಸಪುತ್ರನಿಗೆ ಅಂಗದನೆಂದು ಹೆಸರು. ವಾಯುದೇವರ ಮಗ ಹನುಮಂತ.

೧೩. ಅಗ್ನಿಯ ಮಗ ನೀಲ. ವಿಶ್ವಕರ್ಮನ ಮಗ ನಲ. ಯಮ (ಧರ್ಮ) ನ ಮಗ ಸುಷೇಣ. ಗರುಡನ ಮಗ ಋಷಭ.

೧೪. ಅಶ್ವಿನೀದೇವತೆಗಳ ಮಕ್ಕಳೇ ಮೈಂದದ್ವಿವಿದರು. ಧೂಮ್ರನೂ ಜಾಂಬುವಂತನೂ ಸಹ ಮಹಾವೇಗಶಾಲಿಗಳಾದ ವೀರರಾದವರೇ ಸರಿ.

೧೫. ಮೃತ್ಯುವಿನ ಹೊಟ್ಟೆಯಲ್ಲಿ ಹುಟ್ಟಿದವರು ಐದು ಮಂದಿ ಮಹಾವೀರರು. ಇವರು ಮೃತ್ಯುದೇವತೆಯಂತೆಯೇ ಮಹಾಬಲ ಪರಾಕ್ರಮದಿಂದ ಕೂಡಿದವರು. ಅವರ ಹೆಸರುಗಳಿವು.—ಗಜ, ಗವಾಕ್ಷ, ಗವಯ, ಶರಭ, ಗಂಧಮಾದನ.

೧೬. ಮೇಲೆ ಹೇಳಿದ ಐದುಮಂದಿಯೂ ಮೃತ್ಯುದೇವತೆಯೆನಿಸಿದ ಯಮನ ಮಕ್ಕಳುಗಳು. ಯಮನ ಹೊಟ್ಟೆಯಲ್ಲಿ ಹುಟ್ಟಿದ ಇನ್ನು ಕೆಲವು ಶೂರರ ಹೆಸರನ್ನು ಹೇಳುತ್ತೇನೆ, ಕೇಳು. ಅವರೇ ಗೋಲಾಂಗೂಲ (ತಿಂಗಳೀಕ) ರೆನಿಸಿದವರು.

ವರುಣಸ್ಯಾಪರಃ ಪುತ್ರೋ ಹೇಮಕೂಟಃ ಪ್ರತಾಪವಾನ್ ।
ದೇವಪುತ್ರಾಸ್ತಥೈವಾನ್ಯೇ ಋಕ್ಷಗೋಪುಚ್ಛವಾನರಾಃ ॥ ೧೭ ॥

ಶತಸಾಹಸ್ರಯೂಥಾನಾಂ ರಾಜಾನೋ ಭೀಮವಿಕ್ರಮಾಃ ।
ಹಿಮವನ್ಮೇರುನಿಲಯಾಃ ಶ್ವೇತನೀಲನಿವಾಸಿನಃ ॥ ೧೮ ॥

ಶೃಂಗವನ್ಮಾಲ್ಯವದ್ವಿಂಧ್ಯ ಋಕ್ಷವಂತನಿವಾಸಿನಃ ।
ಯೇ ವಸಂತಿ ತಥಾ ಸಹ್ಯೇ ಋಷಭೇ ಗಂಧಮಾದನೇ ॥ ೧೯ ॥

ಸಾಗರಾನೂಪಪರ್ಯಂತೇ ತಥಾ ದ್ವೀಪೇಷು ಸಪ್ತಸು ।
ಬ್ರಹ್ಮಣ್ಯಾ ಬಲವಂತಶ್ಚ ಶೂರಾ ಧರ್ಮಪರಾಯಣಾಃ ॥ ೨೦ ॥

---

೧೭. ಶ್ವೇತ, ಜ್ಯೋತಿರ್ಮುಖರೆಂಬುವರು ಸೂರ್ಯನ ಇಬ್ಬರ ಮಕ್ಕಳು. ವರುಣನ ಮಗ ಹೇಮಕೂಟ. ಇವನು ಮಹಾಪ್ರತಾಪಶಾಲಿಯಾದವನು. ಇತರ ಮಿಕ್ಕ ದೇವತೆಗಳ ಹೊಟ್ಟೆಯಲ್ಲಿ ಹುಟ್ಟಿದವರೇ ಕರಡಿ, ಕೊಂಡಮುಸುಕ ಮುಂತಾದ ನಾನಾರೂಪವಾದ ಕಪಿಗಳೆಂದು ತಿಳಿದುಕೋ.

೧೮. ಮೇಲೆ ಬರೆದ ವೀರರೆಲ್ಲರೂ ಒಂದೊಂದು ಲಕ್ಷ ಕಪಿಸೈನ್ಯಗಳ ನಾಯಕರು. ಇವರೆಲ್ಲರೂ ಹಿಮಾಲಯ, ಮೇರುಗಿರಿ, ಶ್ವೇತಪರ್ವತ, ನೀಲಪರ್ವತಗಳಲ್ಲಿ ವಾಸಮಾಡಿಕೊಂಡು ಸುಖವಾಗಿರತಕ್ಕವರು.

೧೯. ಮತ್ತು ಇವರಲ್ಲನೇಕರು ಶೃಂಗಪರ್ವತ, ಮಾಲ್ಯವತ್ಪರ್ವತ, ವಿಂಧ್ಯಪರ್ವತ, ಋಕ್ಷವತ್ಪರ್ವತ, ಸಹ್ಯಪರ್ವತ, ಗಂಧಮಾದನಪರ್ವತ, ಋಷಭಾದ್ರಿಯೇ ಮುಂತಾದ ಮಹಾ ಮಹಾ ಪರ್ವತ ಶಿಖರಗಳಲ್ಲಿ ವಾಸಮಾಡಿಕೊಂಡಿರುವರು.

೨೦. ಮತ್ತು ಸಮುದ್ರತೀರದಲ್ಲಿರುವ ಮರುಭೂಮಿಗಳಲ್ಲಿಯೂ, ಸಪ್ತ ಸಮುದ್ರ ಮಧ್ಯವರ್ತಿಯಾದ ನಾನಾ ದ್ವೀಪಗಳಲ್ಲಿಯೂ ಅನೇಕರು ವಾಸವಾಗಿದ್ದಾರೆ. ಈ ಕಪಿಶ್ರೇಷ್ಠರೆಲ್ಲರೂ ಬ್ರಹ್ಮನಿಷ್ಠ (ಬ್ರಹ್ಮವಿಚಾರ) ಪರರು, ಮಹಾಬಲಿಷ್ಠರು, ಶೂರರು, ಧರ್ಮಪರಾಯಣರು.

ನೀತಿಶಾಸ್ತ್ರೇಷು ಕುಶಲಾಃ ಸರ್ವಶಾಸ್ತ್ರವಿಶಾರದಾಃ ।
ಸುನೀತಾಃ ಸತ್ವವಂತಶ್ಚ ದೃಪ್ತಾ ನೀತಿಗ್ರಹೇ ರತಾಃ ॥ ೨೧ ॥

ಸಖಾಯೋ ರಾಮಭದ್ರಸ್ಯ ರಾವಣಸ್ಯ ವಧೈಷಿಣಃ ।
ಹಸ್ತಿವಾನರಸಂಗ್ರಾಮೋ ಪುರಾ ರುಧಿರಕರ್ದಮೋ ॥ ೨೨ ॥

ಗಿರಿಕೂಟನಿಭಾ ನಾಗಾ ವಿಜಿತಾ ಯೈಃ ಸಹಸ್ರಶಃ ।
ಸಹಾಯಾ ರಾಮಭದ್ರಸ್ಯ ತೇ ವೀರಾ ಭರತಸ್ಯ ಚ ॥ ೨೩ ॥
ಮಾ ಗಚ್ಛ ಸಂಯುಗಂ ತಸ್ಮಾದ್ಭರತೇನ ಮಹಾತ್ಮನಾ ।

ಸರ್ವಾಸ್ತ್ರವಿಜ್ಞಾನವಿಶಾರದೇನ
ಸಂಗ್ರಾಮಶೌಂಡೇನ ಜಿತೇಂದ್ರಿಯೇಣ ।

---

೨೧. ನೀತಿಶಾಸ್ತ್ರಗಳಲ್ಲಿ ಕುಶಲರು, ಸಕಲ ಶಾಸ್ತ್ರವಿಶಾರದರು, ಸುನೀತರು, ಸತ್ವಶಾಲಿಗಳು, ಬಲು ಕೊಬ್ಬಿದವರು, ಇಷ್ಟಾದರೂ ನ್ಯಾಯವನ್ನು ಮಾತ್ರ ಬಿಟ್ಟು ಹೋಗುವವರಲ್ಲ.

೨೨. ಶ್ರೀರಾಮಚಂದ್ರ ಪರಬ್ರಹ್ಮನಿಗೆ ಇವರೆಲ್ಲರೂ ಆಪ್ತಮಿತ್ರರು. ರಾವಣನ ಸಂಹಾರಕ್ಕಾಗಿ ಉತ್ಪನ್ನರಾದವರು. ಹಿಂದೆ ಆನೆಗಳಿಗೂ ಕಪಿಗಳಿಗೂ ಭಯಂಕರವಾದ ಯುದ್ಧವು ಪ್ರಾಪ್ತವಾಗಿ ಭೂಮಿಯೆಲ್ಲವೂ ರಕ್ತಪ್ರವಾಹದಿಂದ ಕೆಸರಾಗಿ ಹೋಯಿತು.

೨೩. ದೊಡ್ಡ ದೊಡ್ಡ ಬೆಟ್ಟಗಳಂತೆ ಬೆಳೆದಿದ್ದ ಆನೆಗಳೆಲ್ಲವೂ ಆಗ ನಡೆದ ಮಹಾ ಗಜವಾನರ ಸಂಗ್ರಾಮದಲ್ಲಿ ವಾನರರಿಂದ ಪರಾಜಿತವಾಗಿ ಹೋದುವು. ಅಂತಹ ಮಹಾ ವಾನರರೆಲ್ಲರೂ ಶ್ರೀರಾಮನಿಗೆ ಸಹಾಯಮಾಡಿ ಅವನಿಗೆ ವಿಜಯವನ್ನುಂಟುಮಾಡಿರುತ್ತಾರೆ ಈಗಲೂ ಭರತನು ನಿನ್ನೊಡನೆ ಆರಂಭಿಸುವ ಯುದ್ಧದಲ್ಲೂ ಆ ವಾನರಸೈನ್ಯವು ಸಹಾಯಕ್ಕೆ ಬರದೇ ಇರುವುದಿಲ್ಲವೆಂಬುದನ್ನು ನೀನು ಚೆನ್ನಾಗಿ ಜ್ಞಾಪಕದಲ್ಲಿಡಯ್ಯಾ, ಶೈಲೂಷ! ಈಗಲಾದರೂ ನನ್ನ ಮಾತನ್ನು ಕೇಳು. ಭರತನೊಡನೆ ಯುದ್ಧಕ್ಕೆ ಹೋಗಬೇಡ.

ಧರ್ಮಾಜ್ಞ್ಚ ರಾಮಸ್ಯ ಪರಾಯಣೇನ
ಶಕ್ರಾಧಿಕೇನ ತ್ವತಿಪೌರುಷೇಣ ॥ ೨೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಂ ಪ್ರತಿ ನಾಡಾಯನವಾಕ್ಯೇಷು
ವಾನರೋತ್ಪತ್ತಿರ್ನಾಮ ದ್ವಿಪಂಚಾಶದುತ್ತರ
ದ್ವಿಶತತಮೋಽಧ್ಯಾಯಃ

---

೨೪. ಸರ್ವಾಸ್ತ್ರವಿಜ್ಞಾನವಿಶಾರದನಾದ, ಸಂಗ್ರಾಮಶೌಂಡನಾದ, ಜಿತೇಂದ್ರಿಯನಾದ ಯಾವಾಗಲೂ ಧರ್ಮಾತಿಕ್ರಮಣಮಂ ಮಾಡದೆ ಶ್ರೀರಾಮಧ್ಯಾನೈಕಪರಾಯಣನಾದ, ಪೌರುಷದಲ್ಲಿ ಇಂದ್ರನಿಗಿಂತ ಎಷ್ಟೋ ಪಾಲು ಮಿಗಿಲಾದ ಭರತನೊಡನೆ ಯುದ್ಧಕ್ಕೆ ಹೋಗಬೇಡವಯ್ಯಾ, ಶೈಲೂಷರಾಜ! ಹೀಗೆಂದು ನಾಡಾಯನನು ಗಂಧರ್ವರಾಜನಾದ ಶೈಲೂಷನಿಗೆ ಹೇಳಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ವಾನರೋತ್ಪತ್ತಿಯೆಂಬ ಹೆಸರಿನ
ಇನ್ನೂರೈವತ್ತೆರಡನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
# ॥ ತ್ರಿಪಂಚಾಶದುತ್ತರದ್ವಿಶತತಮೋಽಧ್ಯಾಯಃ ॥

---

॥ ಶೈಲೂಷ ಉವಾಚ ॥

ಕಿಂ ನಿಮಿತ್ತಮಭೂದ್ವೈರಂ ವಾನರಾಣಾಂ ತು ಕುಂಜರೈಃ ।
ಕೀದೃಶಂ ಚಾಭವದ್ಯುದ್ಧಂ ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥

॥ ನಾಡಾಯನ ಉವಾಚ ॥

ವನಾಷ್ಟಕಂ ಕರೀಂದ್ರಾಣಾಂ ಯನ್ಮಯೋಕ್ತಂ ಪುರಾ ತವ ।
ತದುಕ್ತಂ ಭಾರತಾದ್ವರ್ಷಾದ್ಭಾಗಸ್ಯ ನವಮಸ್ಯ ಚ ॥ ೨ ॥

---

### ಇನ್ನೂರೈವತ್ತಮೂರನೆಯ ಅಧ್ಯಾಯವು.

೧. ಶೈಲೂಷನು ನಾಡಾಯನನನ್ನು ಕುರಿತು ಮತ್ತೂ ಪ್ರಶ್ನೆಗೈಯುತ್ತಾನೆ. ಕಪಿಗಳಿಗೂ, ಆನೆಗಳಿಗೂ ಯಾವ ನಿಮಿತ್ತನಿಂದ ವೈರವುಂಟಾಯಿತು ? ಯಾವ ರೀತಿ ಯಾಗಿ ಅವುಗಳು ಯುದ್ಧಮಾಡಿದವೆಂಬ ವೃತ್ತಾಂತವನ್ನು ತಿಳಿಯಬೇಕೆಂದು ಕುತೂ ಹಲಪಡುತ್ತಿದ್ದೇನೆ. ದಯಮಾಡಿ ವಿಸ್ತರಿಸಿ ಹೇಳು.

೨. ನಾಡಾಯನನು ಹೇಳುತ್ತಾನೆ:—ನಾನು ನಿನ್ನ ಸಂಗಡ ಆನೆಗಳು ವನಾ ಷ್ಟಕಗಳಲ್ಲಿ ವಾಸಮಾಡುವ ವೃತ್ತಾಂತವನ್ನು ಈ ಹಿಂದೆಯೇ ತಿಳಿಸಿದೇನೆಯಷ್ಟೆ ? ಆ ವನಾಷ್ಟಕಗಳೆಲ್ಲವೂ ಈ ಭಾರತವರ್ಷದ ಒಂಭತ್ತನೆಯ ಭಾಗದಲ್ಲಿ ವಿಸ್ತಾರವಾಗಿ ವ್ಯಾಪಿಸಿವೆ.

ದ್ವೀಪೇಷು ರಾಜನ್ಸರ್ವೇಷು ವರ್ಷೇಷು ಚ ಪೃಥಕ್ಪೃಥಕ್ ।
ವನೇಷು ನಿವಸಂತ್ಯೇತೇ ಕರೀಂದ್ರಾ ವಾನರಾಸ್ತಥಾ ॥ ೩ ॥

ರಕ್ಷಂತಿ ವಾನರಾಸ್ತತ್ರ ಕಾನನೇಷು ಚ ಶಾಖಿನಃ ।
ಪಾತಯಂತಿ ದ್ರುಮಾನ್ನಾಗಾ ಲೀಲಯೈವ ಜನಾಧಿಪ ॥ ೪ ॥

ದ್ರುಮೇಷು ಪಾತ್ಯಮಾನೇಷು ಕುಂಜರಾಣಾಂ ತರಸ್ವಿನಾಂ ।
ವಾನರಾಃ ಕದನಂ ಚಕ್ರುಃ ಕ್ರೋಧಾವಿಷ್ಟಾಃ ಪುನಃ ಪುನಃ ॥ ೫ ॥

ಹನ್ಯಮಾನೇಷು ನಾಗೇಷು ಕರೀಂದ್ರಾಶ್ಚ ವಲೀಮುಖಾ ।
ಪಾತಯಂತಿ ಮಹಾರಾಜ ಶತಶೋಽಥ ಸಹಸ್ರಶಃ ॥ ೬ ॥

---

೩. ಭಾರತವರ್ಷ, ಇಳಾವೃತವರ್ಷವೇ ಮುಂತಾದ ಬೇರೆ ಬೇರೆ ಹೆಸರಿನ ಸಕಲ ವರ್ಷಗಳಲ್ಲೂ ಬೇರೆ ಬೇರೆಯಾಗಿ ಅನೇಕ ದ್ವೀಪಗಳಿವೆ. ಆ ದ್ವೀಪಗಳಲ್ಲೆಲ್ಲಾ ಅನೇಕ ಅರಣ್ಯಗಳಿವೆ. ಅಲ್ಲೆಲ್ಲಾ ಆನೆಗಳೂ ಕಪಿಗಳೂ ಬಹಳವಾಗಿ ವಾಸವಾಗಿವೆ.

೪. ಅಲ್ಲಿರುವ ವಾನರರೆಲ್ಲರೂ ತಾವು ವಾಸಮಾಡುವುದಕ್ಕಾಗಿ ಶಾಖೋಪಶಾಖೆಗಳಾದ ದೊಡ್ಡ ದೊಡ್ಡ ಮರಗಳನ್ನೆಲ್ಲಾ ಬಹಳ ಎಚ್ಚರದಿಂದ ಕಾಪಾಡಿಕೊಂಡಿವೆ. ಹೀಗೆ ಕಪಿಗಳು ಕಷ್ಟಪಟ್ಟು ಕಾಪಾಡಿಕೊಂಡಿರುವ ಮರಗಳನ್ನೆಲ್ಲಾ ಆನೆಗಳು ಬಂದು ಆಟವಾಡುತ್ತಾಮುರಿದು ಬಿಡುತ್ತಿದ್ದುವು.

೫. ಹೀಗೆ ಮರಗಳೆಲ್ಲಾ ಬಿದ್ದುಹೋಮುವನ್ನು ನೋಡಿ ವಾನರಶ್ರೇಷ್ಠರಿಗೆಲ್ಲಾ ಬಹಳ ಕೋಪಬಂದು, ಆ ಆನೆಗಳ ಮೇಲೆ ಬಿದ್ದು ಪದೇ ಪದೇ ಜಗಳವಾಡುತ್ತಲೇ ಇದ್ದವು.

೬. ಈ ರೀತಿ ನಡೆದ ಯುದ್ಧದಲ್ಲಿ ಕಪಿಗಳು ಅನೇಕ ಆನೆಗಳನ್ನು ಕೊಂದು ಬಿಟ್ಟವು. ಅದೇ ಮೇರೆ ಆನೆಗಳಿಂದಲೂ ಅನೇಕಾನೇಕ ವಾನರಗಳೂ ಸತ್ತು ಹೋದುವು. ಈ ಪ್ರಕಾರವಾಗಿ ನೂರಾರು ಸಾವಿರಾರು ಆನೆಗಳೂ ಕಪಿಗಳೂ ಸತ್ತು ಉರುಳಿ ನೆಲಕ್ಕೆಬಿದ್ದುವು.

ಏವಂ ಪ್ರವೃದ್ಧೇ ವೈರಂ ತು ವಾನರೈಃ ಕುಂಜರೈಸ್ತಥಾ ।
ರಾಜ್ಞೋ ನಿವೇದಿತಂ ಗತ್ವಾ ಮುಖ್ಯೈರಾವಣಯೋಸ್ತದಾ ॥ ೭ ॥

ತತಸ್ತೌ ಪಾರ್ಥಿವೌ ಕ್ರುದ್ಧೌ ಚಕ್ರತುರ್ಯತ್ನಮುತ್ತಮಂ ।
ವಾನರಾಸ್ತು ಮಹಾಕಾಯಾ ವೀರಾಃ ಪರಮರಂಹಸಃ ॥ ೮ ॥

ಋಕ್ಷಾಶ್ಚೈವ ಸ ಗೋಪುಚ್ಛಾಃ ಕಿಷ್ಕಿಂಧಾಂ ಪುನರಾಗತಾಃ ।
ಐರಾವಣಾಜ್ಞಾಂ ಯೇ ನಾಗಾಃ ಸಪಕ್ಷಾಃ ಪರ್ವತೋಪಮಾಃ ॥ ೯ ॥

ಪ್ರಾಚ್ಯಾಂ ವನಮಥಾಜಗ್ಮುಃ ಸರ್ವತಃ ಪೃಥಿವೀಪತೇ ।
ಬಲಾರ್ಣವಾವುಭೌ ಕ್ಷುಬ್ಧೌ ಕ್ರೋಧಾವಿಷ್ಟೌ ಪರಸ್ಪರಂ ॥ ೧೦ ॥

---

೭. ಈ ರೀತಿ ಯುದ್ಧವು ಪ್ರವೃದ್ಧವಾಗುತ್ತಿರಲು ಈ ವೃತ್ತಾಂತವನ್ನು ಕೆಲವು ಮಂದಿ ಗಜಮುಖ್ಯಗಳೂ, ಕೆಲವು ಮಂದಿ ವಾನರರೂ ತಮ್ಮ ತಮ್ಮೊಡೆಯರಾದ ಐರಾವಣ ಋಕ್ಷರಿಗೆ ತಿಳಿಸಿದುವು.

೮. ಆಗ ಗಜವಾನರರಾಜರಿಬ್ಬರೂ ಈ ವೃತ್ತಾಂತವನ್ನು ಕೇಳಿ (ಬುದ್ಧಿ ಸಾಲದೆ) ಆ ಸಮಯದಲ್ಲಿ ಸಮಾಧಾನವನ್ನು ಮಾಡಿಕೊಳ್ಳಲಾರದೆ, ಮಹತ್ತರವಾದ ಕೋಪದಿಂದ ಕೂಡಿದವರಾಗಿ ಯುದ್ಧವನ್ನು ಬಲಪಡಿಸುವ ಪ್ರಯತ್ನವನ್ನು ಮಾಡಿದರು.

೯. ಆ ಕೂಡಲೆ ಮಹಾವೇಗಶಾಲಿಗಳಾದ ಮಹಾಶರೀರಿಗಳಾದ ವೀರರಾದ ಕಪಿಗಳೂ, ಕರಡಿಗಳೂ, ಶಿಂಗಳೀಕಗಳೂ ಬಲುಬೇಗ ಕಿಷ್ಕಿಂಧಾಪಟ್ಟಣಕ್ಕೆ ಓಡಿ ಬಂದು ದೊಡ್ಡಸೈನ್ಯವನ್ನು ಸೇರಿಸಿಕೊಂಡು ಪುನಃ ಯುದ್ಧರಂಗಕ್ಕೆ ಪ್ರವೇಶಿಸಿದುವು.

೧೦. ಪರ್ವತದಂತೆ ಬಲು ದೊಡ್ಡ ದೊಡ್ಡ ದೇಹವುಳ್ಳ ಆನೆಗಳಿಗೆಲ್ಲಾ ಆ ಕಾಲದಲ್ಲಿ ರೆಕ್ಕೆಗಳಿದ್ದುವು. ಅಂತಹ ಸಪಕ್ಷವಾದ ಆನೆಗಳೆಲ್ಲವೂ ತಮ್ಮ ರಾಜನಾದ ಐರಾವತದ ಆಜ್ಞೆಯನ್ನು ಪಡೆದು ಪೂರ್ವದಿಕ್ಕಿನಲ್ಲಿದ್ದ ಅರಣ್ಯದಲ್ಲಿ ಭಯಂಕರವಾದ ಸೈನ್ಯವನ್ನು ಸೇರಿಸಿಕೊಂಡವು. ಎರಡುಪಕ್ಷದ ಸೈನ್ಯಗಳೂ ಸಹ ಮಹತ್ತರವಾದ ಕೋಪದಿಂದ ಅಲ್ಲಿ ಕೂಡಿದ್ದುದನ್ನು ನೋಡಿದರೆ, ದೊಡ್ಡ ಸಮುದ್ರಗಳಂತೆ ತೋರುತ್ತಿತ್ತು.

ಅಂತರ್ವೇದೀಂ ತದಾ ತೌ ತು ಜಗ್ಮತುರ್ಬಲದರ್ಪಿತೌ ।
ತತಃ ಪ್ರಾವರ್ತತ ರಣಂ ಘೋರರೂಪಂ ಭಯಾನಕಂ ॥ ೧೧ ॥

ಭೂಮೌ ಚೈವಾಂತರಿಕ್ಷೇ ಚ ನಾಗಾನಾಂ ಸಹ ವಾನರೈಃ ।
ದ್ರುಮಪ್ರಹಾರಾಭಿಹತಾಃ ಕುಂಜರಾ ವಾನರೋತ್ತಮೈಃ ॥ ೧೨ ॥

ಪತಂತೋ ಗಗನಾದ್ಭೂಮಿಂ ಚಾಲಯಂತಿ ಮುಹುರ್ಮುಹುಃ ।
ಯೂಥೇಷು ವಾನರಂ ಗೃಹ್ಯ ದ್ವಾ ನಾಗೌ ಗಗನೇ ತಥಾ ॥ ೧೩ ॥

ಪಾತಯಂತಿ ಮಹಾರಾಜ ಭಿಂದಂತಿ ದಶನೈಸ್ತಥಾ ।
ಮಮಂಥುರಪರೇ ಪಾದೈರ್ದೇಹೇನಾತಾಡಯಂಸ್ತಥಾ ॥ ೧೪ ॥

ವೃಕ್ಷಾನ್ಸ್ಕಂಧೈರಥೋತ್ಸೃಜ್ಯ ಚುಕ್ಷುಭುರ್ಯೇನ ವಾನರಾಃ ।
ಐರಾವತೇನ ನಿಹತಾಃ ಕೋಟಿಶಸ್ತತ್ರ ವಾನರಾಃ ॥ ೧೫ ॥

---

೧೧. ಈ ರೀತಿ ಕೂಡಿದ ಆ ಉಭಯಸೈನ್ಯಗಳೂ ಅಂತರ್ವೇದಿ (ದೊಡ್ಡ ಬಯಲಿ) ಗೆ ಪ್ರವೇಶಿಸಿ ಅಲ್ಲಿ ಭಯಂಕರವಾದ ಘೋರಕದನಕ್ಕೆ ಆರಂಭಮಾಡಿದುವು.

೧೨. ರೆಕ್ಕೆಗಳನ್ನು ಧರಿಸಿದ್ದ ಆನೆಗಳೂ ಭೂಮ್ಯಂತರಿಕ್ಷಗಳನ್ನು ಆವರಿಸಿ ನಿಂತುಕೊಂಡುಬಿಟ್ಟುವು. ಆಗ ವಾನರರು ದೊಡ್ಡ ದೊಡ್ಡ ಮರಗಳನ್ನು ಕಿತ್ತು ಕಿತ್ತು ಅವುಗಳಿಂದ ಆನೆಗಳನ್ನು ಪ್ರಹರಿಸಿ ಅವುಗಳನ್ನು ನಾಯಬಡಿಯುತ್ತಿದ್ದುವು.

೧೩. ಆನೆಗಳಾದರೋ ಆಕಾಶದಿಂದ ವೇಗವಾಗಿ ಹಾರಿಬಂದು ಭೂಮಿಯ ಮೇಲೆ ನಿಂತಿದ್ದ ವಾನರಗಳ ಮೇಲೆ ಬಿದ್ದು ತಮ್ಮ ಕಾಲುಗಳ ಗೊರಸಲಿಗೆ ಕಪಿಗಳನ್ನು ಸಿಕ್ಕಿಸಿಕೊಂಡ ಸೊಂಡಲಿನಿಂದ ಸೀಳಿಬಿಡುತ್ತಿದ್ದುವು.

೧೪. ಕೆಳಗೆ ಬಿದ್ದ ಕಪಿಗಳನ್ನು ಕೊಂಬುಗಳಿಂದಲೂ ಸೊಂಡಿಲುಗಳಿಂದಲೂ ಭೇದಿಸಿ ಸಂಹರಿಸುತ್ತಿದ್ದುವಲ್ಲದೆ, ತಮ್ಮ ಪರ್ವತೋಪಮವಾದ ದೇಹಗಳಿಂದ ಅವುಗಳನ್ನು ನುಚ್ಚುನುರಿಮಾಡಿಬಿಡುತ್ತಿದ್ದುವು.

೧೫. ಕಪಿಗಳ ದೇಹವೇನು ಅಲ್ಪಪ್ರಮಾಣವೆಂದು ತಿಳಿಯಕೂಡದು. ಮಹಾಕಾಯರಾದ ಕಪಿಗಳೆಲ್ಲರೂ ದೊಡ್ಡ ಮರಗಳನ್ನೇ ಕಿತ್ತು ಕಿತ್ತು ಗಜಗಳನ್ನು ಪ್ರಹಾರ ಮಾಡುತ್ತಿದ್ದರು. ಇದರಿಂದ ಬಹಳವಾದ ಕ್ಷೋಭೆಯನ್ನು ಹೊಂದಿದ ಗಜಯೂಥ

ಪದ್ಮೇನ ಸುಪ್ರತೀಕೇನ ವಾಮನೇನಾಂಜನೇನ ಚ ।
ಕುಮುದೇನ ಚ ನೀಲೇನ ಪುಷ್ಪದಂತೇನ ಚಾಪ್ಯಥ ॥ ೧೬ ॥

ತೇಷಾಮನ್ವಯ ಸಂಭೂತೈಸ್ತಥೈವಾನ್ಯೈಶ್ಚ ಕುಂಜರೈಃ ।
ಭದ್ರೇಣ ಚಾಥ ಮಂದೇನ ಮೃಗೇಣ ಚ ಮಹೀಪತೇ ॥ ೧೭ ॥

ಭದ್ರಮಂದೇನ ಮಿಶ್ರೇಣ ಸಾರ್ವಭೌಮೇನ ವೇಧಸಾ ।
ರಾಜ್ಞಾ ಸುಮನಸಾ ರಾಜಂಸ್ತಥೈವ ಚ ಸುವರ್ಚಸಾ ॥ ೧೮ ॥

ಬಲಾಹಕೇನ ಮತ್ತೇನ ಭೀಮೇನೇಂದೀವರೇಣ ಚ ।
ಹೇಮಕೂಟೇನ ಕೂಟೇನ ಶಂಖೇನ ನಿಷಧೇನ ಚ ॥ ೧೯ ॥

ಶ್ವೇತೇನ ರಾಜನ್ರಕ್ತೇನ ಕಾಂಚನೇನಾಂಗ ಸುಪ್ರಜ ।
ವಿರೂಪಾಕ್ಷೇಣ ಚೋಗ್ರೇಣ ಷಡ್ದಂತೇನಾಸಿತೇನ ಚ ॥ ೨೦ ॥

ಚತುರ್ದಂತೇನ ಯಕ್ಷೇಣ ರಕ್ಷಸಾ ಭೀಮಮಾಲಿನಾ ।
ಋಕ್ಷೇಣ ವಾನರೇಂದ್ರೇಣ ಕೋಟಿಶಃ ಕುಂಜರಾ ಹತಾಃ ॥ ೨೧ ॥

---

ವನ್ನು ನೋಡಿ ಐರಾವತನು ಕೋಟಿ ಕೋಟಿ ಸಂಖ್ಯಾಕರಾದ ವಾನರರನ್ನು ಕೊಂದು ಕೆಡವಿದನು.

೧೬. ಈರೀತಿ ಐರಾವಣನು ಘೋರಯುದ್ಧಕ್ಕಾರಂಭಿಸಿದ ಕಾಲದಲ್ಲಿ ಅದರ ಜತೆಗೆ ಪದ್ಮ, ಸುಪ್ರತೀಕ, ವಾಮನ, ಅಂಜನ, ಕುಮುದ, ನೀಲ, ಪುಷ್ಪದಂತ ಮುಂತಾದ ಮಹಾದಿಗ್ಗಜಗಳೂ ಸೇರಿಕೊಂಡವು.

೧೭-೧೮. ಮತ್ತು ಅವುಗಳ ವಂಶದಲ್ಲಿ ಹುಟ್ಟಿದ ಬೇರೆ ಬೇರೆ ಆನೆಗಳ ಗುಂಪೂ ಸಹ ಆ ಯುದ್ಧದಲ್ಲಿ ನೆರೆದಿದ್ದುವು. ಆ ಗುಂಪಿನಲ್ಲಿ ಭದ್ರಮಂದಾದಿಜಾತಿಗಳೂ, ಮಿಶ್ರಜಾತಿಯ ಆನೆಗಳೂ, ಸಾರ್ವಭೌಮನೆಂಬ ದಿಗ್ಗಜವೂ, ಸುಮನ ಸುವರ್ಚಾದಿನಾಮಕ ಗಜರಾಜರೂ ಸೇರಿಕೊಂಡಿದ್ದರು.

೧೯-೨೧. ಇತ್ತಕಡೆ ವಾನರಸೈನ್ಯವೇನು ತೆಪ್ಪನೆ ತಟಸ್ಥವಾಗಿದ್ದಿತೆನ್ನುವಿರೋ? ಹಾಗೆ ತಿಳಿದುಕೂಡದು. ಬಲಾಹಕ, ಭೀಮ, ಇಂದೀವರ, ಹೇಮಕೂಟ. ಕೂಟ, ಶಂಖ, ನಿಷಧ, ಶ್ವೇತ, ರಕ್ತ, ಕಾಂಚನ, ಸುಪ್ರಜ, ವಿರೂಪಾಕ್ಷ, ಉಗ್ರ, ಷಡ್ದಂತ,

**ಶರಭೇಣ ಗವಾಕ್ಷೇಣ ತಥಾ ಕನಕಬಿಂದುನಾ ।**
**ಋಕ್ಷರಾಜೇನ ಧೂಮ್ರೇಣ ತಥಾ ಜಾಂಬವತಾ ನೃಪ ॥ ೧೧ ॥**

**ಸುಷೇಣದಧಿವಕ್ತ್ರಾಭ್ಯಾಂ ತಥಾ ಕೇಸರಿಣಾ ರಣೇ ।**
**ರಣಚಂಡೇನ ವೀರೇಣ ವಾನರೇಂದ್ರೇಣ ಜಾನುನಾ ॥ ೧೨ ॥**

**ತಥಾ ಶತಬಲಿರ್ಯಶ್ಚ ತೇನಾಪಿ ಕದನಂ ಕೃತಂ ।**
**ಪನಸೇನ ವಿಶಾಲೇನ ಗಜೇನ ಗವಯೇನ ಚ ॥ ೧೪ ॥**

**ಹೇಮಕೂಟೇನ ವಿಭುನಾ ಭಾನುರೋಮ್ಣಾ ನಿಶಾಭೃತಾ ।**
**ಗಂಧಮಾದನನಾಮ್ನಾ ಚ ವಿಜಯೇನ ಜಯೇನ ಚ ॥ ೧೫ ॥**

**ಕುಮುದೇನಾಥ ಪದ್ಮೇನ ಕನಕಾಕ್ಷೇಣ ಶಂಭುನಾ ।**
**ಇತ್ಯೇವಂ ದೃಶ್ಯಮಾನೇಷು ವಾನರೇಷು ಗಜೇಷು ಚ ॥ ೧೬ ॥**

**ಚಚಾಲ ಮೇದಿನೀ ರಾಜಂಸ್ತಸ್ಮಿನ್ಕಾಲೇ ಮುಹುರ್ಮುಹುಃ ।**
**ಖಸ್ಥೈರ್ಭೂಸ್ಥೈಶ್ಚ ವಿಕ್ರಾಂತೈರ್ವಾನರೈಃ ಕುಂಜರೈಸ್ತಥಾ ॥ ೧೭ ॥**

---

ಅಸಿತ, ಚತುರ್ದಂತ, ಯಕ್ಷ, ರಕ್ಷರೇ ಮುಂತಾದ ನಾನಾವಿಧ ನಾಮಧೇಯುಗಳುಳ್ಳ ಗಜರಾಜರೆಲ್ಲರೂ ವಾನರ ಸಾರ್ವಭೌಮನಾದ ಋಕ್ಷನಿಂದ ಕೋಟಿ ಕೋಟಿ ಸಂಖ್ಯಾಕರಾಗಿ ಹತರಾದರು.

೧೧-೧೬. ವಾನರಸೈನ್ಯದ ಮುಖ್ಯ ಮುಖ್ಯರಾದ ಸೇನಾನಾಯಕರ ಹೆಸರನ್ನು ಸ್ವಲ್ಪ ಬರೆಯೋಣ:—ಶರಭ, ಗವಾಕ್ಷ, ಕನಕಬಿಂದು, ಧೂಮ್ರ, ಜಾಂಬವಂತ, ಸುಷೇಣ, ದಧಿವಕ್ತ್ರ, ಕೇಸರಿ, ರಣಚಂಡ, ವೀರ, ಜಾನು, ಶತಬಲಿ ಮತ್ತು ಮಹಾವೀರಾಧಿವೀರರಾದ ಪನಸ, ವಿಶಾಲ, ಗಜ, ಗವಯ, ಹೇಮಕೂಟ, ವಿಭು, ಭಾನುರೋಮ, ನಿಶಾಭೃತ, ಗಂಧಮಾದನ, ವಿಜಯ, ಜಯ, ಕೌಮುದ, ಪದ್ಮ, ಕನಕಾಕ್ಷ, ಶಂಭು, ಇತ್ಯಾದಿ ವಾನರವೀರರೆಲ್ಲರೂ ಮೇಲೆ ಬರೆದ ಗಜವೀರರೊಡನೆ ಕೂಡಿ ಯುದ್ಧ ಮಾಡಿದಂಥವರಾದರು.

೧೭. ಈರೀತಿ ಗಜವಾನರ ಸಂಗ್ರಾಮವು ನಡೆಯುತ್ತಿದ್ದ ಕಾಲದಲ್ಲಿ ಪದೇ ಪದೇ ಭೂಕಂಪ (ನಡುಗುವುದು) ವಾಗುತ್ತಿತ್ತು. ಓಡಾಡುವುದು, ಹೊಡೆದಾಡು

ಪತ್ರೈಶ್ಚ ಹನ್ಯಮಾನೈಶ್ಚ ಘೋರಮಾಯೋಧನಂ ಬಭೌ ।
ಶರೀರೈರ್ಯತ್ರ ಸಂರುದ್ಧಾಃ ಪ್ರವಂಹೋ ರುಧಿರಾಪಗಾಃ ॥ ೨೮ ॥

ವಾನರಾಣಾಂ ಗಜಾನಾಂ ಚ ಮಹಾಶ್ಶೈಲೋಪಮೈರ್ನೃಪ ।
ತಸ್ಮಿಂಸ್ತಥಾವಿಧೇ ಯುದ್ಧೇ ಗಜವಾನರಸಂಕ್ಷಯೇ ॥ ೨೯ ॥

ಆಜಗಾಮಾಥ ತಂ ದೇಶಂ ಸ್ವಯಂ ದೇವಃ ಶತಕ್ರತುಃ ।
ಅಭ್ಯೇತ್ಯ ವಾರಯಾಮಾಸ ವಾನರಾಂಶ್ಚೈವ ಕುಂಜರಾನ್ ॥ ೩೦ ॥

ತತಶ್ಚ ವಾನರಾಃ ಸರ್ವೇ ಶಕ್ರಗೌರವಯಂತ್ರಿತಾಃ ।
ಸ ನ್ಯವರ್ತಂತ ಸಂಗ್ರಾಮಾತ್ಪ್ರಾಪ್ತಾಃ ಪ್ರಾಂಜಲಯಃ ಸ್ಥಿತಾಃ ॥ ೩೧ ॥

ತ್ಯಕ್ತಯುದ್ಧಾನ್ಪ್ರಶೋ ಜಘ್ನುರ್ವಾನರಾನ್ಕುಂಜರಾಸ್ತಥಾ ।
ಕ್ರುದ್ಧಸ್ತೇಷಾಂ ಮಹೇಂದ್ರಸ್ತು ವಜ್ರೇಣ ಶತಪರ್ವಣಾ ॥ ೩೨ ॥

---

ವುದು ತಿಪ್ಪಳಿಸುವುದೇ ಮುಂತಾದ ಘಟನೆಗಳಿಂದ ಭೂದೇವಿಯು ಬಹಳ ಭಾರಾನ್ವಿತಳಾಗಿ ನಡುಗಿಹೋದಳು.

೨೮. ಈರೀತಿ ಸತ್ತಿರುವ, ಸಾಯುತ್ತ ಬಿದ್ದಿರುವ ಗಜವಾನರ ಶರೀರಗಳಿಂದೊಡಗೂಡಿದ ಯುದ್ಧಕ್ಷೇತ್ರವು ಭಯಂಕರವಾದ ರಕ್ತದ ಹೊಳೆಗಳಿಂದ ಕೂಡಿ ದಿಗಿಲನ್ನುಂಟುಮಾಡುತ್ತಲಿದ್ದಿತು.

೨೯-೩೦. ಈ ಪ್ರಕಾರವಾಗಿ ಗಜವಾನರರೆಲ್ಲರೂ ಸಮರಾಂಗಣವಲ್ಲಿ ಮಡಿದು ಬೀಳಲು ಅವುಗಳ ಹೆಣದರಾಶಿಯು ದೊಡ್ಡ ದೊಡ್ಡ ಬೆಟ್ಟಗಳು ಉರುಳುರುಳಿ ಬಿದ್ದಂತೆ ತೋರುತ್ತಿದ್ದಿತು. ಈ ವೃತ್ತಾಂತವು ದೇವೇಂದ್ರನಿಗೆ ತಿಳಿದುಬರಲು ಆ ಕೂಡಲೆ ಇಂದ್ರನು ಆ ಪ್ರದೇಶಕ್ಕೆ ಆ ಗಜಗಳನ್ನೂ, ವಾನರರನ್ನೂ ತಡೆದು ಯುದ್ಧವನ್ನು ನಿಲ್ಲಿಸುವಂತೆ ಹೇಳಿದನು.

೩೧. ಇಂದ್ರನ ಮಾತಿಗೆ ಗೌರವವನ್ನು ಕೊಟ್ಟು ಸಕಲ ವಾನರರೂ ಆ ಯುದ್ಧರಂಗವನ್ನು ತ್ಯಾಗಮಾಡಿ ಎರಡು ಕೈಗಳನ್ನೂ ಮುಗಿದುಕೊಂಡು ಕತ್ತು ಒಗ್ಗಿಸಿಕೊಂಡವರಾಗಿ ತಮ್ಮ ತಮ್ಮ ಊರುಗಳಿಗೆ ಹೋಗಿ ಸೇರಿಕೊಂಡರು.

೩೨. ಇಂತು ತಾಳ್ಮೆಯಿಂದ ಇಂದ್ರನಮಾತಿಗೆ ಗೌರವಕೊಟ್ಟು ಯುದ್ಧೋದ್ಯಮವನ್ನು ನಿಲ್ಲಿಸಿ ರಣರಂಗದಿಂದ ಹಿಂತಿರುಗಿ ಹೋಗುತ್ತಿದ್ದ ವಾನರರನ್ನು ಗಜಗಳು

ಪಕ್ಷಾಂಶ್ಚಿಚ್ಛೇದ ನಾಗಾನಾಂ ನಿಹತಾ ಯೈರ್ವಲೀಮುಖಾಃ ।
ಛಿನ್ನಪಕ್ಷಾಂಸ್ತದಾ ನಾಗಾನ್ವಾಹನಾರ್ಥಂ ಮಹೀತಲೇ ॥ ೩೨ ॥

ಪ್ರದದೌ ಲೋಮಪಾದಾಯ ತದಾಽಂಗೇಶಾಯ ಪಾರ್ಥಿವ ।
ಲೋಮಪಾದೋಽಪಿ ನೃಪತಿಸ್ತದಾ ತೇಷಾಂ ಚಿಕಿತ್ಸಿತಂ ॥ ೩೪ ॥

ಶಿಕ್ಷಾಂ ಸ್ವಸ್ತ್ಯಯನಂ ಚೈವ ಚಕ್ರೇ ಸೂತ್ರನಿಬಂಧನಂ ।
ತತಃ ಪ್ರಭೃತಿ ಲೋಕೇಽಸ್ಮಿನ್ವಾಹನತ್ವಂ ಗತಾ ಗಜಾಃ ॥ ೩೫ ॥

ಗುರ್ವಿಣೀಭಿರ್ವನಸ್ಥಾಭಿಃ ಕರಿಣೀಭಿರ್ಜನೇಶ್ವರ ।
ವನೇ ವಿವರ್ಧಿತಾ ವಂಶಾಃ ಕುಂಜರಾಣಾಂ ಪುನಃ ಪುನಃ ॥ ೩೬ ॥

ಸುಮ್ಮನಿರದೆ ಹೊಡೆಯುವುದಕ್ಕೆ ಹೊರಟನು. ಈರೀತಿ ಹೊರಟ ಆನೆಗಳ ಚೇಷ್ಟೆಯನ್ನು ನೋಡಿ ಇಂದ್ರನಿಗೆ ಬಹಳ ಕೋಪವುಂಟಾಗಿ ತನ್ನ ವಜ್ರಾಯುಧವನ್ನು ಕೈಗೆ ತೆಗೆದುಕೊಂಡನು.

೩೩-೩೪. ಅನ್ಯಾಯವಾಗಿ ಕಪಿಗಳನ್ನು ಕೊಲ್ಲುತ್ತಿದ್ದ ಆನೆಗಳನ್ನು ನೋಡಿ ಇಂದ್ರನು ತನ್ನ ಹಸ್ತದಲ್ಲಿ ಹಿಡಿದಿದ್ದ ವಜ್ರಾಯುಧದಿಂದ ಅವುಗಳ ರೆಕ್ಕೆಗಳನ್ನೆಲ್ಲಾ ತರಿದು (ಕತ್ತರಿಸಿ) ಬಿಟ್ಟನು. ಈರೀತಿ ರೆಕ್ಕೆಗಳನ್ನು ಕಳೆದುಕೊಂಡ ಆನೆಗಳನ್ನು ವಾಹನಾರ್ಥವಾಗಿರುವಂತೆ ಸಂಕಲ್ಪಮಾಡಿ, ಆ ಇಂದ್ರನು ಅಂಗದೇಶದ ರಾಜನಾದ ಲೋಮಪಾದನ ವಶಕ್ಕೆ ಆ ಆನೆಗಳನ್ನು ಒಪ್ಪಿಸಲು, ಅವುಗಳಿಗೆ ಸರಿಯಾದ ಶಿಕ್ಷೆಯನ್ನೂ ಚಿಕಿತ್ಸೆಯನ್ನೂ ಆ ಅಂಗರಾಜನು ಮಾಡಿದನು.

೩೫ ಆಗ ಲೋಮಪಾದನು ಗಜಶಿಕ್ಷೆಗೋಸ್ಕರ ಒಂದು ಶಾಸ್ತ್ರವನ್ನೇ ರಚಿಸಿದನು. ಅದರಲ್ಲಿರುವ ಸೂತ್ರಗಳೆಲ್ಲವೂ ಗಜಶಿಕ್ಷಾಕ್ರಮವನ್ನೂ ಸ್ವಸ್ತ್ಯಯನ (ಪುಣ್ಯಾಹ) ಕ್ರಮವನ್ನೂ ನಿರೂಪಿಸಿರುವುವು (ಅಶ್ವಶಿಕ್ಷಾ. ಗಜಶಿಕ್ಷಾ ಎಂಬ ಶಾಸ್ತ್ರಗಳೇ ಇವು)

೩೬. ಅಲ್ಲಿಂದೀಚೆಗೆ ಆನೆಗಳೆಲ್ಲವೂ ಭೂಲೋಕದಲ್ಲಿ ಜನರ ವಾಹನಾರ್ಥವಾಗಿ ಏರ್ಪಟ್ಟವು. ಈ ಗಜಗಳ ವಂಶವು ಅಂದಿನಿಂದಲೂ ಬೆಳೆಯುತ್ತಲೇ ಬಂದಿದೆ. ಈಗಲೂ ನಾವು ವನಗಳಲ್ಲಿ ಸಂಚರಿಸುತ್ತಿರುವ ಬಹು ದೊಡ್ಡ ದೊಡ್ಡ ಆಕಾರವುಳ್ಳ ಆನೆಗಳನ್ನು ಇಂದಿಗೂ ನೋಡಬಹುದಾಗಿದೆ.

ವನೇಷ್ವಪಿ ತದಾ ಜಾತಾ ವಿಪಕ್ಷಾಃ ಕುಂಜರೋತ್ತಮಾಃ ।
ಛಿನ್ನಪಕ್ಷೇಷು ಜಾತೇಷು ಪ್ರಭಾವೇಣ ಶತಕ್ರತೋಃ ॥ ೩೭ ॥

ವಾನರಾಶ್ಚ ಜಯಂ ಲಬ್ಧ್ವಾ ಪ್ರಣಿಪತ್ಯ ಪುರಂದರಂ ।
ಸ್ಥಾನಾನಿ ಜಗ್ಮುಃ ಸ್ವಾನ್ಯೇವ ರಾಜ್ಞಾ ಋಕ್ಷೇಣ ಪೂಜಿತಾಃ ॥ ೩೮ ॥

ಏವಂ ವಿಧೈರಭೂತ್ತೇಷಾಂ ವಾನರಾಣಾಂ ತು ಕುಂಜರೈಃ ।
ಯುದ್ಧಮಾಸೀನ್ಮಹಾಘೋರಂ ವಿಜಿತಾ ಯತ್ರ ಕುಂಜರಾಃ ॥ ೩೯ ॥

ವಾನರಾಶ್ಚ ಮಹಾಭಾಗಾ ವಾನರೇಂದ್ರಪ್ರಮರ್ದನಾಃ ।
ದೈವಯೋಗೇನ ವಿಜಿತೇ ಭರತೇಽಪಿ ಯದೃಚ್ಛಯಾ ।
ಕ್ಷಿಪ್ರಮೇವೋದ್ಧರಿಷ್ಯಂತಿ ತ್ವಾಂ ಸಮೇತ್ಯ ಸಬಾಂಧವಂ ॥ ೪೦ ॥

---

೩೭. ಇಂದ್ರನು ರೆಕ್ಕೆಗಳನ್ನು ಕತ್ತರಿಸಿದ ಮೇಲೆ ಹುಟ್ಟಿದ ಆನೆಗಳಿಗೆಲ್ಲಾ ರೆಕ್ಕೆಯಿಲ್ಲವೇ ಇಲ್ಲ. ಇಂದ್ರನ ಮಹಾಮಹಿಮೆಯಿಂದ ಈ ಕ್ರಮವನ್ನನುಸರಿಸಿ ಆನೆಗಳ ರೆಕ್ಕೆಗಳು ಅದೃಶ್ಯವಾಗಿ ಹೋದುವು.

೩೮. ಇಂದ್ರನು ಯಾವಾಗ ಗಜಗಳನ್ನು ಈ ರೀತಿಯಿಂದ ಶಿಕ್ಷಿಸಿ ಅವುಗಳ ಪಕ್ಷಗಳನ್ನು ಛೇದಿಸಿ ಅವುಗಳ ಗರ್ವವನ್ನು ಮುರಿದನೋ, ಅದರಿಂದ ವಾನರರೆಲ್ಲರೂ ಸಂತೋಷಪಟ್ಟವರಾಗಿ ತಮಗೆ ಇಂದ್ರನಿಂದ ಜಯವು ಲಭಿಸಿದುದಕ್ಕಾಗಿ, ಆ ಇಂದ್ರನ ಮುಂದೆ ಸಾಷ್ಟಾಂಗವಾಗಿ ನಮಸ್ಕರಿಸಿದುವು.

೩೯. ವಾನರರಾಜನಾದ ಋಕ್ಷನೂ ಸಹ ಇಂದ್ರನನ್ನು ಪೂಜಿಸಿ, ಶಾಂತಾತ್ಮರಾದ ತನ್ನ ಸೈನಿಕರನ್ನು ಜೊಗಳಿ ಅವರವರ ಸ್ಥಳಕ್ಕೆ ಕಳುಹಿಸಿಕೊಟ್ಟನು. ಕೇಳೈ ; ಶೈಲೂಷ ! ನಾನು ಇದುವರೆಗೆ ನಿನ್ನೊಡನೆ ಹೇಳಿದಂತೆ ಗಜವಾನರ ಯುದ್ಧವು ನಡೆದು ಕಡೆಗೆ ಆನೆಗಳು ಪರಾಜಿತವಾದವಯ್ಯ !

೪೦. ಸಾಮಾನ್ಯರೆಂದೆನಿಸಿಕೊಂಡ ವಾನರರಿಂದ ಮಹಾಶೂರರೆನಿಸಿಕೊಂಡ ಗಜರಾಜರು ಅದೆಂತು ಸೋತುಹೋದರೋ, ಅದರಂತೆ ಸಾಮಾನ್ಯಮನುಷ್ಯನೆನಿಸಿಕೊಂಡ ಭರತನಿಂದ ಮಹಾಗಜೋಪಮನಾದ ನೀನು ಸೋತು ಸಾಯುವುದಕ್ಕಿಂತ ಮುಂಚಿತವಾಗಿಯೇ, ಆ ಭರತನ ಬಳಿಗೆ ಪುತ್ರಮಿತ್ರಬಾಂಧವ ಸಹಿತನಾಗಿ ಹೋಗಿ ಶರಣಾಗತನಾಗಿ ಅವನಿಗೆ ಅಡ್ಡಬೀಳು. ಆ ರಘುಕುಲತಿಲಕನಾದ ಭರತನು ನಿನ್ನನ್ನು ಉದ್ಧಾರಮಾಡುವನು.

ತಸ್ಮಾನ್ನ ಯುದ್ಧಂ ಮಮ ರೋಚತೇ ತೇ
ರಘೂದ್ವಹೇನಾಪ್ರತಿಮೇನ ರಾಜ್ಞ ।
ನಯಾತ್ಮನಾ ಚ ಪ್ರತಿಪೂರುಷೇಣ-
ಧರ್ಮಾಭಿರಾಮೇಣ ಜನಪ್ರಿಯೇಣ　　॥ ೪೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇಶೈಲೂಷಂಪ್ರತಿ ನಾರಾಯಣ ವಾಕ್ಯೇ ಗಜ
ವಾನರ ಯುದ್ಧವರ್ಣನಂ ನಾಮ ತ್ರಿಪಂಚಾಶದುತ್ತರ
ದ್ವಿಶತತಮೋಽಧ್ಯಾಯಃ



೪೧. ಎಲೈ ಶೈಲೂಷನೆ! ಇದನ್ನೆಲ್ಲಾ ಯೋಚಿಸಿಯೇ ನಾನು ನಿನ್ನನ್ನು ಕುರಿತು, ಆ ವೀರನಾದ ಭರತನ ಸಂಗಡ ಯುದ್ಧಮಾಡುವುದು ಸ್ವಲ್ಪವೂ ಯೋಗ್ಯ ವಲ್ಲವೆಂದು ಇಷ್ಟು ವಿಚಾರಗಳನ್ನೆಲ್ಲಾ ನಿನ್ನೊಡನೆ ತಿಳಿಸಿರುತ್ತೇನೆ. ಜನಪ್ರಿಯನಾದ ಭರತಮಹಾರಾಜನನ್ನು ಧರ್ಮವೇ ರೂಪಾಂತ ಪರಮಪುರುಷನೆಂದು ಭಾವಿಸಿ ಅವ ನಿಗೆ ಶರಣಾಗತನಾಗು. ಈ ಪ್ರಕಾರವಾಗಿ ಶೈಲೂಷನಿಗೆ ನಾರಾಯಣನು ಧರ್ಮೋಪ ದೇಶಮಾಡಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಗಜವಾನರ ಯುದ್ಧವರ್ಣನೆಯೆಂಬ
ಹೆಸರಿನ ಇನ್ನೂರೈವತ್ತಮೂರನೆಯ ಅಧ್ಯಾಯ
ಮುಗಿದುದು.



ಶ್ರೀಃ

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಚತುಷ್ಪಂಚಾಶದುತ್ತರ ದ್ವಿಶತತಮೋಽಧ್ಯಾಯಃ ॥

॥ ಶೈಲೂಷ ಉವಾಚ ॥

ಶ್ರುತಮೇತನ್ಮಯಾ ಸರ್ವಂ ಯತ್ತ್ವಯೋಕ್ತಂ ಪುನಃ ಪುನಃ ।
ಪ್ರಣಿಪಾತಮಹಂ ಕರ್ತುಂ ನ ಶಕ್ತೋ ಭರತಾಯ ತು ॥ ೧ ॥

ಉದ್ಯಚ್ಛೇದೇವ ನ ನಮೇದುದ್ಯಮಶ್ಚೈವ ಪೌರುಷಂ ।
ಅದ್ಯ ಸರ್ವನಿರುದ್ಯೋಗಂ ನ ನಮೋ ಚೇಹ ಕಸ್ಯಚಿತ್ ॥ ೨ ॥

ಅತಿಕ್ಲೇಶೇನ ಯೋಽರ್ಥಾಃ ಸ್ಯುರ್ಧರ್ಮಸ್ಯಾತಿಕ್ರಮೇಣ ಚ ।
ಅರೇರ್ವಾ ಪ್ರಣಿಪಾತೇನ ಮಾಸ್ಮತೇಷು ಮನಃ ಕೃಥಾಃ ॥ ೩ ॥

---

### ಇನ್ನೂರೈವತ್ತನಾಲ್ಕನೆಯ ಅಧ್ಯಾಯವು.

೧. ಶೈಲೂಷನು ಹೇಳುತ್ತಾನೆ :—ಎಲೈ ನಾರಾಯಣಮಹರ್ಷಿಯೇ! ನೀನು ಇದುವರಿಗೆ ಒತ್ತಿಯೊತ್ತಿ ಹೇಳಿದ ಮಾತುಗಳೆಲ್ಲಾ ನನಗೆ ಚೆನ್ನಾಗಿ ಅರ್ಥವಾಯಿತು. ಎಷ್ಟೇ ನೀನು ಹೇಳಿದಾಗ್ಯೂ ನಾನು ಭರತನ ಮುಂದೆ ತಲೆತಗ್ಗಿಸುವುದಕ್ಕೆ ಖಂಡಿತವಾಗಿ ಒಪ್ಪುವವನಲ್ಲ.

೨ ನಾನು ತಲೆತಗ್ಗಿಸುವುದಾದರೆ ನನ್ನನ್ನು ನಾನೇ ಬುಡಮಟ್ಟವಾಗಿ ಕತ್ತರಿಸಿಕೊಂಡಂತೆಯೇ ಆಯಿತು. ನನ್ನ ಪೌರುಷವು ಆಗೇನಾಯಿತು? ಹೇಳು. ನನಗೆ ಈಗ ಮಾಡುವುದಕ್ಕೇನೂ ಕೆಲಸವಿಲ್ಲದೆ ಇದ್ದರೂ ಸರಿಯೆ! ನಾನು ಮಾತ್ರ ಒಬ್ಬನಿಗೂ ತಲೆಬಾಗಿ ನಡೆಯುವವನಲ್ಲ, ಕಂಡೆಯಾ?

೩. ಬಹಳ ಕ್ಲೇಶವನ್ನಾದರೂ ಅನುಭವಿಸಿ, ಧರ್ಮದ ಎಲ್ಲೆಯನ್ನಾದರೂ ಮೀರಿ ಯಾವ ಪ್ರಯೋಜನವನ್ನು ಹೊಂದಬಹುದೋ ಅದಕ್ಕೂ, ಶತ್ರುವಿನ ಮುಂದೆ

ಆಜ್ಞಾಫಲಂ ಯದಾ ರಾಜ್ಯಂ ಪ್ರಣಿಪತ್ಯ ತದಾ ಪರಂ ।
ಕಿಂ ನೋ ರಾಜ್ಯೇನ ಕರ್ತವ್ಯಂ ಸಾಮಾನ್ಯಜನಧರ್ಮಿಣಾ ॥ ೪ ॥

ಪ್ರಣಿಪತ್ಯ ನರಃ ಶತ್ರುಂ ಮಾನೀ ಶೌಂಡೀರ್ಯವರ್ಜಿತಃ ।
ಕಥಂ ಶಕ್ನೋತ್ಯವಸ್ಥಾತುಂ ಭಾರ್ಯಾದೃಗ್ವಿಷಯೇಽಪ್ಯಪಿ ॥ ೫ ॥

ಅರೇರ್ವಾ ಪ್ರಣಿಪಾತಸ್ಯ ಸಂಗ್ರಾಮೇ ಮರಣಸ್ಯ ಚ ।
ಯದಂತರಂ ತದ್ಭವತಿ ಬ್ರಹ್ಮಹತ್ಯಾಶ್ವಮೇಧಯೋಃ ॥ ೬ ॥

॥ ಮಾರ್ಕಂಡೇಯ ಉವಾಚ ॥
ಶೈಲೂಷವಚನಂ ಶ್ರುತ್ವಾ ತದಾ ನಾಡಾಯನೋ ದ್ವಿಜಃ ।
ಜಗಾಮ ಸ್ವಗೃಹಾಯೈವ ಹತಂ ಮತ್ವಾ ಜನೇಶ್ವರಂ ॥ ೭ ॥

ತಲೆ ತಗ್ಗಿಸುವುದಕ್ಕೂ ಒಂದೇ ಬೆಲೆ (ತೂಕ) ಯೆಂದು ನಾನು ಬಲ್ಲೆ. ಅಂತಹ ಮಾನಗೆಟ್ಟ ಕೆಲಸವನ್ನು ಮಾಡಲು ನನ್ನ ಮನಸ್ಸೊಪ್ಪುವುದಿಲ್ಲ. ಕಂಡೆಯಾ ನಾಡಾಯನ!

೪. ರಾಜನ ಹೆಚ್ಚಿಗೆಯೆಂದರೆ ಆಜ್ಞಾಫಲವೆಂದೇ ನಾನು ತಿಳಿದಿದ್ದೇನೆ. ನರೇಂದ್ರರ ಆಜ್ಞಾಭಂಗವೂ, ವಿಪ್ರರ ಮಾನಖಂಡನವೂ, ನಾರಿಯರ ಪೃಥಕ್ಶಯ್ಯೆಯೂ ಶಸ್ತ್ರವಿಲ್ಲದೆ ಕತ್ತರಿಸುವ ದಾರಿಗಳೆಂದು ನಾನು ಚೆನ್ನಾಗಿ ಬಲ್ಲೆನಯ್ಯಾ! ಬ್ರಾಹ್ಮಣ! ರಾಜನಾದ ಮೇಲೆ ಶತ್ರುವಿಗೆ ತಲೆತಗ್ಗಿಸುವುದಾದರೆ ಅವನ ಯೋಗ್ಯತೆ! ಏನಾಯಿತು? ಹೇಳು. ನಾನು ಗಂಧರ್ವನಾಗಿದ್ದೂ ಸಾಮಾನ್ಯಜನರಂತೆ ಮನುಷ್ಯನಿಗೆ ತಲೆತಗ್ಗಿಸಿಬಿಟ್ಟರೆ, ಅಂತಹ ರಾಜ್ಯಾಧಿಕಾರವನ್ನು ಕಟ್ಟಿಕೊಂಡು ಮಾಡುವುದೇನಯ್ಯ, ಮಹರ್ಷಿ!

೫. ಮಾನಕ್ಕೆ ಬದುಕುವವನು ರಣಹೇಡಿಯೆನಿಸಿಕೊಂಡು ಶತ್ರುವಿಗೆ ತಲೆ ತಗ್ಗಿಸಿಬಿಟ್ಟನೆಂದರೆ, ಅವನ ಮಾತನ್ನು ಹೆಂಡತಿಯಾದವಳು ತಾನೇ ಕೇಳುತ್ತಾಳೆಯೇ? ಅಂಥವನು ಹೆಂಡತಿಯಾದವಳಿಗೆ ತಾನೇ ಅದೆಂತು ಮುಖವನ್ನು ತೋರಿಸಬಲ್ಲನು? ನೀನೇ ಹೇಳು.

೬. ಶತ್ರುವಿಗೆ ಶರಣಾಗತನಾಗಿ ತಲೆ ತಗ್ಗಿಸುವುದಕ್ಕೂ ಅಥವಾ ವೀರ್ಯಶೌರ್ಯ ದಿಂದ ಹೋಡೆದಾಡಿ ರಣರಂಗದಲ್ಲಿ ಮೃತನಾಗುವುದಕ್ಕೂ ಸಹ, ಬ್ರಹ್ಮಹತ್ಯೆ ಮತ್ತು ಅಶ್ವಮೇಧಯಾಗ ಮಾಡಿದವರಿಗಿರುವಷ್ಟು ಅಂತರವೆಂದು ನಾನು ಬಲ್ಲೆ.

೭. ಮಾರ್ಕಂಡೇಯನು ವಜ್ರರಾಜನನ್ನು ಕುರಿತು ಹೇಳುತ್ತಾನೆ:—ಎಲೈ ವಜ್ರನರಪತಿಯೆ! ಕೇಳು. ಮೇಲೆ ವಿವರಿಸಿದ ಮೇರೆ ಶೈಲೂಷ ನಾಡಾಯನರೀರ್ವ

**ನಾಡಾಯನೇ ತದಾ ಯಾತೇ ರಾಜಾ ಗಂಧರ್ವಸತ್ತಮಾನ್ ।**
**ಸಮಾಹೂಯಾ ಬ್ರವೀತ್ಕಾಂಶ್ಚಿತ್ಕಾಂಶ್ಚಿತ್ತತ್ರ ಕೃತಾಂಜಲೀನ್ ।**
**ಅವಜ್ಞಾಯ ನರಃ ಶತ್ರುಂ ಕ್ಷಿಪ್ರಮೇವ ವಿನಶ್ಯತಿ ॥ ೮ ॥**

**ತಸ್ಮಾತ್ಕಾರ್ಯಮವಜ್ಞಾನಂ ನ ಕದಾಚಿದರಾತಿಷು ।**
**ಕೇಚಿದಯೋಧ್ಯಾಂ ಗಚ್ಛಂತು ಗಂಧರ್ವಾ ಬಲದರ್ಪಿತಾಃ ॥ ೯ ॥**

**ಆನಯಂತು ಸ್ತ್ರಿಯಃ ಶೀಘ್ರಂ ತತ್ರ ಗತ್ವಾ ಚ ಮಾಯಯಾ ।**
**ಯೇ ಮುಖ್ಯಾಃ ಸೈನಿಕಾಸ್ತಸ್ಯ ಭರತಸ್ಯ ಸಮುತ್ಥಿತಾಃ ॥ ೧೦ ॥**

**ಸೈನಿಕಾನಾಂ ಸ್ತ್ರಿಯಸ್ತೇಷಾಂ ಕೃತ್ವಾ ಪ್ರಮುಖತೋ ರಣಂ ।**
**ಏವಂ ವಿಮನಸಾಂ ತೇಷಾಂ ಕರ್ತಾಸ್ಮಿ ಕದನಂ ಮಹತ್ ॥ ೧೧ ॥**

---

ರಿಗೂ ಬಹಳ ಹೊತ್ತು ಮಾತುಕಥೆ ನಡೆದ ಮೇಲೆ ಶೈಲೂಷನು ಹೇಳಿದ ಸಿದ್ಧಾಂತ (ಖಂಡಿತ) ವಾದ ಮಾತುಗಳನ್ನು ಕೇಳಿ ನಾಡಾಯನನು, ಇನ್ನು ಶೈಲೂಷನ ಅವಸ್ಥೆ (ಅವತಾರ) ಪೂರೈಸಿದಂತೆಯೇ ಸರಿಯೆಂದು ನಿಶ್ಚಯಿಸಿಕೊಂಡವನಾಗಿ ಮುಂದೆ ಇನ್ನಾವ ಮಾತನ್ನೂ ಆಡದೆ ತನ್ನ ಮನೆಗೆ ಹೊರಟುಹೋದನು.

೮. ನಾಡಾಯನನು ಮನೆಗೆ ಹೊರಟುಹೋದಮೇಲೆ ಶೈಲೂಷರಾಜನು ತನ್ನ ಮುಂದೆ ಸೊಂಟಕಟ್ಟಿ ಕೈಮುಗಿದು ನಿಂತುಕೊಂಡಿದ್ದ ಕೆಲವು ಮಂದಿ ಪರಿಜನರನ್ನು ಕುರಿತಿಂತೆಂದನು :—ಶತ್ರುವಿನ ವಿಷಯದಲ್ಲಾವನು ಉದಾಸೀನದಿಂದಿರುವನೋ ಅಂತಹವನು ಜಾಗ್ರತೆಯಾಗಿ ನಾಶವಾಗಿ ಹೋಗುತ್ತಾನೆ.

೯. ಆದ್ದರಿಂದ ಯಾವಾಗಲೂ ಶತ್ರುಗಳ ವಿಷಯದಲ್ಲಿ ಉದಾಸೀನದಿಂದಿರ ಬಾರದು. ಈಗ ನಿಮ್ಮಲ್ಲಿ ಬಲಿಷ್ಠರಾದ ಕೆಲವರು ಈ ಕೂಡಲೆ ಅಯೋಧ್ಯಾಪಟ್ಟಣಕ್ಕೆ ಹೊರಟುಬಿಡಬೇಕು.

೧೦. ಅಲ್ಲಿಗೆ ಹೋಗಿ ಮಾಯೆಯಿಂದ (ಯಾರ ಕಣ್ಣಿಗೂ ಕಾಣಿಸಿಕೊಳ್ಳ ದಂತೆ) ಸೈನಿಕರ ಹೆಂಡತಿಯರನ್ನೆಲ್ಲಾ ಹಿಡಿದು ತರಬೇಕು. ಅದರಲ್ಲೂ ಭರತನಿಗೆ ಸಮಾನವಾದ ಶೌರ್ಯವುಳ್ಳ ಶೂರರ ಹೆಂಡತಿಯರನ್ನು ಮುಖ್ಯವಾಗಿ ಎಳೆದುಕೊಂಡು ಬರಬೇಕು.

೧೧. ಸೈನಿಕರ ಹೆಂಡತಿಯರನ್ನೆಲ್ಲಾ ಮುಂದೆ ಮುಂದೆ ಬಿಟ್ಟುಕೊಂಡು ರಣ ರಂಗಕ್ಕೆ ಪ್ರವೇಶಮಾಡಬೇಕು. ತಮ್ಮ ತಮ್ಮ ಹೆಂಡತಿಯರನ್ನು ನೋಡಿ ಭರತನ

ಘಾತಯಿಷ್ಯಾಮಿ ಭರತಂ ಹತಸೈನ್ಯಮನಂತರಂ ।
ಶಿಬಿರಂ ಚಾಪರೇ ಯಾಂತು ಭರತಸ್ಯ ಸುವಿದ್ವಿಷಃ ॥ ೧೨ ॥

ನಿಘ್ನಂತು ಯೋಧಾನ್ಸಂಸುಪ್ತಾನ್ರಾತ್ರೌ ತಸ್ಯ ಸಹಸ್ರಶಃ ।
ಹತಸೈನ್ಯಂ ಹನಿಷ್ಯಾಮಿ ತತೋಽಹಂ ಭರತಂ ರಣೇ ॥ ೧೩ ॥

ರಾಜ್ಞೋ ಗೃಹಂ ತಥೈವಾನ್ಯೇ ಪ್ರವಿಶಂತು ಮಹಾಬಲಾಃ ।
ನಿಘ್ನಂತು ತತ್ರ ಸಂಸುಪ್ತಾನ್ಸೈನಿಕಾಂಸ್ತು ಯುಧಾಜಿತಃ ॥ ೧೪ ॥

ಹತಸೈನ್ಯಂ ಹನಿಷ್ಯಾಮಿ ಭರತಂ ಸಯುಧಾಜಿತಂ ।
ಅದೃಶ್ಯೈರ್ಮಾಯಯಾ ಗತ್ವಾ ಗಂಧರ್ವೈರ್ಬಲದರ್ಪಿತೈಃ ॥ ೧೫ ॥

---

ಸೈನಿಕರು ವಿಮನಸ್ಕರಾಗಿ ವ್ಯಾಕುಲರಾಗಿರುವ ವೇಳೆಯನ್ನು ನೋಡಿ ನಾನು ಭರತನನ್ನಿದಿರಿಸಿ ಅವನ ಮೇಲೆ ಯುದ್ಧಕ್ಕೆ ನಿಲ್ಲುತ್ತೇನೆ.

೧೨. ಯುದ್ಧದಲ್ಲಿ ಭರತನನ್ನು ಮೊದಲು ಕೊಂದು ಆ ಬಳಿಕ ಹತಾವಶಿಷ್ಟ ಸೈನ್ಯವನ್ನು ಸದೆಬಡಿಯುತ್ತೇನೆ. ನಿಮ್ಮಲ್ಲಿ ಕೆಲವರು ಅಯೋಧ್ಯಾಪಟ್ಟಣಕ್ಕೆ ಹೋಗಿ ನಾನೀಗ ಹೇಳಿದಂತೆ ಮಾಡಿರಿ. ಇನ್ನು ಕೆಲವರು, ಭರತನ ಸೈನಿಕರು ಇಳಿದುಕೊಂಡಿರುವ ಬಿಡಾರ (ಶಿಬಿರ) ಗಳಿಗೆ ನುಗ್ಗಿರಿ.

೧೩. ಆ ಸೈನಿಕರು ನಿದ್ದೆಮಾಡುತ್ತಿದ್ದ ಸಮಯವನ್ನು ನೋಡಿ ಅವರ ತಲೆಯನ್ನು ಕತ್ತರಿಸಿಹಾಕಿಬಿಡಿ. ಈ ಮೇರೆ ಅವನ ಸೈನಿಕರೆಲ್ಲರೂ ಹತರಾದ ಮೇಲೆ ದಿಕ್ಕಿಲ್ಲದ ಆ ಭರತನನ್ನು ನಾನು ಕೊಂದುಬಿಡುತ್ತೇನೆ.

೧೪. ಇನ್ನು ಕೆಲವು ಮಂದಿ ಶೂರರಾದ ನೀವು ರಾಜನ ಶಿಬಿರಕ್ಕೇ ನುಗ್ಗಿರಿ. ಅಲ್ಲಿ ಮಲಗಿರುವ ಅವನ ಆಪ್ತರಾದ ಅಂಗರಕ್ಷಕರನ್ನೂ (ಯುಧಾಜಿತನ ಕಡೆಯವರನ್ನು) ಸಂಹರಿಸಿಬಿಡಿ. ಹೀಗೆ ಭರತನೊಬ್ಬನೇ ಉಳಿಯುಕೊಳ್ಳುತ್ತಾನೆ. ನಿಸ್ಸಹಾಯನಾದ ಅವನನ್ನು ನಾನು ತೀರಿಸುತ್ತೇನೆ.

೧೫. ನೀವೆಲ್ಲರೂ ಈ ಕೆಲಸವನ್ನು ಮುಚ್ಚುಮರೆಯಾಗಿಯೇ ಮಾಡಬೇಕು. ಯಾರಿಗೂ ಕಾಣಿಸಿಕೊಳ್ಳಬಾರದು. ಅದೃಶ್ಯ (ಮಾಯಾವಿ) ತ್ವದಿಂದಲೇ ಇವನ್ನೆಲ್ಲಾ ನಿರ್ವಹಿಸಬೇಕು.

ಯಥೋಕ್ತಮೇತತ್ಕರ್ತವ್ಯಂ ವಚನಂ ಮಮ ಸತ್ವರೈಃ ।
ಏವಮುಕ್ತಾಸ್ತು ಗಂಧರ್ವಾಃ ಪ್ರಣಿಪತ್ಯ ಮಹೀಪತಿಂ ॥ ೧೬ ॥

ರಾಜಾಜ್ಞಾಂ ಶಿರಸಾಽಗೃಹ್ಯ ಜಗ್ಮುಸ್ತ್ವರಿತವಿಕ್ರಮಾಃ ।
ದಿನಶೇಷೇಣ ಸಂಪ್ರಾಪ್ಯ ಯಥೋದ್ದಿಷ್ಟಂ ಮಹೀಕ್ಷಿತಾ ॥ ೧೭ ॥

ವ್ಯಚೇಷ್ಟನ್ನಿಶಿ ರಾಜೇಂದ್ರ ಯಥಾಜ್ಞಪ್ತಂ ಚಿಕೀರ್ಷವಃ ।
ವಿಸರ್ಜಯಿತ್ವಾ ಗಂಧರ್ವಾನ್ ಶೈಲೂಷೋಽಪ್ಯಥ ಸತ್ವರಃ ॥ ೧೮ ॥

ಆಜ್ಞಾಪಯತ ಸೈನ್ಯಾನಿ ಶ್ವೋ ಯುದ್ಧಮಿತಿ ಪಾರ್ಥಿವ ।
ಜಗಾಮ ಚಾಸ್ತಂ ಸವಿತಾ ಕಮಲಾನಿ ವಿಶೀಲಯನ್ ।
ಛಾದಿತೇ ತಮಸಾ ಲೋಕೇ ಪ್ರವೃತ್ತಾ ಯಾಮಿನೀ ತಥಾ ॥ ೧೯ ॥

---

೧೬-೧೭. ಈ ಪ್ರಕಾರವಾಗಿ ಗಂಧರ್ವರಾಜನು ಅಪ್ಪಣೆಮಾಡಿದೊಡನೆಯೇ ಆ ಗಂಧರ್ವವೀರರೆಲ್ಲರೂ ಸಹ ಹಾಗೇ ಆಗಲೆಂದೊಪ್ಪಿಕೊಂಡು, ಅವನಿಗೆ ಅಡ್ಡಬಿದ್ದು ಪ್ರಯಾಣೋತ್ಸುಕರಾಗಿ ಬಹು ವೇಗದಿಂದ ಹೊರಟವರಾದರು. ಹೀಗೆ ಹೊರಟ ಆ ಗಂಧರ್ವರು ಸಾಯಂಕಾಲವಾಗುವುದರೊಳಗಾಗಿ ಅಯೋಧ್ಯಾಪಟ್ಟಣವನ್ನು ತಲಪಿದರು.

೧೮-೧೯. ಶೈಲೂಷನು ಯಾವ ಯಾವ ಸೈನಿಕರಿಗೆ ಏನೇನು ಮಾಡಬೇಕೆಂದು ಅಪ್ಪಣೆಮಾಡಿದನೋ ಆಯಾಯ ಕೆಲಸಗಳನ್ನು ರಾತ್ರಿವೇಳೆಯಲ್ಲಿಯೇ ಮಾಡಿ ಮುಗಿಸಬೇಕೆಂದು ಗಂಧರ್ವವೀರರು ಸಜ್ಜುಗೊಳಿಸಿಕೊಂಡರು. ಈ ಪ್ರಕಾರವಾಗಿ ಅನೇಕಮಂದಿ ಗಂಧರ್ವರನ್ನು ಕಳುಹಿಸಿಕೊಟ್ಟ ಬಳಿಕ ಉಳಿದಿದ್ದ ಸೈನಿಕರನ್ನು ಕುರಿತು ಶೈಲೂಷನು—ಎಲೈ ವೀರಶಿಖಾಮಣಿಗಳಿರಾ! ನಾಳೆಯದಿನವೇ ಯುದ್ಧ ನಡೆಯಬೇಕಾಗಿರುವುದರಿಂದ ನೀವೆಲ್ಲರೂ ರಣಸನ್ನದ್ಧರಾಗಿಯೇ ಬರಬೇಕು. ಹೀಗೆ ಆಜ್ಞಾಪಿಸುವ ಹೊತ್ತಿಗೆ ಸಂಜೆಯಾಗಲು ರಾಜನು ಅರಮನೆಯೊಳಹೊಕ್ಕನು. ಸೂರ್ಯನು ಅಸ್ತಪರ್ವತವನ್ನು ಹೊಕ್ಕನು. ಕಮಲದ ಹೂವುಗಳೆಲ್ಲಾ ಮುಚ್ಚಿಕೊಂಡವು. ಕತ್ತಲೆಯಿಂದ ಲೋಕವೆಲ್ಲವೂ ಮುಚ್ಚಿಹೋಯಿತು. ರಾತ್ರಿಯು ಸಂಪೂರ್ಣವಾಗಿ ತನ್ನ ಆಧಿಪತ್ಯವನ್ನು ಮಾಡತೊಡಗಿತು.

ಗಂಧರ್ವರಾಜೋಽಪಿ ತದಾ ವಿಜಹ್ರೇ
ಸ್ತ್ರೀಭಿಃ ಸಹಾಂತಃ ಪುರಮೇತ್ಯ ಸಾಕಂ ।
ಗಂಧರ್ವಪುತ್ರಾಶ್ಚ ತಥಾ ವಿಜಹ್ರುಃ
ಶ್ವೋ ಯುದ್ಧಮಿತ್ಯೇವ ವಿವೃದ್ಧದರ್ಪಾಃ ॥ ೨೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗಂಧರ್ವಪ್ರೇಷಣಂನಾಮ
ಚತುಷ್ಪಂಚಾಶದುತ್ತರದ್ವಿಶತತಮೋಽಧ್ಯಾಯಃ.

---

೨೦. ಗಂಧರ್ವರಾಜನಾದ ಶೈಲೂಷನು ತನ್ನ ಅಂತಃಪುರಕ್ಕೆ ಹೋಗಿ ಸುಂದರಿಯರೊಡನೆ ಕೂಡಿ ಮನಬಂದಂತೆ ವಿಹರಿಸಲಾರಂಭಿಸಿದನು. ಗಂಧರ್ವರಾಜಪುತ್ರರೂ ಸಹ ಅಂತೆಯೇ ತಮ್ಮ ತಮ್ಮ ಅಂತಃಪುರಗಳಿಗೆ ತೆರಳಿ ಗಂಧರ್ವಸುಂದರಿಯರೊಡನೆ ಕೂಡಿ ಯಥೇಚ್ಛವಾಗಿ ವಿಹರಿಸುತ್ತಾ, ನಾಳೆ ಯುದ್ಧ ನಡೆಯುವುದೆಂದು ದರ್ಪದಿಂದ ಜಂಭಕೊಚ್ಚಿಕೊಳ್ಳುತ್ತಿದ್ದರು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ-
ವಜ್ರಸಂವಾದರೂಪವಾದ ಗಂಧರ್ವಪ್ರೇಷಣೆಯೆಂಬ ಹೆಸರಿನ
ಇನ್ನೂರೈವತ್ತನಾಲ್ಕನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಪಂಚಪಂಚಾಶದುತ್ತರದ್ವಿಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ಆಜ್ಞಪ್ತಾ ಯೇ ತ್ವಯೋಧ್ಯಾಯಾಂ ಗಂಧರ್ವಾಸ್ತೇನ ಭೂಭುಜಾ ।
ಅಯೋಧ್ಯಾಂ ತೇ ಸಮಾಸೇದುರ್ನಿಶೀಥೇ ಲಘುವಿಕ್ರಮಾಃ ॥ ೧ ॥

ಮಾಯಾಚ್ಛನ್ನಶರೀರಾಶ್ಚ ವಿಚೇರುಸ್ತೇ ಮಹೀಪತೇ ।
ಅಯೋಧ್ಯಾಯಾಂ ಮಹಾರಾಜ ಪರಾಂಚ ದದೃಶುಃ ಶ್ರಿಯಂ ॥ ೨ ॥

---

### ಇನ್ನೂರೈವತ್ತೈದನೆಯ ಅಧ್ಯಾಯವು.

೧. ಮಾರ್ಕಂಡೇಯನು ವಜ್ರರಾಜನೊಡನೆ ಹೇಳುತ್ತಾನೆ:—

ಶೈಲೂಷರಾಜನಿಂದಾಜ್ಞಪ್ತರಾದ ಗಂಧರ್ವರು ಅಯೋಧ್ಯಾಪಟ್ಟಣವನ್ನು ತಲಪಿದಮೇಲೆ ಅರ್ಧರಾತ್ರಿಯ ಸಮಯದಲ್ಲಿ ಸೂಕ್ಷ್ಮದೇಹವನ್ನು ಧರಿಸಿದರು.

೨. ಈರೀತಿ ಮಾಯೆಯಿಂದ ತಮ್ಮ ದೇಹಗಳನ್ನು ಮರೆಮಾಡಿಕೊಂಡವರಾಗಿ ಆ ಗಂಧರ್ವರು ರಾತ್ರಿಯೆಲ್ಲಾ ಊರಿನಲ್ಲೋಡಾಡಿದರು. ತಾವು ಸಂಚರಿಸಿದ ಸಮಯದಲ್ಲಿ ಆ ಅಯೋಧ್ಯಾಪಟ್ಟಣದ ಅತ್ಯಪೂರ್ವ ಸಂಪತ್ತನ್ನು ಕಣ್ಣು ತುಂಬಾ ನೋಡಿದರು.

ಶಶಾಂಕಕರಶುಭ್ರಾಣಿ ಬಹುಧಾಮಾನಿ ಯಾದವ ।
ದದೃಶುರ್ಗೃಹಮುಖ್ಯಾನಿ ಶತಶೋಽಥ ಸಹಸ್ರಶಃ ॥ ೩ ॥

ಸರ್ವರತ್ನೋಪಪನ್ನಾನಿ ಶಯನಾಸನವಂತಿ ಚ ।
ಸುವರ್ಣದಾಮಚಿತ್ರಾಣಿ ಮುಕ್ತಾಜಾಲಚಿತಾನಿ ಚ ॥ ೪ ॥

ಪ್ರಜ್ವಲದ್ಭಿರ್ಮಹಾದೀಪೈರ್ದೀಪಿತಾನಿ ಸಮಂತತಃ ।
ಬಹುಮಾಲ್ಯಾನಿ ಮುಖ್ಯಾನಿ ದೀಪ್ತೋದ್ಯಾಗೇಣ ಪಾರ್ಥಿವ ॥ ೫ ॥

ಪ್ರವಿಷ್ಟಾ ಗೃಹಮುಖ್ಯೇಷು ದದೃಶುಸ್ತೇಷು ಮಾನವಾನ್ ।
ಚಂದನಾಗರುದಿಗ್ಧಾಂಗಾನ್ಸರ್ವಾಭರಣಭೂಷಿತಾನ್ ॥ ೬ ॥

೩. ಸುತ್ತಲೂ ವಿಸ್ತಾರವಾದ ಭೂಪ್ರದೇಶಗಳನ್ನೊಳಗೊಂಡ ಬಹು ಸ್ವಚ್ಛ ಹರ್ಮ್ಯಪಂಕ್ತಿಗಳನ್ನು (ಮಹಡಿಮನೆ ಅಥವಾ ಮ್ಯಾನ್ಷನ್) ನೂರಾರು ಸಾವಿರಾರು ಗಟ್ಟಲೆಯಾಗಿ ಗಂಧರ್ವರು ಆ ಊರಿನಲ್ಲಿ ನೋಡಿದರು.

೪. ಆ ದಿವ್ಯಸೌಧಗಳಲ್ಲಿ ಸಕಲ ವಿಧವಾದ ರತ್ನಗಳನ್ನೂ ಕೆತ್ತಿದ್ದ ಅನೇಕ ಮಂಚಗಳನ್ನು ಅವರು ನೋಡಿದರು. ಆ ಮಂಚಗಳ ಸುತ್ತಲೂ ಚಿನ್ನದ ಕೆತ್ತನೆ ಕೆಲಸಮಾಡಿದ್ದರು. ಮುತ್ತಿನಜಾಲರಿಗಳನ್ನು ಸುತ್ತಲೂ ಬಿಟ್ಟಿದ್ದರು.

೫. ಎಲ್ಲ ಮನೆಗಳಲ್ಲಿಯೂ ಮಹಾಪ್ರಕಾಶಮಾನವಾದ ದೀಪಗಳು ಎಲ್ಲಾ ಕಡೆಗಳಲ್ಲಿಯೂ ಉರಿಯುತ್ತಿದ್ದುವು. ದೀಪದ ಕಂದೀಲುಗಳನ್ನೂ ಗುಳೂಪುಗಳನ್ನೂ ಎತ್ತೆತ್ತಲೂ ತೂಗುಹಾಕಿದ್ದರು.

೬. ಗಂಧರ್ವರು ಆ ಮನೆಗಳೊಳಗೆ ಮಾಯಾಶರೀರದಿಂದಲೇ ಹೊಕ್ಕು ನೋಡಲಾಗಿ ಅಲ್ಲಿ ವಾಸವಾಗಿದ್ದ ಅನೇಕ ಜನ ಮನುಷ್ಯರನ್ನು ನೋಡಿದರು. ಅವರೆಲ್ಲರೂ ಸರ್ವಾಭರಣಭೂಷಿತರಾಗಿ ಮೈಗೆ ಗಂಧವನ್ನು ತೊಡೆದುಕೊಂಡು ಸುವಾಸನಾ ಪುಷ್ಪಹಾರಗಳನ್ನು ಧರಿಸಿದ್ದರು.

ಕ್ರೀಡಮಾನಾನ್ಸಹ ಸ್ತ್ರೀಭಿರ್ದಿವಿ ದೇವತಾಗಣಾನಿವ ।
ಭರತಾನುಗತಾನಾಂ ಚ ಸೈನಿಕಾನಾಂ ಗೃಹೇಷು ಚ ॥ ೭ ॥

ಸ್ತ್ರೀಣಾಂ ಭರ್ತೃವಿಹೀನಾನಾಂ ದದೃಶುರ್ಬಲಚೇಷ್ಟಿತಂ ।
ಕಾಚಿನ್ನ ಲೇಭೇ ಶಯನೇ ನಿದ್ರಾಮುದ್ಭ್ರಾಂತಲೋಚನಾ ॥ ೮ ॥

ಆಕುಲಂ ಶಯನಂ ಚಕ್ರೇ ಕಾಚಿದ್ಭೂಯೋ ವಿವರ್ತ್ತನೈಃ ।
ಮೃಣಾಲಿಶಯನೇ ಕಾಚಿತ್ಕದಲೀ ಪರ್ಣಸಂಸ್ತರೇ ॥ ೯ ॥

ಚಂದನಂ ಚಂದ್ರಪಾದೇಷು ಮೃಣಾಲವಲಯೇಷು ಚ ।
ಕಾಮಾಗ್ನಿನಾಶಾಶಕ್ತೇಷು ಕಾಚಿಚ್ಚಕ್ರೇ ತಥಾ ರುಷಂ ॥ ೧೦ ॥

---

೭. ದೇವಲೋಕದಲ್ಲಿ ದೇವತಾಸ್ತ್ರೀಯರೊಡನೆ ವಿಹರಿಸುವ ದೇವತೆಗಳಂತೆ ಅವರೆಲ್ಲರೂ ತಮ್ಮ ತಮ್ಮ ರಮಣಿಯರೊಡನೆ ವಿಹರಿಸುತ್ತಿದ್ದರು. ಭರತನ ಜತೆಯಲ್ಲಿ ಹೊರಟಿದ್ದ ಸೈನಿಕರ ಮನೆಗಳಲ್ಲೆಲ್ಲೆಲ್ಲಿಯೂ ಇದೇ ಮೋರೆ ನಡೆಯುತ್ತಿತ್ತು.

೮. ಯುದ್ಧಕ್ಕೆ ಪ್ರಯಾಣಮಾಡಿದ್ದ ಸೈನಿಕರ ಹೆಂಡತಿಯರು ತಮ್ಮ ತಮ್ಮ ಪತಿಗಳು ಊರಿನಲ್ಲಿರಲಿಲ್ಲವಾದ್ದರಿಂದ ಎಷ್ಟು ಹೊತ್ತಾದರೂ ನಿದ್ದೆಬರದೆ ಹಾಸಿಗೆಯಲ್ಲಿ ಬಿದ್ದು ಹೊರಳಾಡುತ್ತಿದ್ದರು.

೯. ತಾವರೇದಂಟಿನಂತೆ ಮೃದುವಾಗಿಯೂ, ಬಾಳೆಯ ಎಲೆಯಂತೆ ತಣ್ಣಗೂ ವಿಸ್ತಾರವಾಗಿಯೂ ಇದ್ದ ಸುಪ್ಪತ್ತಿಗೆಯ ಮೇಲೆ ಮಲಗಿದ್ದಾಗ್ಯೂ ಆ ವಿರಹಿಣಿಯರು ನಿದ್ದೆಯೇ ಬರದೆ ವ್ಯಾಕುಲಚಿತ್ತರಾಗಿದ್ದರು.

೧೦. ಚಂದ್ರಕಿರಣಗಳಂತೆ ಪ್ರಶಾಂತವಾದ ಗಂಧವನ್ನು ಮೈಗೆ ತೊಡೆದುಕೊಂಡಿದ್ದಾಗ್ಯೂ ತಾವರೇದಂಟಿನಂತೆ ಮೆತ್ತಗಿದ್ದ ಹಾಸಿಗೆಯಮೇಲೆ ಮಲಗಿದ್ದಾಗ್ಯೂ ವಿರಹಿಣಿಯೋರ್ವಳು ತನ್ನನ್ನು ಸುಡುತ್ತಿದ್ದ ಕಾಲಾ(ಮದನಾಗ್ನಿಯನ್ನು) ತಂಪುಗೊಳಿಸಲಾರದೆ ಕಾಮನಮೇಲೆ ರೇಗುತ್ತಿದ್ದಳು.

ಅಶ್ರುಧಾರಾ ನಿಪತಿತಾಃ ಕಾಮಾಗ್ನಿಪರಿದೀಪಿತೇ ।
ಅಂಬರೀಷೇ ಯಥಾ ನಾಶಂ ಕಸ್ಮಾಚ್ಛಿದ್ಯಾತಿ ವಕ್ಷಸಿ ॥ ೧೧ ॥

ಕಾಚಿನ್ಮೋಹ ಶಯನೇ ವರ್ಣಯಂತೀ ಸಖೀಜನೇ ।
ಲಬ್ಧನಿದ್ರಾ ತದಾ ದೈವಾತ್ಕಾಂತಸಂಭೋಗಜಂ ಸುಖಂ ॥ ೧೨ ॥

ತಾಲವೃಂತಾನಿಲೈಃ ಶೀತೈರ್ವೀಜ್ಯಮಾನಾ ಸಖೀಜನೈಃ ।
ಪಹ್ಯತಾಭ್ಯಧಿಕಂ ಕಾಚಿತ್ಸ್ವನಿಃಶ್ವಾಸವಿನಿಸ್ಸೃತೈಃ ॥ ೧೩ ॥

---

೧೧. ಕಾಮಾಗ್ನಿಯು ಹತ್ತಿಕೊಂಡು ಭಗ್ಗನೆ ಉರಿಯುತ್ತಿರುವುದನ್ನು ನೋಡಿ ಅದನ್ನಾರಿಸಬೇಕೆಂದು ಕಣ್ಣೀರುಗಳನ್ನು ಧಾರೆ ಧಾರೆಯಾಗಿ ಸುರಿಸುತ್ತಿದ್ದರೂ ಆ ಅಶ್ರುಧಾರಾಪ್ರವಾಹ (ಅಂಬರೀಷ) ವು ಎದೆಯ ಮೇಲೆ ಹರಿದುಹೋಗುತ್ತಿದ್ದರೂ ಆ ಅಗ್ನಿಯು ಶಾಂತವಾಗಲೇ ಇಲ್ಲ.

ಟಿಪ್ಪಣಿ: —ಅಶ್ರುಧಾರೆಗೆ (ಮಳೆಗೆ) ಅಂಬರೀಷವೆಂದು ಮೂಲದಲ್ಲಿ ಬರೆದಿದ್ದಾರೆ.

ಅಂಬರೀಷಂ ತ್ವಣೇವರ್ಷೇ ರಣೇಭ್ರಷ್ಟೇ ನಪುಂಸಕಂ ।
ನಾಕಿಶೋರೇ ಭೂಪಭೇದೇ ಶಂಭಾವಾಮಾತಕೇರವೌ ॥

ನಾನಾರ್ಥರತ್ನಮಾಲೆಯಲ್ಲಿ ಈ ರೀತಿ ಹೇಳಿರುವುದರಿಂದ ಇಲ್ಲಿ ಅಂಬರೀಷವೆಂಬ ಪದಕ್ಕೆ ವರ್ಷ ಅಥವಾ ಮಳೆ (ಕಣ್ಣೀರಿನ ಮಳೆ) ಯೆಂದು ಅರ್ಥಮಾಡಿಕೊಳ್ಳಬೇಕು.

೧೨. ಒಬ್ಬಾಳೊಬ್ಬ ವಿರಹಿಣಿಯು ಕಾಂತವಿರಹವಂ ತಾಳಲಾರದೆ ಕಾಮಾಗ್ನಿ ಸಂದೀಪ್ತಳಾಗಿ ತನ್ನ ಸಖಿಯೊಡನೆ ತನ್ನ ವಿರಹಾವಸ್ಥೆಯನ್ನು ವರ್ಣಿಸುತ್ತಾ ಸುಪ್ಪತ್ತಿಗೆಯ ಮೇಲೆ ಬಿದ್ದಿದ್ದಳು. ದೈವವಶಾತ್ತಾಗಿ ಅವಳಿಗೆ ಹಾಗೆಯೇ ಸ್ವಲ್ಪ ನಿದ್ದೆಯ ಜೊಂಪು ಹತ್ತಲು, ಆ ನಿದ್ದೆಯಲ್ಲಿ ತಾನು ಗಂಡನೊಡನೆ ಸಂಭೋಗಮಾಡಿಸಿ ಕೊಂಡು ಸುಖಪಟ್ಟಂತೆ ಕನಸನ್ನು ಕಂಡಳು.

೧೩. ಮತ್ತೊಬ್ಬಳು ಕಾಮಾರ್ತಳಾದ ಕಾಮಿನಿಯು ತನ್ನ ವಿರಹವನ್ನು ಸಖಿಯೊಡನೆ ವರ್ಣಿಸುತ್ತಾ ಇರುವಷ್ಟರಲ್ಲಿಯೇ ಹಾಸಿಗೆಯ ಮೇಲೆಯೇ ಮೂರ್ಛೆ ಬಿದ್ದುಬಿಟ್ಟಳು, ಆಗ ಸಖಿಯರು ತಣ್ಣಗಿರುವ ಬೀಸಣಿಗೆಯಿಂದ ಬೀಸುತ್ತಾ ಮೆಲ್ಲನೆ ಅವಳಿನ್ನು ಮೂರ್ಛೆ ತಿಳಿಸಿ ಎಬ್ಬಿಸಿದರು. ಆಗ ಅವಳು ಬಿಸಿಬಿಸಿಯಾದ ನಿಟ್ಟುಸಿ

**ಸ್ವಪ್ನೇಪಿ ಕಾಂತಸಂಯೋಗಕಾರಿಣ್ಯಾಂ ಹಿ ಸಖೀ ಮಮ ।**
**ದೈವಾನ್ಮಯಿ ಹತಾ ನಿದ್ರಾ ಸಾಽಪಿ ಕಾಚಿದಭಾಷತ ॥ ೧೪ ॥**

**ಕೇಯೂರಸ್ಥಾನಸಂಪ್ರಾಪ್ತಾ ವರಾಂಗದವಿಭೂಷಣಾ ।**
**ಕಾಮಕ್ಷಾಮವಪುಃ ಕಾಚಿಜ್ಜಗಾಮ ಸಖಿ ಶೋಚ್ಯತಾಂ ॥ ೧೫ ॥**

**ದತ್ತಧ್ಯಾನತಯಾ ಕಾಂತೇ ಶೋಚ್ಯಮಾನಾ ಸಖೀಜನೈಃ ।**
**ಅವಿಜ್ಞಾನಾತ್ತಥಾ ಕಾಚಿನ್ನಾಭಾಷತಂ ಸಖೀಜನಂ ॥ ೧೬ ॥**

**ಚಿತ್ರಭಿತ್ತಿಗತಂ ಕಾಂತಂ ಕಾಚಿಚ್ಚಾನಿಮಿಷೇಕ್ಷಣಾ ।**
**ಬಭೂವ ಚಿತ್ರನ್ಯಸ್ತೇವ ಪಶ್ಯಂತೀ ವಿಗತಕ್ರಿಯಾ ॥ ೧೭ ॥**

---

ರನ್ನು ಬಿಡುತ್ತಾ, ಅಯ್ಯೋ! ಮೈಯೆಲ್ಲಾ ಸುಡುತ್ತಲಿದೆಯಲ್ಲಾ? ಎಂದು ಕೂಗಿಕೊಂಡಳು.

೧೪. ಮತ್ತೊಬ್ಬಳು ಕಾಮಿನಿಯು ಹೇಳಿದುದೇನೆಂದರೆ :—ನನಗಂತೂ ನಿದ್ದೆ ಬರದೆ ಬಹು ತೊಂದರೆಯಾಗಿದೆ. ಒಂದು ವೇಳೆ ದೈವೇಚ್ಛೆಯಿಂದ ನಿದ್ರೆಯಾದರೂ ಬಂದುಬಿಟ್ಟರೆ ಕನಸಿನಲ್ಲಾದರೂ ಪ್ರಿಯನೊಡನೆ ಸಂಭೋಗಸುಖವನ್ನನುಭವಿಸಬಹುದಲ್ಲಾ! ಅಯ್ಯೋ ನಿದ್ದೆಯೇ! ನನ್ನ ಭಾಗಕ್ಕೆ ನೀನೂ ದೂರವಾದೆಯಾ?

೧೫. ಕಾಮಾಗ್ನಿಯಿಂದ ತಪ್ತಳಾದ ಕೃಶವಾದ ದೇಹವುಳ್ಳೊಬ್ಬ ನಾರೀಮಣಿಯು ತನ್ನ ಕರಚರಣಾದಿಗಳು ಕೃಶವಾಗಿರುವುದನ್ನರಿಯದೆ ಭುಜಗಳಲ್ಲಿ ಧರಿಸಲರ್ಹವಾದ ಅಂಗದ (ತೋಳುಬಂದಿ) ವನ್ನಿಟ್ಟುಕೊಳ್ಳಬೇಕೆಂದು ಅದನ್ನು ತೋಳುಗಳಲ್ಲಿ ಇಡಲು ಪ್ರಯತ್ನಮಾಡಿದಾಗ ಅವು (ವಂಕಿಗಳು) ತೋಳುಗಳಲ್ಲಿ ನಿಲ್ಲದೆ ಕಳಚಿಕೊಂಡುಹೋದುದನ್ನು ನೋಡಿ ಶೋಚನೀಯಾವಸ್ಥೆಗೆ ಗುರಿಯಾದಳು.

೧೬. ತನ್ನ ಗಂಡನಲ್ಲಿಯೇ ನೆಟ್ಟ ಮನಸ್ಸುಳ್ಳ ಮಗದೊಬ್ಬ ಮಾನಿನಿಯು ವಿರಹದಿಂದ ತನ್ನ ಗಂಡನನ್ನೇ ಚಿತ್ತೈಕಾಗ್ರ್ಯದಿಂದ ಧ್ಯಾನಿಸುತ್ತಾ ಕೊರಗುತ್ತಾ ಇದ್ದ ಸಮಯದಲ್ಲಿ ಎಷ್ಟೇ ಜನ ಸಖಿಯರು ಬಂದು ಮಾತನಾಡಿಸಿದಾಗ್ಯೂ ಬಹಿರ್ಮುಖಳಾಗದೆ ಯಾರೊಡನೆಯೂ ಮಾತನಾಡಲೇ ಇಲ್ಲ.

೧೭, ಮತ್ತೋರ್ವ ಮದನಮರ್ದಿತಳಾದ ಮಾನಿನಿಯು ಚಿತ್ರದಲ್ಲಿ ಬರೆದಿದ್ದ ತನ್ನ ಗಂಡನ ಪ್ರತಿಕೃತಿಯನ್ನು ನೋಡಿ ಅದರಲ್ಲೇ ನೆಟ್ಟ ಮನಸ್ಸುಳ್ಳವಳಾಗಿ ತಾನು ಮಾಡಬೇಕಾದ ಕೆಲಸವನ್ನೆಲ್ಲಾ ಮರೆತುಬಿಟ್ಟಳು.

ಇತಿ ಗಂಧರ್ವಮುಖ್ಯಾನಾಂ ಪಶ್ಯತಾಂ ರಜನೀಮುಖೇ ।
ನಾಸೀತ್ಸ್ತ್ರೀಹರಣೇಶಕ್ತಿಃ ಪ್ರಭಾವಾದ್ರಾಘವಸ್ಯ ಚ ॥ ೧೮ ॥

ಹಿತೇಚ್ಛುರಾಸಾಂ ಸ ಯದಾ ನಿವಿಷ್ಟೋ
ದೇವೇಶ್ವರಶ್ಚಕ್ರಧರೋ ನೃರೂಪೀ ।
ತತಃ ಪ್ರಭಾವೋ ನ ಬಭೂವ ತೇಷಾಂ
ಹರ್ತುಂ ಸ್ತ್ರಿಯಶ್ಚಾರುಶಶಾಂಕವಕ್ತ್ರಾಃ ॥ ೧೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ವಿರಹಿಣೀವರ್ಣನಂನಾಮ ಪಂಚ
ಪಂಚಾಶದುತ್ತರದ್ವಿಶತತಮೋಽಧ್ಯಾಯಃ.

---

೧೮. ಅಯೋಧ್ಯಾಪಟ್ಟಣದಲ್ಲಿ ರಾತ್ರಿವೇಳೆಯಲ್ಲಿ ನಡೆಯುತ್ತಿದ್ದ ಇಂತಹ ಅನೇಕ ಪ್ರಸಂಗಗಳನ್ನು ನೋಡಿ ಸ್ತ್ರೀಗಳನ್ನಪಹರಿಸಿಕೊಂಡು ಹೋಗಲು ಬಂದಿದ್ದ ಗಂಧರ್ವರೆಲ್ಲರೂ, ಪರಮಾತ್ಮನಾದ ಶ್ರೀರಾಮಚಂದ್ರನ ಮಹಾಪ್ರಭಾವದಿಂದ ಸ್ತ್ರೀಯರನ್ನಪಹರಿಸಿಕೊಂಡು ಹೋಗಲು ಸುತರಾಂ ಶಕ್ತರಾಗಲಿಲ್ಲ.

೧೯. ಗಂಧರ್ವರಾಜನಾದ ಶೈಲೂಷನ ಅಪ್ಪಣೆಯನ್ನನುಸರಿಸಿ ಅಯೋಧ್ಯಾನಗರದಲ್ಲಿರುವ ಸೈನಿಕರ ಮನೆಯ ಹೆಂಗಸರನ್ನು ಮೋಸದಿಂದ ಅಪಹರಿಸಲು ಬಂದಿದ್ದ ಗಂಧರ್ವರೆಲ್ಲರೂ, ಮಾಯಾಮಾನುಷವಿಗ್ರಹನಾದ ಭಗವಂತನ ಮಾಯೆಗೆ ಅಧೀನರಾಗಿ ಆ ಸ್ತ್ರೀಯರ ಮೇಲೆ ಕೈಮಾಡಲಾರದೆ ಹೋದರು. ಪರಮಾತ್ಮನು(ದ್ರೌಪದಿಯ ಮಾನರಕ್ಷಣೆಯನ್ನು ಮಾಡಿದಂತೆ) ತನ್ನ ಭಕ್ತಪರಾಧೀನನೆಂಬ ಬಿರುದನ್ನು ಸಂರಕ್ಷಿಸಿಕೊಳ್ಳುವುದಕ್ಕೋಸ್ಕರ ನಿರಪರಾಧಿನಿಯರಾದ ಅಬಲೆಯರೆಲ್ಲರ ಸುತ್ತಲೂ ಬೇರೆಬೇರೆಯಾಗಿ ಮನುಷ್ಯರೂಪವನ್ನು ಧರಿಸಿ ಚಕ್ರವನ್ನು ತಿರುಗಿಸುತ್ತಾ ನಿಂತುಕೊಂಡು ಗಂಧರ್ವರಿಗೆ ಭಯವನ್ನುಂಟುಮಾಡಿ ಅವರನ್ನು ಹಿಂತಿರುಗಿ ಅಟ್ಟಿಬಿಟ್ಟನು. ಭಗವಂತನ ಅಪಾರಮಹಿಮೆಯನ್ನದೆಂತು ವರ್ಣಿಸೋಣ.

"ಆರ್ತತ್ರಾಣಪರಾಯಣಸ್ಸಭಗವಾನ್ನಾರಾಯಣೋ ಮೇ ಗತಿಃ"

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ವಿರಹಿಣೀ ವರ್ಣನೆಯೆಂಬ ಹೆಸರಿನ
ಇನ್ನೂರೈವತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಷಟ್ಪಂಚಾಶದುತ್ತರದ್ವಿಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

**ಗಂಧರ್ವಾಃ ಕಟಕಂ ಕೇಚಿದ್ವಿವಿಶುರ್ಭರತಸ್ಯ ತು ।**
**ಪುರಸ್ಕೃತ್ಯ ನೃಪಸ್ಯಾಜ್ಞಾಂ ಸೈನಿಕಾನಾಂ ವಧೇಪ್ಸವಃ** ॥ ೧ ॥

**ಮಾಯಾಚ್ಛನ್ನಶರೀರಾಸ್ತೇ ದದೃಶುರ್ನಿಶಿ ಚೇಷ್ಟಿತಂ ।**
**ಪ್ರಾತಃ ಸಮರಕಾಮಾನಾಂ ಕಾಂತೋತ್ಕಂಠಿತಚೇತಸಾಂ** ॥ ೨ ॥

---

### ಇನ್ನೂರೈವತ್ತಾರನೆಯ ಅಧ್ಯಾಯವು.

೧. ಮಾರ್ಕಂಡೇಯನು ವಜ್ರಮಹಾರಾಜನನ್ನು ಕುರಿತು ಹೇಳುತ್ತಾನೆ :— ಅಯೋಧ್ಯಾಪಟ್ಟಣಕ್ಕೆ ಶೈಲೂಷನ ಅಪ್ಪಣೆಯಂತೆ ನಾರಿಯರ ಅಪಹಾರಕ್ಕಾಗಿ ಹೋದ ಗಂಧರ್ವರ ಕಥೆ ಹೀಗಾಯಿತಷ್ಟೆ! ಇನ್ನು ಆ ಗಂಧರ್ವರಾಜನ ಅಪ್ಪಣೆಯಂತೆ ಭರತನ ಶಿಬಿರಕ್ಕೆ ಸೈನಿಕರ ತಲೆಯನ್ನು ತರಿಯಲು ಹೋದ ಇನ್ನಿತರ ಗಂಧರ್ವರ ಹೊಡಬಾಳನ್ನು ಹೇಳುತ್ತೇನೆ, ಕೇಳು. ತಮ್ಮ ರಾಜನ ಆಜ್ಞೆಯಂತೆ ಸೈನಿಕರ ಕತ್ತುಕೊಯ್ಯಲು ಶೈಲೂಷನ ಸೈನಿಕರು ಭರತನ ಶಿಬಿರಕ್ಕೆ ನುಗ್ಗಿದರು.

೨. ಆ ಗಂಧರ್ವರೆಲ್ಲರೂ ಮಾಯೆಯಿಂದ ತಮ್ಮ ಶರೀರಗಳನ್ನೆಲ್ಲಾ ಅಡಗಿಸಿಕೊಂಡು ಸೈನ್ಯಶಿಬಿರದೊಳಕ್ಕೆ ಪ್ರವೇಶಮಾಡಿದರು. ಆ ಬಿಡಾರದಲ್ಲಿದ್ದ ಸೈನಿಕರೆಲ್ಲರೂ ಮಾರನೆಯದಿನ ನಡೆಯಬೇಕಾಗಿದ್ದ ಯುದ್ಧಕ್ಕೆ ಹೋಗಲಾತುರವುಳ್ಳವರಾಗಿ ಆ ಹಿಂದಿನ ರಾತ್ರಿ ತಮ್ಮ ಪ್ರಿಯೆಯರನ್ನು ಆಲಿಂಗಿಸಿಕೊಳ್ಳುತ್ತಲಿದ್ದರು.

**ಮನೋರಥರಥಾರೂಢಃ ಕಶ್ಚಿತ್ಪ್ರಾಣೇಶ್ವರೀಂ ವ್ರಜನ್ ।**
**ನ ಲೇಭೇ ಶಯನೇ ನಿದ್ರಾಂ ಕಲ್ಯೇ ರಣಸಮುತ್ಸುಕಃ ॥ ೩ ॥**

**ಕಶ್ಚಿಚ್ಚಂದ್ರಕರಸ್ಪರ್ಶಾದ್ವಿಶೇಷಪರಿಪೀಡಿತಃ ।**
**ದದರ್ಶ ಚಂದ್ರಂ ದಿವ್ಯಾಕ್ಷಿಪ್ರಿಯಾವದನನಿರ್ಜಿತಂ ॥ ೪ ॥**

**ಕಶ್ಚಿಚ್ಚ ಚಿಂತಯನ್ನೇವಂ ಪ್ರಿಯಾಂ ಪ್ರಾಣಧನೇಶ್ವರೀಂ ।**
**ಉತ್ತಾನಶಯನಂ ಚಕ್ರೇ ತಾರಕಾಗಣಕಂ ದಿವಿ ॥ ೫ ॥**

**ಪಶ್ಯನ್ನಾವಿಷ್ಕೃತಂ ದಿಶ್ಯಂ ಪತ್ರಚ್ಛೇದಂ ವಿಸರ್ಜಿತಂ ।**
**ಪ್ರಿಯಯಾ ಸ್ವಕೃತಂ ಕಶ್ಚಿನ್ಮುದಾ ನಯತಿ ಶರ್ವರೀಂ ॥ ೬ ॥**

---

೩. ಅನೇಕ ಸೈನಿಕರು ತಮ್ಮ ತಮ್ಮ ಹೆಂಡತಿಯರನ್ನು ಊರುಗಳಲ್ಲಿಯೇ ಬಿಟ್ಟು ಬಂದಿದ್ದವರಿಂದ ಅವರನ್ನು ಸ್ಮರಿಸಿಕೊಳ್ಳುತ್ತಲಿದ್ದರು. ಮಾರನೆಯ ದಿವಸ ಯುದ್ಧಕ್ಕೆ ಹೊರಡಬೇಕಾಗಿದ್ದರೂ ವಿರಹಿಯು ತನ್ನ ಹೆಂಡತಿಯ ಮೇಲೆ ಆಶೆಯಿಟ್ಟುಕೊಂಡು ನಿದ್ರೆಯೇ ಬರದೆ ಹೇಚಾಡುತ್ತಿದ್ದನು.

೪. ಒಬ್ಬ ವಿರಹಿಯು ರಾತ್ರಿ ಬೆಳದಿಂಗಳಲ್ಲಿ ವಿಶೇಷವಾದ ಪ್ರಿಯೆಯ ವಿರಹದಿಂದ ಪರಿಪೀಡಿತನಾಗಿ ಚಂದ್ರನನ್ನು ದುರದುರನೆ ನೋಡಿ, ಆ ಚಂದ್ರನು ತನ್ನ ಪ್ರಿಯೆಯ ಕಮಲನೇತ್ರಗಳುಳ್ಳ ಮುಖಚಂದ್ರನಿಂದ ಜಿತನಾಗಿರುವಂತೆ ಭಾವಿಸಿದನು.

೫. ಮತ್ತೊಬ್ಬ ವಿರಹಿಯು ತನ್ನ ಪ್ರಾಣಕ್ಕಿಂತಲೂ ಧನಕ್ಕಿಂತಲೂ ಹೆಚ್ಚಾದ ತನ್ನ ಪ್ರಿಯೆಯನ್ನು ಸ್ಮರಿಸಿಕೊಳ್ಳುತ್ತಾ ನಿದ್ರೆಬಾರದೆ ಇರಲು ಬೆಳದಿಂಗಳಲ್ಲಿ ಅಂಗತ್ತಲಾಗಿ ಮಲಗಿಕೊಂಡು (ಬೆನ್ನು ಕೆಳಗೆ ಮಾಡಿ) ಆಕಾಶದಲ್ಲಿರುವ ನಕ್ಷತ್ರಗಳನ್ನು ಒಂದೊಂದನ್ನಾಗಿ ಎಣಿಸುತ್ತಿದ್ದನು.

೬. ಮಗದೊಬ್ಬ ವಿರಹಿಯು ತನ್ನ ಹೆಂಡತಿಯು ತನ್ನ ಹೆಸರಿಗೆ ಬರೆದಿದ್ದ ಒಂದು ಕಾಗದವನ್ನು ಕೈಯಲ್ಲಿ ಹಿಡಿದುಕೊಂಡು ಅವಕ್ಕೆ ಪ್ರತಿಯಾಗಿ ಬರೆದ ತನ್ನ ಉತ್ತರಪತ್ರವನ್ನು ಕೊಂಚಕೊಂಚವಾಗಿ ಹರಿದುಹಾಕುತ್ತಾ ಸಂತೋಷದಿಂದ ಆ ರಾತ್ರಿಯನ್ನು ಕಳೆಯುತ್ತಿದ್ದನು.

೭. ಇನ್ನೊಬ್ಬ ವಿರಹಿಯು ತನ್ನ ಪ್ರಿಯೆಯ ವಿಷಯದಲ್ಲಿ ವಿರಕ್ತಿಹೊಂದಿದವನಾದಾಗ್ಯೂ ಚಂದ್ರರಶ್ಮಿಗಳಿಂದ ಸುಡಲ್ಪಡುತ್ತಿದ್ದನು. ಮತ್ತೊಬ್ಬನು ತನ್ನ

ನಿರ್ವೇದಮತಿರನ್ಯೇಣ ದಹ್ಯತೇ ಚಂದ್ರರಶ್ಮಿಭಿಃ ।
ಕಶ್ಚಿದ್ವಿಹೀನಸ್ತನ್ವಂಗ್ಯಾ ಶಯನೀಯೋಽಪಿ ಖಿದ್ಯತೇ ॥ ೭ ॥

ಸ್ವಪ್ನೋಪಲಬ್ಧತನ್ವಂಗಿಸಮಾಗಮಮನೋರಥಃ ।
ಸುಪ್ತೋನುಮಿತೋ ಗಂಧರ್ವೈಃ ಕಶ್ಚಿದ್ರೋಮಾಂಚಸಂಭವಾತ್ ॥ ೮ ॥

ಪ್ರಿಯಾಂ ಸಂಪ್ರೇಷಿತಾಂ ಪ್ರೇಷ್ಯ ಸಮಾಲಾಪಪರಾಯಣಃ ।
ನ ವೇದ ಕಶ್ಚಿದ್ರಾಜೇಂದ್ರ ಗತಾಮಪಿ ವಿಭಾವರೀಂ ॥ ೯ ॥

ಜ್ವಲಂತಮನಿಶಂ ಕಶ್ಚಿಚ್ಛರೀರೇ ವಿರಹಾನಲಂ ।
ಸಹಸಾ ಶಮಯಾಮಾಸ ಧ್ಯಾಯಂಶ್ಚಂದ್ರಮುಖೀಂ ಪ್ರಿಯಾಂ ॥ ೧೦ ॥

---

ಹೆಂಡತಿಯು ಈಗ ತನ್ನ ಸಮೀಪದಲ್ಲಿಲ್ಲವಲ್ಲಾ? ಎಂದು ಹೊರಳಾಡುತ್ತಾ ತಾನು ಮಲಗಿದ್ದ ಹಾಸಿಗೆಯ ಮೇಲೆಯೇ ಅಳುತ್ತಾ ಬಿದ್ದಿದ್ದನು.

೮. ಮತ್ತೊಬ್ಬನು ಮಲಗಿ ನಿದ್ದೆಮಾಡುತ್ತಾ ಕನಸನ್ನೀರೀತಿ ಕಂಡನು. ತನ್ನ ಕಾಂತೆಯು ತನ್ನ ಮನೋರಥದಂತೆ ತನ್ನೊಡನೆ ಸಂಗಸುಖವನ್ನನುಭವಿಸುತ್ತಾ ಇರುವಲ್ಲಿ ತಾನು ಗಂಧರ್ವರಾಜನಿಗಿಂತ ಸುಖಿಯೆಂದು ಭಾವಿಸಿಕೊಂಡನು. ಹಾಗೆಯೇ ಎಚ್ಚರವಾಗಿ ಹೋಗಲು, ಆ ನಿದ್ರಾನಂದದಿಂದ ರೋಮಾಂಚಪರವಶನಾಗುತ್ತಿದ್ದನು.

೯. ತನ್ನ ಕಾಂತೆಯು ತನಗೆ ತನ್ನ ವಿರಹಾವಸ್ಥೆಯನ್ನು ಕುರಿತು ಹೇಳಿ ಕಳುಹಿಸಿರುವುದನ್ನು ಸಖಿಯಿಂದ ತಿಳಿದು ಪುನಃ ತನ್ನ ಕಾಂತೆಗೆ ಏನೇನು ಸಂಗತಿಗಳನ್ನು ಸಖಿಯ ಮೂಲಕ ಹೇಳಿ ಕಳುಹಿಸಬೇಕೆಂದು ಆಯಾಯ ತನ್ನ ವಿರಹ ವೇದನಾಸಂಗತಿಗಳನ್ನು ಹೇಳುತ್ತಿರುವಲ್ಲಿಯೇ ಆ ರಾತ್ರಿಯು ಕಳೆದುಹೋಯಿತು.

೧೦. ಓರ್ವವಿರಹಿಯು ತನ್ನ ಶರೀರದಲ್ಲಿ ವಿರಹವೇದನೆಯಿಂದ ಅಗ್ನಿಯು ಭಯಂಕರವಾಗಿ ಹತ್ತಿಕೊಂಡು ಉರಿಯಲಾರಂಭವಾಗಲು, ಆ ಅಗ್ನಿಜ್ವಾಲೆಯನ್ನು ತನ್ನ ಹೆಂಡತಿಯ ತಣ್ಣಗಿರುವ ಮುಖಚಂದ್ರನನ್ನು ಸ್ಮರಿಸು (ಧ್ಯಾನಿಸು) ವುದರ ಮೂಲಕ ಶಮನಗೊಳಿ (ಆರಿ) ಸಿದನು.

ಶ್ಯಾಮಾಂ ವಿಕಂಚುಕಾಂ ತನ್ವೀಂ ಯೂನಾಂ ಪ್ರಾಣಾಪಹಾರಿಣೀಂ ।
ಪ್ರಿಯಾಂ ಚ ಖಡ್ಗಯಷ್ಟಿಂ ಚ ಕಶ್ಚಿತ್ಸ್ಮರ್ಯತಿ ಸೋತ್ಸುಕಃ ॥ ೧೧ ॥

ಸುಗುಣಾಂ ತನುಮಧ್ಯಾಂ ಚ ನವಕಾಂಚನಭೂಷಣಾಂ ।
ಸಸ್ಮಾರ ದಯಿತಾಂ ಕಶ್ಚಿಚ್ಚಾಪಯಷ್ಟಿಂ ತಥೈವ ಚ ॥ ೧೨ ॥

ವಿಚಿಂತಾನಪಿ ಗಂಧರ್ವಾನ್ ಭರತಸ್ಯ ಚ ಸೈನಿಕಾನ್ ।
ನ ಶೇಕುರಾಧರ್ಷಯಿತುಂ ಭರತಸ್ಯ ಸಮಾಶ್ರಯಾತ್ ॥ ೧೩ ॥

ಅನ್ಯೇಽಪಿ ಯೇ ದೇವರಸ್ಯ ವಿಷ್ಣೋಃ
ಸ್ಮರಂತಿ ನಿತ್ಯಂ ಯದುನಾಥಪಾದೌ ।

---

೧೧. ಒಬ್ಬಾನೊಬ್ಬ ವಿರಹಿಯು ಮಹತ್ತಾದ ಔತ್ಸುಕ್ಯದಿಂದ ಕೂಡಿದವನಾಗಿ ಕುಬುಸವನ್ನು ಬಿಚ್ಚಿದ್ದ ತನ್ನ ದಯಿತೆಯ ಸೂಕ್ಷ್ಮವಾದ ಹೃದಯಸೌಂದರ್ಯವನ್ನು ಸ್ಮರಿಸಿದೊಡನೆಯೇ ತನ್ನ ಪ್ರಾಣವನ್ನೇ ಕಳಚಿಬಿಡುವ ಶಕ್ತಿಯುಳ್ಳ ಅವಳ ಖಡ್ಗಯಷ್ಟಿ (ಕತ್ತಿಯ ಕೋಲು) ಯಂತಿರುವ ಅವಯವಸೌಂದರ್ಯವನ್ನು ಬಹು ಕಷ್ಟದಿಂದ ಧ್ಯಾನಿಸುತ್ತಿದ್ದನು.

೧೨. ಸೂಕ್ಷ್ಮವಾದ ಮಧ್ಯಸ್ಥಳವುಳ್ಳ, ಹೊಸ ಹೊಸ ಬಂಗಾರದೊಡವೆಗಳಿಂದ ದೇಹವನ್ನಲಂಕರಿಸಿಕೊಂಡಿದ್ದ ಧನುಸ್ಸಿನಂತೆ ಬಳಕು (ಬಾಗು) ತ್ತಿರುವ ಅಂಗಯಷ್ಟಿಯುಳ್ಳ ತನ್ನ ಕಾಂತೆಯನ್ನು ಸ್ಮರಿಸಿ ಸ್ಮರಿಸಿ ಓರ್ವ ಕಾಮುಕನು ಕಣ್ಣೀರಿಡುತ್ತಿದ್ದನು.

೧೩. ಭರತನ ಆಶ್ರಯದಲ್ಲಿದ್ದ ಭರತನ ಸೈನಿಕರ ಕತ್ತುಕುಯ್ಯಲು ರಾತ್ರಿ ವೇಳೆಯಲ್ಲಿ ಹವಣಿಸಿಕೊಂಡು ಬಂದಿದ್ದ ಶೈಲೂಷನ ಕಡೆಯ ಗಂಧರ್ವರು ಯಾವ ಚಿಂತೆಯನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ಇದ್ದ ಆ ಭರತನ ಸೈನಿಕರನ್ನು ಪೀಡಿಸಲು ಸುತರಾಂ ಸಮರ್ಥರಾಗಲಿಲ್ಲ.

೧೪. ಭರತನೆಂದರೆ ಮಹಾವಿಷ್ಣುವಿನ ಒಂದಂಶವೆಂದು ಮೊದಲೇ ಹೇಳಿರುವೆನು. ಇಂತಹ ಭಗವಂತನನ್ನು ನಂಬಿ ಅವನ ಜತೆಯಲ್ಲಿ ಬಂದಿರುವ ಭಕ್ತರಿಗೆ ಆತಂಕವೇನಿದೆ? ಈ ಭರತನ ಸೈನಿಕರ ಮಾತಂತಿರಲಿ. ಮತ್ತಾರಾದರೂ ಸರಿಯೆ. ಪರಮಪುರುಷನಾದ ಮಹಾವಿಷ್ಣುವಿನ ಪಾದಕಮಲಗಳನ್ನು ಪ್ರತಿನಿತ್ಯವೂ ಧ್ಯಾನಿಸು

**ಗಂಧರ್ವಯಕ್ಷಾಸುರರಾಕ್ಷಸೇಭ್ಯೋ**
**ಭಯಂ ನ ತೇಷಾಂ ಭವತೀಹ ಕಿಂಚಿತ್** ॥ ೧೪ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ವಿರಹಿವರ್ಣನಂನಾಮ ಷಟ್ಪಂಚಾಶದುತ್ತರ ದ್ವಿಶತತಮೋಽಧ್ಯಾಯಃ.**



---

ವರೋ ಅಂಥ ಮಹಾನುಭಾವರಿಗೆ, ಗಂಧರ್ವರೇ ಆಗಲಿ, ಯಕ್ಷರಾಕ್ಷಸರೇ ಆಗಲಿ, ಎಂತಹ ಮಹಾಭೂತಗಳೇ ಆಗಲಿ, ಯಾರಿಂದಲೂ ಅವರಿಗೆ ಕಿಂಚಿತ್ತಾದ ಭಯವೂ ಇಲ್ಲವೇ ಇಲ್ಲ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದ ಮಾರ್ಕಂಡೇಯ ವಜ್ರಸಂವಾದರೂಪವಾದ ವಿರಹಿಗಳ ವರ್ಣನೆಯೆಂಬ ಹೆಸರಿನ ಇನ್ನೂರರವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ ಸಪ್ತಪಂಚಾಶದುತ್ತರದ್ವಿಶತತಮೋಽಧ್ಯಾಯಃ

---

॥ ಮಾರ್ಕಂಡೇಯ ಉವಾಚ ॥

ಅಥ ರಾಜಗೃಹಾಖ್ಯಂ ತು ನಗರಂ ಯೇ ವಿಸರ್ಜಿತಾಃ ।
ಗಂಧರ್ವಾ ದದೃಶುಸ್ತತ್ರ ಪುರಶ್ರಿಯಮನುತ್ತಮಾಂ ॥ ೧ ॥

ಚಂದ್ರಸಾಪತ್ನ್ಯಭೂತಾನಿ ಗೃಹಮುಖ್ಯಾನಿ ಸರ್ವಶಃ ।
ದದೃಶುರ್ಬಹುರತ್ನಾನಿ ಬಹುಧಾನ್ಯಧನಾನಿ ಚ ॥ ೨ ॥

---

## ಇನ್ನೂರೈವತ್ತೇಳನೆಯ ಅಧ್ಯಾಯವು.

೧. ಮಾರ್ಕಂಡೇಯನು ಹೇಳುತ್ತಾನೆ :— ಕೇಳಯ್ಯ, ವಜ್ರರಾಜನೆ! ಅಯೋಧ್ಯಾಪಟ್ಟಣಕ್ಕೆ ಹೋಗಿ ಅಲ್ಲಿಯ ಹೆಂಗಸರನ್ನು ಮೋಸದಿಂದ ಹಿಡಿದುತರಲು ಹೊರಟ ಗಂಧರ್ವರುಗಳು ತಮ್ಮ ಕೈಯಲ್ಲಿ ಆ ಕೆಲಸವನ್ನು ಮಾಡುವುದಕ್ಕಾಗದೆ ಹೋದ ಬಳಿಕ ಆ ಅಯೋಧ್ಯಾಪಟ್ಟಣದ ಅರಮನೆಯನ್ನೂ ನಗರಸಂಪತ್ತನ್ನೂ ನೋಡಿಕೊಂಡು ಹೋಗೋಣವೆಂದು ಆಶಿಸಿದರು.

೨. ಆ ಪಟ್ಟಣದ ಎಲ್ಲಾ ಕಡೆಯಲ್ಲಿಯೂ ಕಂಗೊಳಿಸುತ್ತಿದ್ದ ಚಂದ್ರೋಪಮವಾದ ಗೃಹಗಳ ಶುಭ್ರಕಾಂತಿಯನ್ನು ನೋಡಿದರೆ, ಚಂದ್ರನ ಮೇಲೆ ಇವು ಸ್ಪರ್ಧಿಸುತ್ತಿರುವ ಸಪತ್ನಿ (ಸವತಿ) ಯರೋ ಎಂಬಂತೆ ತೋರುತ್ತಿದ್ದುವು. (ಗೃಹ ಶಬ್ದಕ್ಕೆ ಮನೆ ಮತ್ತು ಹೆಂಡತಿಯೆಂದು ಎರಡು ಅರ್ಥವುಂಟು.) ಇಂತಹ ಅನೇಕಾನೇಕವಾದ ಮನೆಗಳನ್ನು ಗಂಧರ್ವರು ನೋಡಿದರು. ಎಲ್ಲೆಲ್ಲಿ ಯಾವ ಯಾವ ಮನೆಯನ್ನು ನೋಡಿದರೂ ಬಹು ರತ್ನಗಳಿಂದಲೂ, ಧನಧಾನ್ಯಗಳಿಂದಲೂ ಕಿಕ್ಕಿರಿಯುತ್ತಿದ್ದುವು.

ಪುರೋದ್ಯಾನಾನಿ ರಮ್ಯಾಣಿ ದದೃಶುಶ್ಚ ಸಮಂತತಃ ।
ಅಲಂಕೃತಾನಿ ವಾಪೀಭಿರ್ದ್ರುಮಖಂಡೈಶ್ಚ ಯಾದವ ॥ ೩ ॥

ಉದ್ಯಾನೇಷು ವಿಚಿತ್ರೇಷು ನರಮುಖ್ಯಾನುಗಾಮಿನಾಂ ।
ಪಶ್ಯಂತಿ ತತ್ರ ಸಂಘಾನಿ ಗಂಧರ್ವಾಃ ಪಾನಪಾಯಿನಾಂ ॥ ೪ ॥

ವಲ್ಲಕೀನಾಂ ನಿನಾದೇನ ಗೀತೇನ ಮಧುರೇಣ ಚ ।
ಏಕತಾಮಿವ ಸಂಯಾತಂ ಚಾರುಷಟ್ಪದಶಿಂಜಿತಂ ॥ ೫ ॥

ವೇಶ್ಯಾಶ್ಚೈವೋಪನೃತ್ಯಂತಿ ಕ್ವಚಿತ್ತತ್ರ ಚ ಕಾಮುಕಾನ್ ।
ಕ್ವಚಿತ್ಸಾಭರಣಾಃ ಸುಪ್ತಾಃ ಕಾಂತೈಃ ಸಹ ಮದೋತ್ಕಟಾಃ ॥ ೬ ॥

---

೩. ಯಾವ ಯಾವ ಮನೆಗಳನ್ನು ನೋಡಿದರೂ ಆ ಮನೆಯ ಮುಂಭಾಗದಲ್ಲಿಯೂ ಆವರಣದ ಸುತ್ತಲೂ ಸುಂದರವಾದ ಉದ್ಯಾನವನಗಳು ಕಂಗೊಳಿಸುತ್ತಿದ್ದುವು. ವಿವಿಧವಾದ ಫಲಪುಷ್ಪವೃಕ್ಷಗಳು ಅಸಂಖ್ಯಾಕವಾಗಿ ಆ ಪ್ರದೇಶದಲ್ಲಿ ಕಂಗೊಳಿಸುತ್ತಿದ್ದುವು. ಆ ಉಪವನಮಧ್ಯದಲ್ಲಿ ಒಳ್ಳೊಳ್ಳೇ ಸಿಹಿನೀರಿನ ಭಾವಿಗಳ ಶೋಭಿಸುತ್ತಿದ್ದುವು.

೪. ಯಾವ ಮನೆಯ ಉದ್ಯಾನವನಗಳಲ್ಲಿ ನೋಡಿದರೂ ಸಾಯಂಕಾಲದ ವೇಳೆಯಲ್ಲಿ ಜನಗಳು ಗುಂಪು ಗುಂಪಾಗಿ ಕೂಡಿ ವಿನೋದಕೂಟಗಳಲ್ಲಿ ಭಾಗಿಗಳಾಗಿದ್ದರು. ಅವರ ಮುಂದೆ ಯಥೇಚ್ಛವಾಗಿ ಪಾನಪಾತ್ರಗಳು ಸಿದ್ಧಗೊಳಿಸಲ್ಪಟ್ಟಿದ್ದುವು. ಆ ಪಾತ್ರಗಳಲ್ಲಿದ್ದ ದಿವ್ಯಪುಷ್ಪಫಲಾಸವ (ಪಾನೀಯ) ಗಳನ್ನು ರಸಿಕರು ಮನದಣಿಯುವಂತೆ ಪಾನಮಾಡಿ ಆನಂದಲಹರಿಯಲ್ಲಿ ತೇಲಿ ಮುಳುಗುತ್ತಿದ್ದರು.

೫-೬. ಮೃದಂಗದ ಸಣ್ಣ ಧ್ವನಿಯು ಹೊರಹೊಮ್ಮುತ್ತಿರಲು ಇಂಪಾದ ಮಧುರಗಾನವು ಕಿವಿಗೆ ಸೋಕುತ್ತಿರಲು, ಒಂದು ಕಡೆ ಭ್ರಮರಗಳು ಪುಷ್ಪಗಳಿಗೆರಗಿ ಝೇಂಕರಿಸುತ್ತಿರಲು ಅಂತಹ ಸುಮಧುರ ಸಮಯವನ್ನರಿತು, ವೇಶ್ಯಾಸ್ತ್ರೀಯರು ತಾಲಲಯಗಳಿಗೆ ತಕ್ಕಂತೆ ನರ್ತನಮಾಡುತ್ತಾ ಕಾಮುಕರ ಮನಸ್ಸನ್ನಾಕರ್ಷಿಸುತ್ತಲಿದ್ದರು. ಮತ್ತೆ ಕೆಲವೆಡೆಗಳಲ್ಲಿ ಮದದಿಂದ ಕೊಬ್ಬಿದ ಹುಡುಗಿಯರು ರತ್ನಾಭರಣಗಳನ್ನು ಶರೀರದಲ್ಲಿ ಅಲಂಕರಿಸಿಕೊಂಡವರಾಗಿ ತಮ್ಮ ತಮ್ಮ ಕಾಂತರೊಡನೆ ಮಲಗಿಕೊಂಡಿದ್ದರು.

**ಸುಪ್ತಾನಾಂ ನರನಾರೀಣಾಂ ಗಂಧರ್ವಾಸ್ತತ್ರ ಚೇಷ್ಟಿತಂ ।**
**ದದೃಶುರ್ಬಹುದಾರಾಣಾಂ ಮಾಯಾಚ್ಛಾದಿತವಿಗ್ರಹಾಃ ॥ ೭ ॥**

**ಗಾಯಂತ್ಯನ್ಯೇ ರುದಂತ್ಯನ್ಯೇ ಹಸಂತ್ಯನ್ಯೇ ತಥೈವ ಚ ।**
**ಆಶ್ಲಿಷ್ಯಂತಿ ತಥೈವಾನ್ಯೇ ಮದಮತ್ತಾಃ ಪರಸ್ಪರಂ ॥ ೮ ॥**

**ಭಾಷಂತೇ ಕೇಚಿದವ್ಯಕ್ತಂ ವಿಹ್ವಲಾರ್ತಾಃ ಪದೇಪದೇ ।**
**ಶಯನೇ ಭ್ರಮಮಾಣೈಶ್ಚ ಕ್ವಚಿದಸ್ಥಿತದೃಷ್ಟಯಃ ॥ ೯ ॥**

**ಕಾಮಿನೀಸ್ಕಂಧವಿನ್ಯಸ್ತಬಾಹವಶ್ಚ ತಥಾ ಪರೇ ।**
**ಕಲಹಂ ಚಕ್ರಿರೇ ಚಾನ್ಯೇ ಸ್ತುವಂತ್ಯನ್ಯೇ ನಿರರ್ಥಕಂ ॥ ೧೦ ॥**

---

೭. ಈ ರೀತಿಯಾಗಿ ಸ್ತ್ರೀಪುರುಷರು ಕೂಡಿ ಒಟ್ಟಿಗೆ ಮಲಗಿಕೊಂಡಿದ್ದುದನ್ನೂ, ಅವರು ಮಾಡುತ್ತಿದ್ದ ಸರಸಸಲ್ಲಾಪ (ಚೇಷ್ಟೆ) ಗಳನ್ನೂ ಮಾಯೆಯಿಂದ ಮರೆಮಾಡಿಕೊಂಡಿದ್ದ ದೇಹವುಳ್ಳ ಗಂಧರ್ವರು ಅದೃಶ್ಯರೂಪಿನಿಂದಲೇ ನೋಡುತ್ತ ಬಂದರು. ಇಂತಹ ಎಷ್ಟೋ ಮಂದಿ ನರನಾರಿಯರನ್ನವರು ನೋಡಿದರು.

೮. ಕಾಮಿನೀಕಾಮುಕರು ಚೆನ್ನಾಗಿ ಪಾನಮಾಡಿ (ಕುಡಿದು) ಮದವೇರಿರಲು ಕೆಲವರು ಹಾಡುತ್ತಿದ್ದರು. ಕೆಲವರು ಅಳುತ್ತಿದ್ದರು. ಮತ್ತೆ ಹಲವರು ನಗುತ್ತಿದ್ದರು. ಮತ್ತೆ ಸಿಲರು ಮದದಿಂದ ಮತ್ತರಾಗಿ ಒಬ್ಬರನ್ನೊಬ್ಬರು ತಬ್ಬಿಕೊಳ್ಳುತ್ತಿದ್ದರು.

೯. ಕೆಲವರು ಚೆನ್ನಾಗಿ ಕುಡಿದು ಜ್ಞಾನತಪ್ಪಿ ಬಾಯಲ್ಲಿ ಸ್ಫುಟವಾಗಿ ಮಾತು ಹೊರಡದೆ ತೂರಾಡುತ್ತಾ ತೊದಲು ಮಾತನ್ನಾಡುತ್ತಿದ್ದರು. ಪದೇ ಪದೇ ವಿಹ್ವಲರಾಗಿ ಅಳುತ್ತಿದ್ದರು. ಮತ್ತು ತೂರಾಡುತ್ತಾ ತೂರಾಡುತ್ತಾ ಹೋಗಿ ಕಣ್ಣಾಲಿಗಳು ತಿರುಗುತ್ತಿರಲು ಹಾಸಿಗೆಯ ಮೇಲೆ ಹೋಗಿ ಬಿದ್ದುಬಿಡುತ್ತಿದ್ದರು.

೧೦. ಕೆಲವರು ಚೆನ್ನಾಗಿ ಕುಡಿದು ಪ್ರಜ್ಞೆಯೇ ಇಲ್ಲದೆ ತಮ್ಮ ತಮ್ಮ ಕಾಮಿನಿಯರ ಕತ್ತಿನಲ್ಲಿ ತಮ್ಮ ಬಾಹುಗಳನ್ನು ಬಲವಾಗಿ ಬಿಗಿದು ಅವರ ಸಂಗಡ ವ್ಯರ್ಥವಾಗಿ ಜಗಳಮಾಡುವುದಕ್ಕೆ ಪ್ರಾರಂಭಿಸುತ್ತಲಿದ್ದರು. ಮತ್ತೆ ಕೆಲವರು ತಮ್ಮ ತಮ್ಮ ಹೆಂಡತಿಯರನ್ನು ನಿರರ್ಥಕವಾಗಿ ಸ್ತೋತ್ರಮಾಡುತ್ತಲಿದ್ದರು.

ಸ್ಖಲಮಾನಪದಾ ಯಾಂತಿ ಸ್ಥಾನಂ ಹೃದ್ಯನವಸ್ಥಿತಂ ।
ಆಹ್ವಯಂತಿ ಗಣಾನ್ಕೇಚಿತ್ಪ್ರಣಮಂತಿ ತಥಾ ಪರೇ ॥ ೧೧ ॥

ಏವಂ ಸಂತಜನಾಕೀರ್ಣೇ ನಗರೇ ಗೀತನಾದಿತೇ ।
ದದೃಶುರ್ಗಂಧಮುಖ್ಯೇಷು ನರನಾರೀವಿಚೇಷ್ಟಿತಂ ॥ ೧೨ ॥

ಸಂಚೋದ್ಯಮಾನಾ ದೂತೀಭಿಸ್ತ್ವರಾಕ್ರಾಂತಮಾಜಾಃ ಸ್ತ್ರಿಯಃ ।
ಯಾಂತಿ ಕಾಂತಾಸು ಸಂಭ್ರಾಂತಾ ಮದಪಾನಸಮುತ್ಸುಕಾಃ ॥ ೧೩ ॥

ಪಪುಃ ಕಾಶ್ಚಿತ್ಪ್ರಿಯೈಃ ಸಾರ್ಧಂ ಪಾನಂ ಮದಸಮೀರಣಂ ।
ಪಾಯಯಂತ್ಯಪರಾಃ ಕಾಂತಾನ್ಭೋಜಯಂತ್ಯಪರಾಃ ಪ್ರಿಯಾನ್ ॥ ೧೪ ॥

---

೧೧. ಕೆಲವರು ಕುಡಿದು ಜ್ಞಾನವಿಲ್ಲದೆ ತಾವೆಲ್ಲಿಗೆ ಹೋಗಬೇಕೆಂಬ ಜ್ಞಾನವೇ ಇಲ್ಲದೆ ತಪ್ಪುಹೆಜ್ಜೆ ಹಾಕುತ್ತಾ, ತೂರಾಡುತ್ತಾ, ಮುಗ್ಗರಿಸುತ್ತಾ, ಜನರ ಗುಂಪಿದ್ದಲ್ಲಿಗೆ ಹೋಗಿ ಅವರನ್ನು ಕರೆಯುತ್ತಿದ್ದರು. ಕೆಲವರು ಜನರ ಗುಂಪಿಗೆ ಅಡ್ಡಬೀಳುತ್ತ ಲಿದ್ದರು.

೧೧. ಹೀಗೆ ಎತ್ತ ನೋಡಿದರೂ ಇಂಥ ಜನರೇ ತುಂಬಿರಲು, ಎಲ್ಲೆಲ್ಲಿಯೂ ಗೀತವಾದ್ಯನೃತ್ಯಗಳ ಧ್ವನಿಗಳಾಗುತ್ತಿರಲು ಸ್ತ್ರೀಪುರುಷರು ಮಾಡುತ್ತಿದ್ದ ಅನೇಕ ವಿಧ ವಾದ ಇಂತಹ ಚೇಷ್ಟೆಗಳನ್ನು ಗಂಧರ್ವರು ಕಂಡರು.

೧೩. ಕೆಲವು ನಾಯಿಕೆಯರು ತಮ್ಮ ತಮ್ಮ ನಾಯಕರನ್ನು ಕರೆದು ತರು ವುದಕ್ಕಾಗಿ ತಮ್ಮ ತಮ್ಮ ಸಖೀಜನರನ್ನು ಕಳುಹಿಸಿರಲು, ಅವರ ಮಾತಿನಂತೆ ಅವರ ನಾಯಕರು ಚೆನ್ನಾಗಿ ಕುಡಿದು ಉಲ್ಲಾಸದಿಂದ ಮತ್ತರಾಗಿ ನಾಯಿಕೆಯರ ನಿವಾಸಕ್ಕೆ ತೆರಳುತ್ತಿದ್ದರು.

೧೪. ಕೆಲವು ಮಂದಿ ಕಾಮಿನಿಯರು ತಮ್ಮ ತಮ್ಮ ಕಾಂತರೊಡನೆ ಕಲೆತು ಮದವನ್ನುಂಟುಮಾಡುವ ಮದ್ಯಗಳನ್ನು ಪಾನಮಾಡುತ್ತಿದ್ದರು. ಕಾಮಿನಿಯರಲ್ಲಿ ಕೆಲವರು ತಮ್ಮ ತಮ್ಮ ಕಾಂತರಿಗೆ ಪ್ರೀತಿಯಿಂದ ಮದ್ಯವನ್ನು ಕುಡಿಸುತ್ತಿದ್ದರು. ಕೆಲವು ಮಂದಿ ಪ್ರಮದೆಯರು ತಮ್ಮ ತಮ್ಮ ಪ್ರಿಯರಿಗೆ ಊಟಮಾಡಿಸುತ್ತಿದ್ದರು.

ಪ್ರಾಸಾದೇಷು ವಿಚಿತ್ರೇಷು ತಥಾ ವಾತಾಯನೇಷು ಚ ।
ರತಿಶ್ರಾಂತಾಸ್ತಥಾ ಸುಪ್ತಾಃ ಕಾಶ್ಚಿತ್ಕಾಂತೈಃ ಸಹ ಸ್ತ್ರಿಯಃ ॥ ೧೫ ॥

ಕಾಚಿದ್ಗೌರೀ ಪ್ರಿಯಂ ಶ್ಯಾಮಮಾಲಿಂಗ್ಯ ಶಯನೇ ಸ್ಥಿತಾ ।
ಉತ್ಪಲಸ್ರಗಿವಾಭಾತಿ ಯುಕ್ತಾ ಜಾತಿಸ್ರಜಾ ಸಹ ॥ ೧೬ ॥

ಗೌರೀಗೌರಸಮಾಶ್ಲಿಷ್ಟಾ ಕಾಚಿದಾಭಾತಿ ಸುಂದರೀ ।
ಆಲಿಂಗಿತಾ ಚಂದ್ರಕರೈಶ್ಚಂದ್ರಕಾಂತಶಿಲಾ ಯಥಾ ॥ ೧೭ ॥

ಶ್ಯಾಮಾ ಶ್ಯಾಮಸಮಾಶ್ಲಿಷ್ಟಾ ಕಾಚಿದಾಭಾತಿ ಪಾರ್ಥಿವ ।
ಪಯೋದಪಂಕ್ತಿರ್ಗಗನೇ ಯಥಾ ಪಾರ್ಥಿವ ಸೋದಕಾ ॥ ೧೮ ॥

---

೧೫. ದೊಡ್ಡ ದೊಡ್ಡ ಕಿಟಕಿಗಳನ್ನುಳ್ಳ ಬಹಳ ಚಿತ್ರವಿಚಿತ್ರವಾದ ಮಹಡಿಯ ಮನೆಗಳಲ್ಲಿ ಹಲವು ಮಂದಿ ಸ್ತ್ರೀಪುರುಷರು ಒಟ್ಟಿಗೆ ಕಲೆತು ಯಥೇಚ್ಛವಾಗಿ ರತಿಕ್ರೀಡೆಯನ್ನಾಡಿ, ಅದರಿಂದ ಬಹು ಆಯಾಸಗೊಂಡವರಾಗಿ ಒಬ್ಬರನ್ನೊಬ್ಬರು ಆಲಂಗಿಸಿಕೊಂಡು ಮಲಗಿದ್ದರು.

೧೬. ಚೆನ್ನಾಗಿ ಬಿಳುಪಾದ ಸೌಂದರ್ಯದಿಂದ ಕೂಡಿದ್ದೊರ್ವ ಲಲನೆಯು ಶ್ಯಾಮ (ಕಪ್ಪು) ವರ್ಣದ ತನ್ನ ಗಂಡನನ್ನು ಹಾಸಿಗೆಯ ಮೇಲೆ ಆಲಿಂಗಿಸಿಕೊಳ್ಳುತ್ತಾ ಮಲಗಿದ್ದುದನ್ನು ನೋಡಿದರೆ ಜಾಜೀಹೂವಿನೊಡನೆ ಸೇರಿಸಿಕಟ್ಟಿರುವ ಕನ್ನೈದಿಲೆಯ ಹೂವೋ ಎಂಬಂತೆ ತೋರುತ್ತಿತ್ತು.

೧೭. ಒಬ್ಬಳು ಬಿಳುಪಾದ ಹುಡುಗಿಯು ಮತ್ತೊರ್ವ ಬಿಳುಪಾದ ಹುಡುಗನನ್ನು ತಬ್ಬಿಕೊಂಡು ಮಲಗಿದ್ದುದನ್ನು ನೋಡಿದರೆ ಬೆಳದಿಂಗಳು ಬಂದು ಅಮೃತ (ಚಂದ್ರಕಾಂತ) ಶಿಲೆಯನ್ನು ಆಲಿಂಗಿಸಿಕೊಂಡಿರುವಂತೆ ಕಾಣುತ್ತಿತ್ತು.

೧೮. ಒಬ್ಬಳು ಕಪ್ಪು ಹೆಂಗಸು ಮತ್ತೊಬ್ಬ ಕಪ್ಪಾದ ಗಂಡನನ್ನು ಬಿಗಿದು ತಬ್ಬಿಕೊಂಡು ಮಲಗಿರುವ ನೋಟವನ್ನು ನೋಡಿದರೆ ನೀರು ತುಂಬಿಕೊಂಡು ಗಗನದಲ್ಲೋಡಾಡುವ ಕಪ್ಪುಮೋಡಗಳೆರಡು ಒಟ್ಟಿಗೆ ಸೇರಿಕೊಂಡು ಹೋಗುವಂತೆ ಕಾಣಿಸುತ್ತಿತ್ತು.

**ಅಲೀಕಸುಪ್ತಮುಪ್ರೌಢಾ ಕರ್ಪೂರರಜಸಾ ಸ್ವಯಂ ।**
**ಪ್ರಿಯೇಣ ಗಾಢಮಾಶ್ಲಿಷ್ಟಾ ವಿಲಕ್ಷಮುದಿತಾಭವತ್ ॥ ೧೯ ॥**

**ಕಾಚಿಚ್ಚ ವನಿತಾ ಪ್ರೌಢಾ ಕರ್ಪೂರರಜಸಾ ಸ್ವಯಂ ।**
**ಅವಾಕಿರತಿ ಕಾಂತಾಂಗಂ ರತಿಸ್ವೇದಪರಿಪ್ಲುತಂ ॥ ೨೦ ॥**

**ಪಶ್ಯೇಮಾಂ ತಾರಕಾಂ ಚಂದ್ರೋಹ್ಯಂಗೇನಾಲಿಂಗ್ಯ ತಿಷ್ಠತಿ ।**
**ಇತ್ಯಾಹ ದಯಿತಂ ಕಾಚಿತ್ಪ್ರೌಢಾ ರತಿಸುಖಾರ್ಥಿನೀ ॥ ೨೧ ॥**

**ಕಾಚಿದೂರುಪರಾಮರ್ಶಾದ್ವಿದಿತ್ವಾ ಸುರತಾರ್ಥಿನೀ ।**
**ಕಾಂತೇನಾಲಿಂಗಿತಾ ಗಾಢಂ ಮುದಿತೇನ ರಿರಂಸುನಾ ॥ ೨೨ ॥**

---

೧೯. ಒಬ್ಬಳು ಎಳೇಪ್ರಾಯದ ಸುಂದರಿಯು ನಿದ್ದೆಬಂದಂತೆ ನಟಿಸುತಾ ಸುಮ್ಮನೆ ಕಣ್ಣು ಮುಚ್ಚಿಕೊಂಡು ಸುಳ್ಳು ಸುಳ್ಳು ನಿದ್ದೆಮಾಡುತ್ತಲಿದ್ದ ತನ್ನ ಗಂಡನನ್ನು ಮುತ್ತಿಡಲು, ಆ ಕ್ಷಣವೇ ಆಕೆಯ ಪತಿಯು ಮೇಲಕ್ಕೆದ್ದು ತನ್ನ ಆ ಪ್ರೀತಿಯ ರಮಣಿಯನ್ನು ಬಲವಾಗಿ ತಬ್ಬಿಕೊಂಡೊಡನೆಯೇ ಈ ಆಲಿಂಗನದಿಂದ ಆಕೆಯು ಒಂದು ಬಗೆ ವಿಲಕ್ಷಣವಾದ ಆನಂದವನ್ನನುಭವಿಸಿದಳು.

೨೦. ಪ್ರೌಢನಾರಿಯೋರ್ವಳು ತನ್ನೊಡನೆ ರತಿಕೇಳಿಯನ್ನಾಡುತ್ತಾ ಬಳಲಿ ಬೆವರುಸುರಿಸುತ್ತಿರುವ ತನ್ನ ಪ್ರಿಯನನ್ನು ನೋಡಿ ಪಚ್ಚಕರ್ಪೂರದ ಹುಡಿಯನ್ನು ಅವನ ಮೈಮೇಲೆ ಎರಚಿ ಆ ಬೆವರನ್ನು ಆರಿಸುತ್ತಿದ್ದಳು.

೨೧. ಪ್ರಿಯಕಾಂತ! ಆಕಾಶದ ಮೇಲೆ ಕಣ್ಣೆತ್ತಿನೋಡು. ಚಂದ್ರನು ನಕ್ಷತ್ರಯುಕ್ತನಾಗಿರುವುದನ್ನು ನೋಡಿದರೆ, ಈ ನಕ್ಷತ್ರಗಳನ್ನು ತೊಡೆಯಮೇಲೆ ಕೂರಿಸಿಕೊಂಡು ಮುತ್ತನ್ನು ಕೊಡುತ್ತಾ ಆಲಿಂಗಿಸಿಕೊಂಡಿರುವಂತೆ ಕಾಣುತ್ತಿರುವುದಲ್ಲವೇ? ಎಂದು ಹೇಳುತ್ತ ಹೇಳುತ್ತಾ, ಒಬ್ಬ ರಸಿಕಳಾದ ರಮಣಿಯು ಅರ್ಥಾಂತರದಿಂದ ತನ್ನ ಗಂಡನನ್ನು ಸಂಭೋಗಕ್ಕೆ ಕರೆಯುತ್ತಿದ್ದಳು.

೨೨. ಒಬ್ಬಾಳೊಬ್ಬಳು ಕಾಂತೆಯು ಮಲಗಿದ್ದ ತನ್ನ ತೊಡೆಯನ್ನು ತನ್ನ ಕಾಂತನು ಸ್ಪರ್ಶಮಾಡಿದುದನ್ನು ನೋಡಿ, ಸಂಭೋಗಾಪೇಕ್ಷೆಯಿಂದ ಇಂತು ಸನ್ನೆ

ಕಾಂತೇನ ಕಾಚಿದ್ದಷ್ಟೋಷ್ಠೀ ಚುಂಬನಾಯಾರ್ಪಿತೇ ಮುಖೇ ।
ನ ಯಾಸ್ಯೇ ತವ ವಿಶ್ವಾಸಂ ಭೂಯಶ್ಚೇದನ್ಯಥಾಕೃಥಾಃ ॥ ೨೩ ॥

ಕಾಚಿತ್ಸ್ವಪ್ತಾ ಕಾಂತೇನ ಪರಾಮೃಷ್ಟಾ ರತಾರ್ಥಿನೀ ।
ಕಾಂತಮಾಲಿಂಗತಾತ್ಯರ್ಥಂ ತ್ಯಕ್ತನಿದ್ರಾ ಸಸಂಭ್ರಮಾ ॥ ೨೪ ॥

ಇತ್ಯೇವಮಪಿ ವಿಶ್ವಸ್ತಾನ್ಸೈನಿಕಾನ್ಸ್ವಾನ್ಯುಧಾಜಿತಃ ।
ಹರ್ತುಂ ನ ಶೇಕುರ್ಗಂಧರ್ವಾ ಭರತಸ್ಯ ಸಮಾಶ್ರಯಾತ್ ॥ ೨೫ ॥

---

ಮಾಡಿದನೆಂದು ತಿಳಿದವಳಾಗಿ, ಸಂಭೋಗಕ್ಕೆ ಸಿದ್ಧಳಾಗಿ ತನ್ನ ದೇಹವನ್ನು ಅಣಿ ಮಾಡಿಕೊಟ್ಟಳು. ಇಂತು ಸದಾಗಿ ಸಂಭೋಗಕ್ಕೆ ಅಣಿಯಾದ ತನ್ನ ಪ್ರಿಯೆಯನ್ನು ಆ ಕಾಂತನು ಬಲವಾಗಿ ಆಲಿಂಗಿಸಿಕೊಂಡು ಸಂಭೋಗಮಾಡಲಾರಂಭಿಸಿದನು.

೨೩. ಒಬ್ಬ ರಸಿಕನಾದ ರಮಣನು ತನ್ನ ಪ್ರೇಯಸಿಯನ್ನು ಕುರಿತು, ಇತ್ತ ಕಡೆ ನಿನ್ನ ಮುಖವನ್ನು ತಿರುಗಿಸು. ಒಂದೇ ಒಂದು ಸಾರಿ ಚುಂಬನ (ಮುತ್ತು) ಕೊಡುತ್ತೇನೆಂದು ಹೇಳಲು, ಆವನ ಮಾತನ್ನು ನಂಬಿ ಆ ಬಿಂಬೋಷ್ಠಿಯು ತನ್ನ ಮುಖವನ್ನು ತಿರುಗಿಸಲು, ಆ ಕಾಂತನು ಚುಂಬನಮಾಡುವ ನೆವದಿಂದ ಅವಳ ತುಟಿಯನ್ನು ತನ್ನ ಹಲ್ಲುಗಳಿಂದ ಚೆನ್ನಾಗಿ ಕಚ್ಚಿಬಿಟ್ಟನು. ಆಗಲಾಕಾಂತೆಯು ನಿನ್ನ ಮಾತನ್ನು ನಾನು ಇನ್ನು ಮೇಲೆ ಖಂಡಿತವಾಗಿಯೂ ನಂಬುವುದಿಲ್ಲ. ಇನ್ನು ಮೇಲೆ ಇಂತಹ ಕೆಲಸವನ್ನು ನೀನು ಮಾಡಿ ನಂಬಿಕೆಯನ್ನು ಕೆಡಿಸಿಕೊಳ್ಳಬೇಡವೆಂದು ಹೇಳಿದಳು.

೨೪. ಚೆನ್ನಾಗಿ ನಿದ್ರೆಬಂದಿದ್ದ ತನ್ನ ರಮಣಿಯನ್ನು ಕಾಂತನು ಬಂದು ಮುಟ್ಟಿ ಎಬ್ಬಿಸಿದೊಡನೆಯೇ ಬಹಳ ಗಾಬರಿಯಿಂದ ನಿದ್ದೆಯನ್ನು ಬಿಟ್ಟು ಮೇಲಕ್ಕೆದ್ದು ಆ ರಮಣಿಯು ರಮಣನನ್ನಾಲಿಂಗಿಸಿಕೊಂಡು ರತಿಕ್ರೀಡೆಗೆ ಸಿದ್ಧಳಾದಳು.

೨೫. ಮೇಲೆ ಇದುವರಿಗೆ ವಿವರಿಸಿದಂತೆ ನಾನಾವಿಧವಾಗಿ ಸಂತೋಷಸಂಭ್ರಮಗಳಲ್ಲಿ ನಿರತರಾಗಿದ್ದ ಭರತನಿಂದ ಸಂರಕ್ಷಿತರಾದ ಯುಧಾಜಿತನ ಕಡೆಯ ಭರತನ ಸೈನಿಕರನ್ನು ಗಂಧರ್ವರು ಸಂಹರಿಸುವುದಕ್ಕೆ ಏನೇನೂ ಸಾಮರ್ಥ್ಯವಿಲ್ಲದವರಾಗಿ ಹಿಂತಿರುಗಿ ಹೊರಟುಹೋದರು.

ಯೇಷಾಂ ಪುರೇ ಸನ್ನಿಹಿತಃ ಸ ವಿಷ್ಣು
ರ್ಮಹಾನುಭಾವೋ ರಘುವಂಶಗೋಪ್ತಾ ।
ತೇಷಾಂ ಪುರೇ ನಾಸ್ತಿ ಭಯಂ ನರೇಂದ್ರ
ಗಂಧರ್ವಯಕ್ಷಾಸುರಪನ್ನಗೇಭ್ಯಃ ॥ ೨೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ನಿಶೋಪಭೋಗವರ್ಣನೋನಾಮ
ಸಪ್ತಪಂಚಾಶದುತ್ತರದ್ವಿಶತತಮೋಽಧ್ಯಾಯಃ.



---

೨೬. ಆದಾವ ಊರಿನಲ್ಲಿ ಆದಾರಹೃದಯದಲ್ಲಿ ರಘುವಂಶ ಲಲಾಮನಾದ ಭಗವಾನ್ ಸಾಕ್ಷಾನ್ಮಹಾವಿಷ್ಣುಸ್ವರೂಪನಾದ ಶ್ರೀರಾಮಚಂದ್ರಮೂರ್ತಿಯು ಸನ್ನಿಹಿತನಾಗಿರುವನೋ, ಅಂತಹ ಊರಿಗಾಗಲೀ ಅಂತಹ ಅಂತರಂಗ ಭಕ್ತರಿಗಾಗಲೀ ಗಂಧರ್ವರಿಂದಾಗಲಿ, ಯಕ್ಷರಾಕ್ಷಸರಿಂದಾಗಲಿ, ಸರ್ಪವೃಶ್ಚಿಕಗಳಿಂದಾಗಲಿ ಏನೇನೂ ಭಯವಿಲ್ಲವೆಂದು ತಿಳಿಯಯ್ಯಾ, ವಜ್ರನರಪತಿ ! ಹೀಗೆಂದು ವಜ್ರರಾಜನಿಗೆ ಮಾರ್ಕಂಡೇಯ ಋಷಿಗಳು ತಿಳಿಸಿದರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದ ಮಾರ್ಕಂಡೇಯ
ವಜ್ರಸಂವಾದರೂಪವಾದ ರಾತ್ರಿಯಕಾಲದ ಉಪಭೋಗವರ್ಣಯೆಂಬ
ಹೆಸರಿನ ಇನ್ನೂರೈವತ್ತೇಳನೆಯ ಅಧ್ಯಾಯವು
ಮುಗಿದುದು.



ಶ್ರೀ

# ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ಅಷ್ಟಪಂಚಾಶದುತ್ತರದ್ವಿಶತತಮೋಽಧ್ಯಾಯ

॥ ಮಾರ್ಕಂಡೇಯ ಉವಾಚ ॥

ಅಯೋಧ್ಯಾತಸ್ತದಾಽಭ್ಯೇತ್ಯ ಗಂಧರ್ವಾಃ ಶಿಬಿರಾತ್ತಥಾ ।
ತಥಾ ರಾಜಗೃಹಾತ್ಸರ್ವೇ ಶೈಲೂಷಾಯ ನ್ಯವೇದಯತ್ ॥ ೧ ॥

ನ ವಿಗ್ರಹಕಥಾ ತತ್ರ ನ ರಕ್ಷಾ ಕಾಚಿದೀದೃಶೀ ।
ಕೇವಲಂ ತು ಪ್ರಭಾವೇಣ ರಾಮಸ್ಯ ಭರತಸ್ಯ ಚ ॥ ೨ ॥

ನಾಸ್ಮಾಭಿಃ ಕಿಂ ಕೃತಂ ರಾಜನ್ಪ್ರಹರ್ತುಂ ಕ್ವಚಿದಿತ್ಯಪಿ ।
ಯತ್ತತ್ರ ಶೇಷಂ ಕರ್ತವ್ಯಂ ತತ್ಕರೋತು ಮಹೀಪತಿಃ ॥ ೩ ॥

---

### ಇನ್ನೂರೈವತ್ತೆಂಟನೆಯ ಅಧ್ಯಾಯವು.

೧. ಮಾರ್ಕಂಡೇಯರು ಹೇಳುತ್ತಾರೆ:—ಯಾವಾಗ ತಾವು ಬಂದ ಕೆಲಸವೆಲ್ಲಾ ಹಾಳಾಗಿ ತಮ್ಮ ಶೌರ್ಯವೆಲ್ಲಾ ನಿರರ್ಥಕವಾಗಿ ಭರತನ ಸೈನಿಕರ ಕತ್ತುಗಳನ್ನು ಕತ್ತರಿಸಲಾರದೆ, ಅಯೋಧ್ಯೆಯ ಹೆಂಗಸರನ್ನೂ ತರಲಾರದೆ ಪೆಚ್ಚುಮುಖಗಳನ್ನು ಹಾಕಿಕೊಂಡ ಗಂಧರ್ವವೀರರು ತಮ್ಮ ರಾಜನಾದ ಶೈಲೂಷನ ಬಳಿಗೆ ಹಿಂತಿರುಗಿ ಹೋಗಿ ತಮ್ಮ ವೃತ್ತಾಂತವನ್ನೆಲ್ಲಾ ಹೇಳಿಕೊಂಡರು.

೨. ಗಂಧರ್ವರು ತಮ್ಮ ರಾಜನೊಡನೆ ಹೇಳಿದುದೇನೆಂದರೆ:—ಸ್ವಾಮಿ, ಆ ಭರತನ ಶಿಬಿರದಲ್ಲಿ ಯುದ್ಧದ ವರ್ತಮಾನವೇ ಇಲ್ಲ. ಯಾರೂ ಮತ್ತರಾಗಿ ಮಲಗಿಯೂ ಇಲ್ಲ. ಅಲ್ಲಿ ಬಾಗಿಲಿನಲ್ಲಿ ಯಾರೂ ಕಾವಲಿಲ್ಲ. ಇದನ್ನೆಲ್ಲಾ ನೋಡಿದರೆ ಇದೆಲ್ಲಾ ರಾಮನ ಮತ್ತು ಭರತನ ಪ್ರಭಾವವೇ ಇರಬೇಕೆಂದು ತೋರುತ್ತದೆ.

೩. ನಾವು ಅವರನ್ನು ಸಂಹರಿಸಲೂ ಶಕ್ತರಾಗಲಿಲ್ಲ. ಹೆಂಗಸರನ್ನು ಕರೆದು

**ಏವಮುಕ್ತೈಃ ಸ ಗಂಧರ್ವೈರ್ಯಾಮಿನೀವಿಗಮೇ ತದಾ ।**
**ಯೋಗಯೋಗಮತಿಕ್ಷಿಪ್ರಮಾಜ್ಞಾಪಯತ ಸತ್ವರಃ ॥ ೪ ॥**

**ಭೇರೀ ಸಾನ್ನಾಹಿಕೀ ಚೈವ ತತಃ ಶೀಘ್ರಮಹನ್ಯತ ।**
**ಯಸ್ಯಾಃ ಶಬ್ದೇನ ಗಂಧರ್ವಾ ರಾಜದ್ವಾರಮುಪಾಗತಾಃ ॥ ೫ ॥**

**ಗಜನಾರೇಣ ಮಹತಾ ತುರಗಾಣಾಂ ಬಲೇನ ಚ ।**
**ರಥೈಶ್ಚ ಮೇಘಸನ್ನಾದೈಃ ಪತ್ತಿಭಿಶ್ಚ ಮದೋತ್ಕಟೈಃ ॥ ೬ ॥**

**ಕ್ಷ್ವೇಡಿತಾಸ್ಫೋಟಿತರವೈಃ ಶಂಖಭೇರೀನಿನಾದಿತೈಃ ।**
**ಹ್ರಾದೇನ ಗಜಘಂಟಾನಾಂ ಗಜಾನಾಂ ಚೈವ ಬೃಂಹಿತೈಃ ॥ ೭ ॥**

---

ಕೊಂಡು ಬರಲಿಕ್ಕೂ ನಮಗೆ ಸಾಮರ್ಥ್ಯವಿಲ್ಲ. ನಾವು ಅವರನ್ನು ಏನೂ ಮಾಡಲಾರದೆ ಹಿಂತಿರುಗಿ ಬಂದೆವು. ಇನ್ನು ಮುಂದೆ ಏನು ಕೆಲಸಮಾಡಬೇಕೋ ಅದನ್ನು ನೀನೇ ಮಾಡಬೇಕಲ್ಲದೆ ನಮ್ಮ ಕೈಯಲ್ಲೇನೂ ಸಾಗುವಂತಿಲ್ಲ.

೪. ಈ ಮಾತನ್ನು ಶೈಲೂಷನಿಗೆ ಗಂಧರ್ವರು ಹೇಳುವ ಹೊತ್ತಿಗೆ ಬೆಳಗಿನ ಝಾವದ ಸಮಯವಾಗಿತ್ತು. ಆಗ ಶೈಲೂಷನು ಏನೂ ತೋರದೆ, ಮಲಗಿದ್ದ ತನ್ನ ಸೈನಿಕರನ್ನು ಕೂಡಲೇ ಎಬ್ಬಿಸಿಬಿಡುವಂತೆ ಅಪ್ಪಣೆಮಾಡಿದನು.

೫. ಬೇಗ ಬೇಗ ಎಲ್ಲರೂ ಏಳುವಂತೆ ಭೇರಿಯನ್ನು ಹೊಡೆಯಿರಿ. ಬಲವಾಗಿ ಹೊಡೆಯಿರಿ. ಎಲ್ಲರೂ ಬೇಗ ಬರಲೆಂದು ಹೇಳಲು, ಕೂಡಲೆ ನಗರದಲ್ಲೆಲ್ಲಾ ಭೇರಿಯು ಭಯಂಕರವಾಗಿ ಮೊಳಗಿತು. ಆ ಭೇರೀ ಭಾಂಕಾರವನ್ನು ಕೇಳಿದೊಡನೆಯೇ ಸಮಸ್ತ ಗಂಧರ್ವರೂ ಬೇಗ ಬೇಗ ಹಾಸಿಗೆಯಿಂದೆದ್ದು ಗಂಧರ್ವರಾಜನ ಅರಮನೆಯ ಬಾಗಿಲಿನಲ್ಲಿ ಗುಂಪುಕೂಡಿ ನಿಂತರು.

೬. ಅರಮನೆಯ ಮುಂದೆ ಕೂಡಲೆ ಅನೇಕ ರಥಗಳೂ, ಆನೆಗಳೂ, ಕುದುರೆಗಳೂ ಸೇರಿ ಶಬ್ದಮಾಡುತ್ತಿದ್ದುದನ್ನು ಕೇಳಿದರೆ ಆಕಾಶದಲ್ಲಿ ಮೇಘಗರ್ಜನೆಯು ಎಡೆಬಿಡದೆ ಆಗುತ್ತಿರುವುದೋ ಎಂಬಂತೆ ತೋರುತ್ತಿತ್ತು. ಮದಿಸಿದ ಕಾಲಾಳು (ಸಿಪಾಯಿ) ಗಳನೇಕರು ರಾಜದ್ವಾರದಲ್ಲಿ ನಿಬಿಡೀಕೃತವಾಗಿ ನಿಂತರು.

೭. ಊರಿನಲ್ಲೆಲ್ಲಾ ಸಿಂಹನಾದಗಳಾಗುತ್ತಿದ್ದುವು. ಶಂಖಭೇರೀ ನಿನಾದಗಳಂತೂ ಭೂವ್ಯಾಕಾಶವನ್ನು ಭೇದಿಸುವಂತಿದ್ದುವು. ಆನೆಗಳ ಕೊರಳುಗಳಿಗೆ ಕಟ್ಟಿದ್ದ ದೊಡ್ಡ ದೊಡ್ಡ ಗಂಟೆಗಳ ಸದ್ದಿನಿಂದಲೂ, ಆನೆಗಳ ಕೂಗಿನಿಂ(ಬೃಂಹಿತದಿಂ) ದಲೂ ಆ ಗಂಧರ್ವನಗರಿಯು ತುಂಬಿಹೋಯಿತು.

ಹೇಷಿತೈಸ್ತುರಗಾಣಾಂ ತು ಬಭೂವ ತುಮುಲಂ ಮಹತ್ ।
ಶೈಲೂಷೋಽಪಿ ತದಾ ಸ್ನಾತ್ವಾ ಹುತ್ವಾಽಗ್ನಿಂ ದ್ವಿಜಪೂಜನಂ ॥ ೮ ॥

ಕೃತ್ವಾ ವಿನಿರ್ಯಯೌ ಶ್ರೀಮಾನ್ ವರಚಂದನಭೂಷಿತಃ ।
ಮೌಲೀ ವಪುಷ್ಮಾನ್ಸನ್ನದ್ಧಃ ಸ್ರಗ್ವೀ ರುಚಿರಭೂಷಣಃ ॥ ೯ ॥

ಆಮ್ರಪತ್ರಪ್ರತೀಕಾಶೈಸ್ತುರಗೈರ್ಯೋಜಿತಂ ರಥಂ ।
ಆರುರೋಹ ಮಹಾತೇಜಾ ವಿಮಾನಂ ಸುಕೃತೀ ಯಥಾ ॥ ೧೦ ॥

ಯಥೋಕ್ತಸ್ಯ ರಥಸ್ಯಾಸೀತ್ಪುರೋ ರಣವಿಶಾರದಃ ।
ನರಕೇತುರಿತಿ ಖ್ಯಾತಸ್ತ್ರಿಷು ಲೋಕೇಷು ವಿಶ್ರುತಃ ॥ ೧೧ ॥

ಕೇತೌ ತಸ್ಯ ರಥೇ ಭಾತಿ ವಸಂತೋ ಮೂರ್ತಿಮಾನ್ಕೃತಃ ।
ತತಃ ಸ ಸಹ ಸೈನ್ಯೇನ ನಿರ್ಯಯೌ ನಗರಾದ್ಬಹಿಃ ॥ ೧೨ ॥

---

೮. ಕುದುರೆಗಳ ಹೇಷಾರವವು ಎಲ್ಲ ಕಡೆಗಳಿಗೂ ಕೇಳಿಸಿತು. ತುಮುಲ ಸ್ವರದಿಂದ ತುಂಬಿದ ಆ ಸಮಯದಲ್ಲಿ ಶೈಲೂಷನೂ ಸಹ ಬೇಗನೆ ಎದ್ದು ಸ್ನಾನ ಮಾಡಿ ಅಗ್ನಿಕಾರ್ಯಾದಿಗಳನ್ನೂ, ಬ್ರಾಹ್ಮಣರ ಪೂಜೆಗಳನ್ನೂ ಕ್ರಮವಾಗಿ ಮಾಡಿದನು.

೯. ಇಷ್ಟೆಲ್ಲಾ ನಿತ್ಯಕರ್ಮಗಳನ್ನು ಮಾಡಿದೊಡನೆಯೇ ಮೈಗೆಲ್ಲಾ ಸುಗಂಧವಂ ಪೂಸಿದವನಾಗಿ ಕತ್ತಿಗೆ ಪುಷ್ಪಹಾರಗಳಂ ಧರಿಸಿ, ಮಸ್ತಕದೊಳ್ ವರಮುಕುಟವಂ ತಳೆದು ಗಂಧರ್ವರಾಜನಾದ ಶೈಲೂಷನು ಇಂತು ದಿವ್ಯಾಭರಣಭೂಷಿತನಾಗಿ ಯುದ್ಧ ಸನ್ನದ್ಧನಾದನು.

೧೦. ಮಾವಿನೆಲೆಗಳಂತೆ ಹಸುರಾದ ಕುದುರೆಗಳನ್ನು ಕಟ್ಟಿದ್ದ ದಿವ್ಯರಥದಲ್ಲಿ ಆ ಗಂಧರ್ವರಾಜನು, ಪುಣ್ಯಮಾಡಿದವನು ವಿಮಾನವನ್ನೇರಿ ಹೋಗುವಂತೆ, ಏರು ವಂಥವನಾದನು.

೧೧. ಈರೀತಿ ಸುಂದರತರವಾದ ಆ ರಥವನ್ನು ಶೈಲೂಷನು ಹತ್ತಿದೊಡನೆಯೇ ರಣವಿದ್ಯಾವಿಶಾರದನಾದ, ತ್ರಿಲೋಕವಿಖ್ಯಾತನಾದ ನರಕೇತುವೆಂಬ ವೀರನು ಸಾರಥ್ಯವನ್ನು ಮಾಡುವುದಕ್ಕೋಸ್ಕರ ಆ ರಥದ ಮುಂಭಾಗವನ್ನಲಂಕರಿಸಿದನು.

೧೨. ಆ ರಥದ ಮುಂದೆ ವಸಂತನು ಆಕಾರವನ್ನು ತಳೆದು, ಆ ರಥದ ಮುಂದೆ ನೆಟ್ಟಿದ್ದ ಧ್ವಜದ ಮೇಲೆ ಕುಳಿತುಕೊಂಡನು. ಈರೀತಿ ಸಿದ್ಧವಾದ ರಥವನ್ನು ನರಕೇತುವು ಊರಿನ ಹೊರಕ್ಕೆ ಹೊಡೆದನು.

ವ್ಯೂಹಂ ಚ ಸರ್ವತೋಭದ್ರಂ ಸಮಾಧಾಯ ಬಲಂ ತಥಾ ।
ಕೃತ್ವಾ ಪ್ರತ್ಯೈಕ್ಷತ ತದಾ ಭರತಾಗಮನಂ ರುಷಾ ॥ ೧೩ ॥

ಸೈನ್ಯೇನ ಮಹತಾ ರಾಜನ್ಭಾಸ್ಕರಸ್ಯೋದಯಂ ಪ್ರತಿ ॥ ೧೪ ॥

ಆತ್ತಾಯುಧಾಃ ಕ್ಷ್ವೇಡಿತಶಂಖನಾದೈ
ರಾನಂದಯಂತಃ ಸುಹೃದಾಂ ಮನಾಂಸಿ ।
ಗಂಧರ್ವಮುಖ್ಯಾ ರಣಚಂಡವೇಗಾಃ
ಪ್ರತೀಕ್ಷಮಾಣಾ ಭರತಸ್ಯ ತಸ್ಥುಃ ॥ ೧೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗಂಧರ್ವಸೈನ್ಯವರ್ಣನಂನಾಮಾಷ್ಟ
ಪಂಚಾಶದುತ್ತರದ್ವಿಶತತಮೋಽಧ್ಯಾಯಃ.

---

೧೩. ಮತ್ತು ತನ ಸೈನ್ಯವನ್ನೆಲ್ಲಾ ಸರ್ವತೋಭದ್ರವೆಂಬ ಮಂಡಲದಂತೆ ಮಂಡಲಾಕಾರನಾಗಿ ಸೇರಿಸಿ ಮಹಾ ಕೋಪದಿಂದೊಡಗೂಡಿದವನಾಗಿ ಭರತನ ಆಗಮನವನ್ನಿದಿರು ನೋಡುತ್ತಿದ್ದನು.

೧೪-೧೫. ಕೇಳಯ್ಯ, ವಜ್ರರಾಜ! ಸೂರ್ಯೋದಯವಾಗುವುದರೊಳಗೆ ಸಕಲ ಗಂಧರ್ವ ಸಮುದಾಯವೂ ಇಂತು ಸಜ್ಜೀಕೃತವಾಯಿತು. ಆ ಸಕಲ ಸೈನಿಕರೂ ಕೈಯಲ್ಲಿ ನಾನಾವಿಧವಾದ ಆಯುಧಗಳನ್ನು ಧರಿಸಿದವರಾಗಿ ಸಿಂಹನಾದ ಶಂಖನಾದಗಳಿಂದ ತಮ್ಮ ಸ್ನೇಹಿತರ ಮನಸ್ಸಿಗೆ ಆನಂದವನ್ನುಂಟುಮಾಡುತ್ತಾ, ರಣಚಂಡವೇಗಶಾಲಿಗಳಾದ ಗಂಧರ್ವರು ಭರತನ ಬರುವಿಕೆಯನ್ನು ಎದುರುನೋಡುತ್ತಾ ಕದನದ ಬಯಲನ್ನು ಸೇರಿನಿಂತರು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಗಂಧರ್ವಸೈನ್ಯ ವರ್ಣನೆಯೆಂಬ
ಹೆಸರಿನ ಇನ್ನೂರೈವತ್ತೆಂಟನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ
## ॥ ಏಕೋನಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ವಿಬುದ್ಧಾ ಯಾಮಿನೀಶೇಷೇ ಸರ್ವ ಏವ ಮಹೀಕ್ಷಿತಃ ।
ನಿರ್ಯಯುರ್ನಗರಾಕಾರೈ ರಥೈಃ ಸಂಗ್ರಾಮಲಾಲಸಾಃ ॥ ೧ ॥

ಬಲೇನ ಚತುರಂಗೇಣ ನಾನಾವಾದಿತ್ರವಾದಿನಾ ।
ಬಂದಿಭಿಃ ಸ್ತೂಯಮಾನಾಶ್ಚ ವಂದ್ಯಮಾನಾಶ್ಚ ಸೈನಿಕೈಃ ॥ ೨ ॥

---

### ಇನ್ನೂರೈವತ್ತೊಂಭತ್ತನೆಯ ಅಧ್ಯಾಯವು.

೧. ಮಾರ್ಕಂಡೇಯನು ಹೇಳುತ್ತಾನೆ:—ಇನ್ನು ಮುಂದೆ ಭರತನ ಸೈನಿಕರ ಸಂಗ್ರಾಮಸಿದ್ಧತೆಯನ್ನು ವಿವರಿಸುವೆನು. ಕೇಳು, ವಜ್ರರಾಜ! ಭರತನೊಡನೆ ಯುದ್ಧಕ್ಕಾಗಿ ಬಂದಿದ್ದ ಸಮಸ್ತ ರಾಜರೂ ಸಹ ಬೆಳಗಿನಯಾಮದಲ್ಲಿ ಎದ್ದು ಯುದ್ಧೋತ್ಸಾಹಿಗಳಾಗಿ ದೊಡ್ಡ ದೊಡ್ಡ ನಗರಗಳ ಆಕಾರದಂತಿದ್ದ ತಮ್ಮ ತಮ್ಮ ರಥಗಳನ್ನೇರಿದವರಾಗಿ ರಣರಂಗದ ಕಡೆ ಹೊರಟರು.

೨. ಚತುರಂಗ ಬಲಸಮೇತರಾಗಿ ಸೈನಿಕರು ಹೊರಟೊಡನೆಯೇ ನಾನಾವಿಧ ವಾದ್ಯಧ್ವನಿಗಳು ಮೊಳಗಿದುವು. ವಂದಿಗಳು ಹೊಗಳುವ ಸದ್ದು ಕೇಳಿಬಂದಿತು. ಸೈನಿಕರೆಲ್ಲರೂ ನಮಸ್ಕಾರಮಾಡತೊಡಗಿದರು.

ಪೃಥಕ್ಪೃಥಕ್ಸುಸನ್ನದ್ಧಾ ನಗರದ್ವಾರಮಾಗತಾಃ ।
ಕೃತ್ವಾ ಚಾವಶ್ಯಕಂ ಸರ್ವಂ ಭರತೋಽಪಿ ಮಹಾಯಶಾಃ ॥ ೩ ॥

ರಥೇನ ಕಾಂಚನಾಂಗೇನ ನಿರ್ಯಯೌ ನಗರಾದ್ಬಹಿಃ ।
ಯಂತಾ ರಥಸ್ಯ ತಸ್ಯಾಸೀದ್ಯುಧಾಜಿನ್ಮಾತುಲಃ ಸ್ವಯಂ ॥ ೪ ॥

ವಿರರಾಜ ಧ್ವಜಂ ತಸ್ಯ ಕೋವಿದಾರಮಹಾದ್ರುಮಂ ।
ಸ ತೇನ ರಥಮುಖ್ಯೇನ ಬಹಿರ್ನಿರ್ಗಮ್ಯ ಪಾರ್ಥಿವಃ ॥ ೫ ॥

ಸಮೇತ್ಯ ಪಾರ್ಥಿವೈಃ ಸರ್ವೈಃ ಪೂಜಯಿತ್ವಾ ಚ ತಾನ್ನೃಪಾನ್ ।
ವಜ್ರಂ ಕೃತ್ವಾ ಮಹಾವ್ಯೂಹಂ ಪ್ರಯಯೌ ಲಘುವಿಕ್ರಮಃ ॥ ೬ ॥

---

೩. ಈರೀತಿ ನಡೆದಿರುವಲ್ಲಿ ಭರತನು ರಥದಮೇಲೆ ಕುಳಿತು ಸಂಗ್ರಾಮಯಾತ್ರೆಗಾಗಿ ಹೊರಟನು. ಅವನು ಹೊರಟೊಡನೆ ಅವನ ಜತೆಯಲ್ಲಿ ಬಂದಿದ್ದ ನಾನಾದೇಶದ ರಾಜರೂ ಸಹ ಬೇರೆಬೇರೆಯಾಗಿ ತಮ್ಮ ಸೈನ್ಯಸಮೇತರಾಗಿ ಭರತನನ್ನನುಸರಿಸಿ ಹೊರಟರು.

೪. ಈಮೇರೆ ಸಂಗ್ರಾಮಸನ್ನಾಹದಿಂದ ಕೂಡಿದ ಭರತನು ಒಂದು ಸುವರ್ಣಮಯ ರಥದ ಮೇಲೆ ಕುಳಿತು ಹೊರಡಲು ಸಿದ್ಧನಾದೊಡನೆಯೇ, ಆ ರಥದ ಮೇಲೆ ಅವನ ಸೋದರಮಾವನಾದ ಯುಧಾಜಿನ್ಮಹಾರಾಜನೇ ಸ್ವಯಂಸಾರಥಿಯಾಗಿ ಬಂದು ರಥದ ಮುಂಭಾಗವನ್ನಲಂಕರಿಸಿ ಕುಳಿತನು.

೫. ಆ ರಥದ ಮುಂಭಾಗದಲ್ಲಿ ಕೋವಿದಾರವೃಕ್ಷವು ಧ್ವಜವಾಗಿ ನೆಡಲ್ಪಟ್ಟು ವಿರಾಜಿಸಿತು. ಇಂತಹ ಮಹಾಶ್ರೇಷ್ಠವಾದ ರಥದ ಮೇಲೆ ಕುಳಿತು ಭರತನು ಊರಿನ ಹೊರಕ್ಕೆ ಪ್ರಯಾಣಮಾಡಿದನು.

೬. ತನ್ನ ಜತೆಯಲ್ಲಿ ಬಂದಿದ್ದ ಸಮಸ್ತ ರಾಜರನ್ನೂ ಭರತನು ನಮಸ್ಕರಿಸಿ ಉಪಚಾರದ ಮಾತುಗಳನ್ನಾಡಿ ಅವರೊಡನೆ ಕೂಡಿದವನಾಗಿ ತನ್ನ ಸೈನ್ಯವನ್ನು ವಜ್ರವ್ಯೂಹದಂತೆ ರಚಿಸಿ ರಣರಂಗವನ್ನು ಪ್ರವೇಶಿಸಿದನು.

ಪ್ರಯಾಣೇ ತಸ್ಯ ಸೈನ್ಯಸ್ಯ ಕಂಪತೀವ ವಸುಂಧರಾ ।
ಶಬ್ದೇನ ಮಹತಾ ತಸ್ಯ ದೀರ್ಯತೇ ಚ ನಭಸ್ತಲಂ ॥ ೭ ॥

ಬಭೂವ ರಾಜಸೇನಾನ್ಯಃ ನಿಶಾಕಾಲಃ ಸುದಾರುಣಃ ।
ನೃಪಾಭರಣಮಾಣಿಕ್ಯತೇಜಸಾ ಭುವಿ ರಾಜಿತಾ ॥ ೮ ॥

ರಜೋಂಧಕಾರೇಽಪಿ ಚಮೂಃ ಸಾ ಪ್ರಯಾತಿ ಯಥಾಸುಖಂ ।
ಸ ಗತ್ವಾ ದೂರಮಧ್ವಾನಂ ಸೂರ್ಯಸ್ಯೋದಯನಂ ಪ್ರತಿ ॥ ೯ ॥

ಆಸಸಾದ ಮಹತ್ಸೈನ್ಯಂ ಗಂಧರ್ವಾಣಾಂ ದುರತ್ಯಯಂ ॥ ೧೦ ॥

---

೭ ಅಗಣಿತ ಸೈನ್ಯಸಮೇತನಾದ ಭರತನು ಸಂಗ್ರಾಮಕ್ಕೆ ತೆರಳಿದ ಸಮಯದಲ್ಲಿ ಭೂಮಿಯು ಕಂಪಿಸುವಂತೆ ಕಾಣುತ್ತಿತ್ತು. ಆ ಸೈನ್ಯದ ಮಧ್ಯದಿಂದ ಹೊರಟ ಮಹತ್ತಾದ ಶಬ್ದವನ್ನು ಕೇಳಿದುದಾದರೆ ಆಕಾಶವೇ ಒಡೆದುಹೋಗುತ್ತಿದೆಯೋ ಎಂಬಂತೆ ತೋರುತ್ತಿದ್ದಿತು.

೮. ಆ ಸೈನ್ಯದ ತುಳಿತದಿಂದೆದ್ದ ಧೂಳು ಆಕಾಶಕ್ಕೆಲ್ಲಾ ವ್ಯಾಪಿಸಿ ಸೂರ್ಯಮಂಡಲವನ್ನಡ್ಡಗಟ್ಟಿದುದರಿಂದ, ಸಾಯಂಕಾಲವಾಗಿ ಹೋಯಿತೋ ಏನೋ ಎಂಬಂತೆ ಕಾಣುತ್ತಿದ್ದಿತು. ಆಗ ಧೂಳಿನಿಂದ ಕತ್ತಲೆಗವಿದಾ ಸೈನ್ಯವು ಭರತನು ಧರಿಸಿದ್ದ ಆಭರಣಗಳಲ್ಲಿ ಕೆತ್ತಿರುವ ಜಾಜ್ವಲ್ಯಮಾನವಾದ ಮಾಣಿಕ್ಯರತ್ನಕಾಂತಿಯ ಬೆಳಕಿನಿಂದ ಚೆನ್ನಾಗಿ ಕಾಣುತ್ತಿದ್ದಿತು.

೯. ಇಂತಹ ರಜಸ್ತಮವನ್ನು ಭೇದಿಸಿ, ರತ್ನಕಾಂತಿಯಿಂದ ವಿರಾಜಿತವಾದಾ ಸೈನ್ಯವು ಸುಖವಾಗಿ ಪ್ರಯಾಣಮಾಡಿತು. ಸೂರ್ಯೋದಯವಾಗುವ ಹೊತ್ತಿಗೆ ಬಹುದೂರ ಪ್ರಯಾಣಮಾಡಿ ಆ ಸೈನ್ಯವು ನಿರ್ದೇಶಸ್ಥಳವನ್ನು ಸಮೀಪಿಸಿತು.

೧೦-೧೧. ನೋಡುನೋಡುತ್ತಲಿದ್ದಂತೆಯೇ ಭರತನ ಸೈನ್ಯವು ಗಂಧರ್ವರ ಸೈನ್ಯದ ಹತ್ತಿರ ಬಂದೇಬಿಟ್ಟಿತು. ಮಹಾಸೈನ್ಯವೆಂಬ ಜಲರಾಶಿಯಿಂದ ಕೂಡಿ ದಡವೇ ಕಾಣದೇ ಇರುವಂತಿದ್ದ ಪರಸ್ಪರ ಸಂಹರಿಸಲುದ್ಯುಕ್ತವಾದ ಎರಡು ಮಹಾ

**ತೌ ಸೈನ್ಯತೋಯೌಘಮಹಾದುರಂತೌ**
**ಸಂಹಾರನಾಗಾವಿವ ತುಲ್ಯರೂಪೌ ।**
**ಬಾಲಾರ್ಣವೌ ಗಾಢಮಥ ಪ್ರಹಾರಂ**
**ಪ್ರಚಕ್ರತುರ್ಮನ್ಯುವಶಾನುಯಾತೌ** ॥ ೧೧ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಭರತಸೈನ್ಯನಿರ್ಯಾಣಂ ನಾಮೈಕೋನ**
**ಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ.**



---

ಗಜಗಳಂತೆ ತೋರುತ್ತಲಿದ್ದ, ಆ ಸೈನ್ಯದ್ವಯವೆಂಬ ಎರಡು ಮಹಾಸಮುದ್ರಗಳು ಎದುರುಬದುರಾಗಿ ನಿಂತು ಮಹಾಕೋಪೋದ್ದೀಪಿತವಾಗಿ ಗಾಢಪ್ರಹಾರಗಳಿಂದ ಘೋರ ಯುದ್ಧಕ್ಕೆ ಆರಂಭಮಾಡಿದವು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಭರತಸೈನ್ಯ ಪ್ರಯಾಣವೆಂಬ
ಹೆಸರಿನ ಇನ್ನೂರೈವತ್ತೊಂಭತ್ತನೇ ಅಧ್ಯಾಯವು
ಮುಗಿದುದು.



ಶ್ರೀಃ

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಷಷ್ಟ್ಯುತ್ತರ ದ್ವಿಶತತಮೋಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ತತಃ ಪ್ರವವೃತೇೋ ಯುದ್ಧಂ ತುಮುಲಂ ಲೋಮಹರ್ಷಣಂ ।
ಶೂರಾಣಾಂ ಹರ್ಷಜನನಂ ಭೀತಾನಾಂ ಭಯವರ್ಧನಂ ॥ ೧ ॥

ಸೇನಾವಿನಿರ್ಗಮೋ ತತ್ರ ರಜಸಾಚ್ಛಾದಿತಂ ಜಗತ್ ।
ನ ಪ್ರಜ್ಞಾಯತ ರಾಜೇಂದ್ರ ಕಿಂಚಿದೇವ ಸಮಂತತಃ ॥ ೨ ॥

---

### ಇನ್ನೂರರವತ್ತನೆಯ ಅಧ್ಯಾಯವು.

೧. ಮಾರ್ಕಂಡೇಯನು ವಜ್ರಮಹಾರಾಜನನ್ನು ಕುರಿತು ಯುದ್ಧವೃತ್ತಾಂತವನ್ನು ವಿವರಿಸಲಾರಂಭಿಸುತ್ತಾನೆ:—ಶೂರಜನರಿಗೆ ಹರ್ಷವನ್ನುಂಟುಮಾಡುವುದಾದ, ಅಂಜುಬುರುಕತನವನ್ನು ಹೆದರಿಸಿ ಓಡಿಸುವುದಾದ, ರೋಮಾಂಚನಜನಕವಾದ ಮಹಾತುಮುಲಯುದ್ಧವು ಮಾನುಷಗಂಧರ್ವರಿಗಾರಂಭವಾಯಿತು. ಕೇಳೈ! ಶೂರವೀರ ವಜ್ರರಾಜ!

೨. ಈ ಮಹಾಪ್ರಚಂಡಸೈನ್ಯದ ತುಳಿತದಿಂದೆದ್ದ ಧೂಳಿನ ರಾಶಿಯಿಂದ ಆಕಾಶವೆಲ್ಲಾ ಮುಚ್ಚಿಕೊಂಡು ಕಣ್ಣೇ ಕಾಣಿಸದೆ ಹೋಯಿತೆಂದು ಮೇಲೆಯೇ ಬರೆದಿದೆಯಷ್ಟೆ? ಇಂತಹ ಧೂಳು ದಶದಿಕ್ಕುಗಳಲ್ಲಿಯೂ ಮುಚ್ಚಿಕೊಂಡು ಎಷ್ಟು ಹೊತ್ತಾದರೂ ಸ್ವಲ್ಪವೂ ಅಡಗಲೇ ಇಲ್ಲ.

ಕೂಜತಾಂ ಧನುಷಾಂ ಶಬ್ದಃ ಶ್ರೂಯತೇ ತುಮುಲೋ ಮಹಾನ್ ।
ಶಂಖಭೇರೀನಿನಾದಶ್ಚ ಕುಂಜರಾಣಾಂ ಚ ಬೃಂಹಿತಂ ॥ ೩ ॥

ಹಯಾನಾಂ ಹ್ರೇಷಮಾಣಾನಾಂ ಶೂರಾಣಾಂ ಚೈವ ಗರ್ಜತಾಂ ।
ಶಸ್ತ್ರಾಣಾಂ ಪಾತ್ಯಮಾನಾನಾಂ ಯೋಧಾನಾಂ ಕವಚೇಷ್ವಪಿ ॥ ४ ॥

ತಿಷ್ಠ ತಿಷ್ಠ ನ ಮೇ ಜೀವನ್ಗಂತಾಽಸಿ ರಣಮೂರ್ಧನಿ ॥ ೫ ॥

ಸ್ಥಿತೋಽಸ್ಮಿ ಪ್ರಹರಸ್ವೇತಿ ಕಿಂ ನ ಜಾನಾತಿ ಮಾಂ ಭವಾನ್ । ॥ ೬ ॥

ಪ್ರಹರಸ್ವ ತಥಾ ಛಿಂಧಿ ಭಿಂಧಿ ಘಾತಯ ಮಾ ಚಿರಂ ।
ಏವಮಾದೀನಿ ವಾಕ್ಯಾನಿ ಶ್ರೂಯಂತೇ ರಣಮೂರ್ಧನಿ ॥ ೭ ॥

ತಥಾ ತುಮುಲಸಂಗ್ರಾಮೇ ವರ್ತಮಾನೇ ಸುದಾರುಣೇ ।
ಪ್ರಶಶಾಮ ರಜೋ ಭೌಮಮುತ್ಥಿತಂ ರಣಶೋಣಿತೈಃ ॥ ೮ ॥

---

೩-४. ಆ ಯುದ್ಧರಂಗದಲ್ಲಿ ಧನುಷ್ಟಂಕಾರಧ್ವನಿಯೂ, ಜನಗಳ ಕೂಗಾಟದ ಶಬ್ದವೂ, ಶಂಖಭೇರೀನಿನಾದಗಳೂ, ಕುಂಜರಗಳ ಬೃಂಹಿತಧ್ವನಿಯೂ, ಕುದುರೆಗಳ ಹೇಷಾರವವೂ, ಶೂರರ ಸಿಂಹಗರ್ಜನೆಗಳೂ, ಖಟ್ ಖಟ್ ಎಂಬುದಾಗಿ ಶಸ್ತ್ರಗಳು ಶತ್ರುಕವಚಗಳನ್ನು ಪ್ರಹರಿಸುತ್ತಿರುವ ಧ್ವನಿಗಳೂ ವಿಶೇಷವಾಗಿ ತುಂಬಿಹೋಗಿದ್ದುವು.

೫. ಎಲೋ! ನಿಲ್ಲು, ನಿಲ್ಲು, ಈ ರಣಾಂಗಣದಲ್ಲಿ ನಾನು ಜೀವದೊಡನೆ ಬದುಕಿರುವಾಗ ನೀನು ಬದುಕಿಹೋಗುವುದೆಂದರೇನು? ನನ್ನ ಮುಂದೆ ನಿಂತು ಯುದ್ಧಮಾಡು. ಒಂದು ಬಾರಿ ನೀನೇ ನನ್ನನ್ನು ಮೊದಲು ಹೊಡಿ. ಆಮೇಲೆ ನನ್ನ ಏಟಿನ ರುಚಿಯನ್ನು ನೀನು ನೋಡುವಿಯಂತೆ.

೬-೭. ಹೊಡಿ, ಕಡಿ, ಕೊಲ್ಲು, ಕತ್ತರಿಸು, ಎನ್ನುವ ಮಾತುಗಳೇ ಆ ರಣರಂಗದಲ್ಲೆಲ್ಲಾ ತುಂಬಿಹೋಗಿದ್ದಿತು.

೮. ಈರೀತಿ ಭಯಂಕರವಾದ ಆ ತುಮುಲಯುದ್ಧವು ಘೋರರೂಪವನ್ನು ತಾಳಿ ನಡೆಯುತ್ತಿರುವಲ್ಲಿ ಉಭಯಪಕ್ಷದ ಸೈನಿಕರ ದೇಹದಿಂದ ಹೊರಹೊರಟ ರಕ್ತಪ್ರವಾಹದಿಂದ ಭೂಮಿಯನ್ನೂ, ಅಂತರಿಕ್ಷವನ್ನೂ ವ್ಯಾಪಿಸಿಕೊಂಡಿದ್ದ ಧೂಳಿನ ರಾಶಿಯು ಅಡಗಿಹೋಯಿತು.

ಪೂರ್ವೋತ್ಥಿತೇನ ರಜಸಾ ಮೇಘೇನೇವ ನಭಸ್ತಲಂ ।
ವ್ಯಾಪ್ತಂ ತದ್ವಿರಜಸ್ಕೇನ ತದಾ ರಾಜನ್ರಣಾಂಗಣೇ ॥ ೯ ॥

ತತೋ ಯುಯುಧಿರೇ ವೀರಾಃ ಪಶ್ಯಮಾನಾಃ ಪರಸ್ಪರಂ ।
ಗೋತ್ರಾಪದಾನನಾಮಾನಿ ಕೀರ್ತಯಂತಃ ಪುನಃ ಪುನಃ ॥ ೧೦ ॥

ಸೇನಾನಾಂ ಭಜ್ಯಮಾನಾನಾಂ ಸೈನ್ಯಖಂಡೈರ್ಬಲೀಯಸಾಂ ।
ಭೂಯಶ್ಚಾವರ್ತಮಾನಾನಾಂ ಶುಶ್ರುವೇ ತುಮುಲಃ ಸ್ವನಃ ॥ ೧೧ ॥

ಚಿತ್ರಾಣಾಂ ಚ ಧ್ವಜಾನಾಂ ಚ ಪತಾಕಾನಾಂ ಚ ಭೂಭುಜಃ ।
ಅದೃಶ್ಯತ ಸಮಾಸಿಕ್ತಂ ರುಧಿರಂ ರಣಮೂರ್ಧನಿ ॥ ೧೨ ॥

ಶ್ವಭ್ರೇ ತದಾ ಮಹಾರಾಜ ರಜೋಮೇಘೇ ಕ್ಷಯಂ ಗತೇ ।
ನಿರ್ಮಲಾಸು ತತೋ ದಿಕ್ಷು ಪ್ರಾವರ್ತತ ಮಹಾರಣಂ ॥ ೧೩ ॥

---

೯. ಪೂರ್ವೋಕ್ತವಾದ ಧೂಳುಗಳು ಅಡಗಿ ಅವು ರಕ್ತದಲ್ಲಿ ಕಲೆಸಲ್ಪಟ್ಟು ಕೆಸರಾಗಿರುವುದನ್ನು ನೋಡಿದರೆ ಆಕಾಶದಲ್ಲಿ ಗುಂಪು ಗುಂಪಾಗಿ ಕೂಡಿದ ಮೋಡಗಳ ಸಮೂಹವೋ ಎಂಬಂತೆ ತೋರುತ್ತಿದ್ದಿತು.

೧೦. ಆ ಬಳಿಕ ವೀರರೆಲ್ಲರೂ ಒಬ್ಬರ ಮುಖವನ್ನೊಬ್ಬರು ನೋಡುತ್ತಾ, ತಮ್ಮ ತಮ್ಮ ಗೋತ್ರಸೂತ್ರಗಳನ್ನೂ ಪರಾಕ್ರಮವನ್ನೂ ಪ್ರಶಂಸೆಮಾಡಿಕೊಳ್ಳುತ್ತಾ ಯುದ್ಧಮಾಡಲಾರಂಭಿಸಿದರು.

೧೧. ಅಲ್ಲಲ್ಲಿಯೇ ವಿಭಾಗಿಸಲ್ಪಟ್ಟಿದ್ದ ಸೈನ್ಯದ ತುಕ್ಕಡಿಗಳು ಯುದ್ಧ ಮಾಡ್ಯಿ ಮಾಡಿ ಅವರಲ್ಲಿನ ಶೂರರು ನಾಶವಾಗುತ್ತಿರುವುದರೊಳಗಾಗಿ ಆ ಸ್ಥಳಕ್ಕೆ ಬೇರೊಂದ ಸೈನ್ಯದ ತುಕ್ಕಡಿಯು ಸಿದ್ಧವಾಗಿ ಬಂದು ನಿಲ್ಲುತ್ತಿತ್ತು.

೧೨. ರಥಗಳ ಮೇಲೆ ನೆಟ್ಟಿದ್ದ ಅನೇಕ ರಾಜರ ಚಿತ್ರವಿಚಿತ್ರವಾದ ಧ್ವಜ ಪಟಗಳು ಆ ರಣಾಂಗಣದಲ್ಲಿ ರಕ್ತದಕಲೆಗಳಿಂದ ವ್ಯಾಪ್ತವಾಗಿ ಹೋದುವು.

೧೩. ಆ ರಜೋಮೇಘವು ಮಾಯವಾಗಿ ಸಕಲ ದಿಕ್ಕುಗಳೂ ಶುಭ್ರವಾಗಿ, ಅಂತರಿಕ್ಷಪ್ರದೇಶವೂ ಸಹ ಸ್ವಚ್ಛವಾಗಿ ಕಾಣತೊಡಗಿದೊಡನೆಯೇ ಪ್ರಚಂಡಯುದ್ಧ ಕ್ಕಾರಂಭವಾಯಿತು.

**ತಥಾ ಪ್ರವೃತ್ತೇ ಸಂಗ್ರಾಮೇ ದೇವಗಂಧರ್ವದಾನವೈಃ ।**
**ಸಿದ್ಧೈರ್ವಿದ್ಯಾಧರೈಶ್ಚೈವ ಮುನಿಸಂಘೈಃ ಸಮಂತತಃ ॥ ೧೪ ॥**

**ಆವೃತಂ ಸಹಸಾ ವ್ಯೋಮ ವಜ್ರಯುದ್ಧಕುತೂಹಲೈಃ ।**
**ವ್ಯದೃಶ್ಯಂತ ವಿಮಾನಾನಿ ತೇಷಾಂ ಖೇ ವಿಮಲಾನ್ಯಪಿ ॥ ೧೫ ॥**

**ಕಿಂಕಿಣೀಶತಘುಷ್ಟಾನಿ ಪತಾಕಾಶೋಭಿತಾನಿ ಚ ।**
**ಶುಭಂ ಗಂಧಮುಥಾದಾಯ ಸುರಭಿರ್ಮಾರುತೋ ವವೌ ॥ ೧೬ ॥**

**ಪಪಾತ ಪುಷ್ಪವರ್ಷಂ ಚ ಯೋಧಾನಾಂ ತತ್ರ ಮೂರ್ಧನಿ ।**
**ತಥಾ ಪ್ರವೃತ್ತೇ ತುಮುಲೇ ಕ್ಷ್ವೇಡಿತೋತ್ಕೃಷ್ಟನಾದಿತೇ ॥ ೨೦ ॥**

**ಪದಾತಯಸ್ತದಾ ಜಘ್ನುಃ ಪದಾತೀನಿ ಚ ಸಂಯುಗೇ ।**
**ಖಡ್ಗಧಾರಾನಿಕೃತ್ತಾನಾಂ ಪದಾತೀನಾಂ ಪದಾತಿಭಿಃ ॥ ೧೮ ॥**

---

. ೧೪. ಆ ಗಂಧರ್ವಮಾನವರ ಯುದ್ಧವನ್ನು ನೋಡಲಪೇಕ್ಷೆಯಿಂದ ಆಕಾಶ ಮಾರ್ಗದಲ್ಲಿ ಸಿದ್ದರೂ, ವಿದ್ಯಾಧರರೂ, ಋಷಿಗಳೂ ಸಹ ಎಲ್ಲಾ ಕಡೆಯಲ್ಲಿಯೂ ಗುಂಪುಕೂಡಿ ನೋಡುತ್ತಿದ್ದರು.

೧೫. ಆ ಕ್ರೂರಸಮರವನ್ನು ನೋಡಲಪೇಕ್ಷಿಸುತ್ತಿದ್ದ ಆ ಸಿದ್ಧವಿದ್ಯಾಧರಾದಿ ದೇವತಾಶೂರರಿಂದ ಆಕಾಶವೆಲ್ಲವೂ ಮುಚ್ಚಿಹೋದೊಡನೆಯೇ ಆ ವೀರರ ವಿಮಾನ ಗಳು ಆಕಾಶದಲ್ಲಿ ತ್ತೆತ್ತಲೂ ಕಾಣಿಸತೊಡಗಿದುವು.

೧೬. ಆ ರಥಗಳಿಗೆಲ್ಲಾ ನೂರಾರು ಕಿರುಗಂಟೆಗಳನ್ನು ಕಟ್ಟಿದ್ದರು. ಅವುಗಳ ಧ್ವನಿ ಎಲ್ಲೆಲ್ಲೂ ತುಂಬಿತ್ತು. ಅವುಗಳಿಗೆ ಕಟ್ಟಿದ್ದ ಧ್ವಜಪಟಗಳು ಹಾರಾಡುತ್ತಿದ್ದುವು. ಸುವಾಸನಾಮಯವಾದ ವಾಯುವು ಪರಿಮಳಗಂಧವನ್ನು ಆಕಾಶಮಾರ್ಗದಿಂದ ತೆಗೆದು ಕೊಂಡು ಬಂದು ಆ ರಣಾಂಗಣದಲ್ಲಿ ಬೀಸುತ್ತಿತ್ತು.

೧೭. ಆ ಭೀಷಣವಾದ ತುಮುಲಯುದ್ಧವು ನಡೆಯುತ್ತಿದ್ದಾ ರಣರಂಗದಲ್ಲಿ ಹೊರಟ ವೀರರ ಸಿಂಹನಾದವು ದಶದಿಕ್ಕುಗಳಲ್ಲೂ ಪ್ರತಿಧ್ವನಿತವಾಗುತ್ತಿರಲು ಆ ವೀರರ ತಲೆಯ ಮೇಲೆ ಸಕಲ ದೇವತೆಗಳೂ ಆಕಾಶದಿಂದ ಪುಷ್ಪವೃಷ್ಟಿಯನ್ನು ಕರೆದರು.

೧೮. ಆಗ ನಡೆದ ಮಹಾಯುದ್ಧದಲ್ಲಿ ಪದಾತಿಗಳು (ಕಾಲಾಳು ಅಥವಾ ಸಿಪಾಯಿ) ಪದಾತಿಗಳನ್ನು ಸಂಹರಿಸುತ್ತಿದ್ದರು. ಅಂದರೆ ಎಲ್ಲರೂ ಖಡ್ಗಧಾರಿಗಳಾಗಿ ಒಬ್ಬರ ತಲೆಯನ್ನೊಬ್ಬರು ಕತ್ತರಿಸಿ ತುಂಡುಮಾಡಿಬಿಡುತ್ತಿದ್ದರು.

ದ್ವಿಧಾ ಕೃತಾನಿ ಗಾತ್ರಾಣಿ ನಿಪತಂತಿ ಮಹೀತಲೇ ।
ಗೃಹೀತ್ವಾ ಖಡ್ಗಪಾತಾನಿ ರೇಜುಃ ಕೇಚಿಚ್ಚ ವರ್ಮಿಣಃ ॥ ೧೯ ॥

ಖಡ್ಗಮುದ್ಧರತಾಂ ತೇಷಾಂ ಚಿಚ್ಛಿದುರ್ನೃಪ ವಿಗ್ರಹಾನ್ ।
ಕೇಚಿದ್ಗದಾ ವಿನಿರ್ಭಿನ್ನಮಸ್ತಕಾ ಗದಿಭಿಃ ಕ್ಷಿತೌ ॥ ೨೦ ॥

ಪತಿತಾಸ್ತತ್ರ ದೃಶ್ಯಂತೇ ರಣೇ ಶತಸಹಸ್ರಶಃ ।
ಭಗ್ನಾಸಿಶೇಷನಿಷ್ಪೇಷನಿಹತಾರಾತಯಸ್ತಥಾ ॥ ೨೧ ॥

ಸಿಂಹನಾದರವಾಂಶ್ಚಕ್ರುಃ ಪರಸೈನ್ಯವಿದಾರಣಾತ್ ।
ಕೇಶೇಷ್ವನ್ಯೋನ್ಯಮಾಕೃಷ್ಯ ಖಡ್ಗೈಃ ಕೇಚಿತ್ಪರಸ್ಪರಂ ॥ ೨೨ ॥

ಆಸೇದುರ್ವಸುಧಾಂ ಕೃತ್ವಾ ಗತಪ್ರಾಣಾಸ್ತಥಾಽಪರೇ ।
ಪೃಷ್ಠವಿನ್ಯಸ್ತವರ್ಮಾಣಃ ಸನ್ನದ್ಧಾಂಸ್ತುರಗಾಂಸ್ತಥಾ ॥ ೨೩ ॥

---

೧೯. ಈರೀತಿ ಎರಡು ತುಂಡಾದೊಡನೆಯೇ ಆ ರುಂಡಮುಂಡಗಳು ಭೂಮಿಯ ಮೇಲೆ ಬೀಳುತ್ತಿದ್ದುವು. ಅವರ ಪೈಕಿ ಮುಂಡಗಳು ಕೈಯಲ್ಲಿ ಕತ್ತಿಯನ್ನು ಹಿಡಿದು ಕೊಂಡೇ ಕವಚ ಸಹಿತವಾಗಿ ತೋರುತ್ತಿದ್ದುವು.

೨೦. ಈರೀತಿ ಮುಂಡಗಳು ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡಿದ್ದರೆ ಇನ್ನಾರನ್ನಾದರೂ ಹೊಡೆದು ಕತ್ತರಿಸುವುವೋ ಎಂಬ ಶಂಕೆಯಿಂದ ಮುಂಡಗಳ ಕೈಯಲ್ಲಿದ್ದ ಕತ್ತಿಯನ್ನು ಬಲಾತ್ಕಾರವಾಗಿ ಕಿತ್ತು, ಆ ಕತ್ತಿಯಿಂದಲೇ ಆ ಮುಂಡ ವನ್ನು ಎದುರಾಳಿಗಳು ಎರಡು ಪಾಲುಮಾಡಿ ಕತ್ತರಿಸಿ ಚೆಲ್ಲುತ್ತಿದ್ದರು.

೨೧. ಕೆಲವು ತಲೆಗಳು ಗದೆಯನ್ನು ಹಿಡಿದಿದ್ದ ವೀರರಿಂದ ಹೊಡೆಯಲ್ಪಟ್ಟು ಆ ಏಟಿನಿಂದ ತುಂಡುತುಂಡಾಗಿ ಭೂಮಿಯಲ್ಲಿ ಬೀಳುತ್ತಿದ್ದುವು. ಈರೀತಿಯಾಗಿ ಬಿದ್ದ ತಲೆಗಳು ಆ ರಣರಂಗದಲ್ಲಿ ನೂರಾರು ಸಾವಿರಾರು ಸಂಖ್ಯೆಯಿಂದ ಕಾಣಲ್ಪಡು ತ್ತಿದ್ದುವು.

೨೨. ಪರಸೈನ್ಯದಿಂದೇಟು ತಿಂದ ವೀರರನೇಕರು ಅಲ್ಲಿ ಸಿಂಹನಾದವನ್ನು ಮಾಡುತ್ತಲಿದ್ದರು. ಒಬ್ಬೊಬ್ಬರ ತಲೆಗಳಲ್ಲಿರುವ ಜುಟ್ಟನ್ನು ಮತ್ತೊಬ್ಬರು ಎಡಗೈ ಯಿಂದ ಹಿಡಿದು ಬಲಗೈಯಲ್ಲಿದ್ದ ಕತ್ತಿಯಿಂದ ತಲೆಯನ್ನು ತರಿಯುತ್ತಿದ್ದರು.

೨೩. ಈ ರೀತಿ ಏಟು ತಿಂದ ವೀರರು ಭೂಮಿಯ ಮೇಲೆ ಬಿದ್ದು ಪ್ರಾಣ ಗಳನ್ನು ಬಿಡುತ್ತಿದ್ದರು. ಮುಖವಡಿಯಾಗಿ ಬಿದ್ದು ಅಂಗಿಗಳನ್ನು ಮೇಲಕ್ಕೆ ಮಾಡಿ ಕೊಂಡು ಕುದುರೆಯಿಂದ ಕೆಳಗೆ ಬಿದ್ದು ಕೆಲವರು ಸಾಯುತ್ತಿದ್ದರು.

ಕೃತ್ವಾ ವಿಷಾದಾನ್ಸಮರೇ ನಿಜಘ್ನುಃ ಸಾದಿನಾಂ ಗಣಂ ।
ಆರುಹ್ಯ ವರ್ಮಿಣಃ ಕೇಚಿದ್ವೇಗಾಚ್ಛಿತ್ತ್ವಾರಥಾನ್ರಣೇ ॥ ೨೪ ॥

ಸಾರಥೀನ್ವಿಗತಪ್ರಾಣಾಂಶ್ಚಕ್ರುರ್ಯುದ್ಧವಿಶಾರದಾಃ ।
ಚಿಚ್ಛಿದುರ್ವಾರಣೇಂದ್ರಾಣಾಂ ಕರಾನ್ಕೇಚಿತ್ಪದಾತಿನಃ ॥ ೨೫ ॥

ಕೇಚಿದಂಶನವಿನ್ಯಸ್ತಪಾದಾಶ್ಚಾರುರುಹುರ್ಗಜಾನ್ ।
ಸಾದಿನಶ್ಚ ತಥಾ ಕೇಚಿದ್ವಿಶಿರಸ್ಕಾನ್ಪ್ರಚಕ್ರಿರೇ ॥ ೨೬ ॥

ಚಕ್ರುಃ ಪದಾತಿನೋ ಧ್ವಾಂತಾಃ ಖಡ್ಗೈರಾಕಾಶಸನ್ನಿಭೈಃ ।
ಕೇಚಿಚ್ಚ ಸಾದಿನಃ ಪ್ರಾಸ್ಯೈಃ ಪಂಚಸಪ್ತ ತಥಾ ಶರಾನ್ ॥ ೨೭ ॥

ಶ್ರೇಣೀಕೃತಾನ್ಸ್ವೈ ಬಿಭಿದುಃ ಶಿಕ್ಷಯಾ ರಣಕೋವಿದಾಃ ।
ಕೇಚಿಚ್ಚಾಪಜ್ಯಾಧನುರ್ನ್ಯಸ್ತಬಾಣಜಾಲಾಕುಲೀಕೃತಾನ್ ॥ ೨೮ ॥

---

೨೪. ಕೆಲವು ವೀರರು ರಥದ ಮೇಲೆ ಕುಳಿತಿದ್ದ ವೀರರ ಕಾಲುಗಳಿಗೆ ಮೊದಲು ಏಟು ಹೊಡೆದು ಆ ಕಾಲನ್ನು ಕತ್ತರಿಸಿದೊಡನೆಯೇ ತಲೆಗೆ ಏಟು ಹೊಡೆದು ಬೀಳಿಸುತ್ತಿದ್ದರು. ಮತ್ತೆ ಕೆಲವರು ರಥವಮೇಲೆ ಕುಳಿತಿದ್ದ ರಥಿಕರ ಮೇಲೆಯೇ ಎರಗಿ ಅವರನ್ನು ಹೊಡೆದು ಆ ಬಳಿಕ ರಥಗಳನ್ನು ನುಚ್ಚುನುರಿಮಾಡುತ್ತಿದ್ದರು.

೨೫. ಮತ್ತೆ ಕೆಲವರು ಯುದ್ಧಕುಶಲರಾದ ವೀರರು, ಸಾರಥಿಗಳನ್ನು ಸದೆಬಡಿದು ಗಜಗಳ ಸೊಂಡಿಲುಗಳನ್ನು ಕತ್ತರಿಸಿಬಿಡುತ್ತಿದ್ದರು. ಇನ್ನು ಕೆಲವರು ಸಿಪಾಯಿಗಳನ್ನು ಹೊಡೆದು ಉರುಳಿಸುತ್ತಿದ್ದರು.

೨೬. ಇನ್ನು ಕೆಲವರು ಆನೆಗಳ ಕೊಂಬುಗಳ ಮೇಲೆ ಹತ್ತಿ ಕುಳಿತು, ಆನೆಯ ಮೇಲೆ ಕುಳಿತಿದ್ದ ಸಾದಿ (ಮಾವುತರು) ಗಳ ತಲೆಗಳನ್ನು ಕತ್ತರಿಸಿ ಕೆಡವುತ್ತಿದ್ದರು.

೨೭. ಆನೆಗಳ ಮೇಲೆ ಕುಳಿತಿದ್ದ ಸಾದಿಗಳು ಕೆಳಗಿಳಿದು ತಮ್ಮ ಕೈಯಲ್ಲಿದ್ದ ಕತ್ತಿಯಿಂದ ಪದಾತಿಗಳ ತಲೆಗಳನ್ನು ತರಿಯುತ್ತಿದ್ದರು. ಕೆಲವರು ಆನೆಯ ಮೇಲೆ ಕುಳಿತಿದ್ದ ಹಾಗೆಯೇ ಧನುಸ್ಸಿಗೆ ಹೆದೆಯನ್ನೇರಿಸಿ ಐದೈದು ಏಳೇಳು ಬಾಣಗಳನ್ನು ಒಟ್ಟೊಟ್ಟಿಗೇ ಬಿಲ್ಲಿಗೆ ತೊಡಿಸಿ ವೈರಿಗಳ ಮೇಲೆ ಹಾರಿಸುತ್ತಿದ್ದರು.

೨೮. ರಣಕೋವಿದರಾದ ಹಲವು ವೀರರು ಶ್ರೀಮನ್ಮಹಾವಿಷ್ಣುವಿನ ಶಾರ್ಙ ಧನುವಿನಂತೆ ಶ್ರೇಷ್ಠವಾದ ತಮ್ಮ ತಮ್ಮ ಧನುಸ್ಸುಗಳಲ್ಲಿ ಆಕರ್ಣಾಂತವಾಗಿ ಬಾಣ

ಪದಾತೀನ್ಸಮರೇ ಚಕ್ರುರ್ವಾಯುವೇಗೈಸ್ತುರಂಗಮೈಃ ।
ಸಾದಿನಶ್ಚ ತಥೈವಾನ್ಯೇ ಸಾದಿಭಿಃ ಸಹ ಸಂಗತಾಃ ॥ ೨೯ ॥

ದರ್ಶಯಂತೋ ರಣೇ ಭಿಕ್ಷಾಂ ಚಕ್ರುರ್ಯುದ್ಧಮನೇಕಧಾ ।
ಕೇಚಿತ್ಪ್ರಾಶಾಗ್ರನಿರ್ಭಿನ್ನಹತಸಾರಥಿನಾಯಕಾಃ ॥ ೩೦ ॥

ವಿನೇದುರುಚ್ಚೈಃ ಸಹಸಾ ಸಿಂಹನಾದರವಾನ್ನರಾಃ ।
ಕುಂಜರೈರಾಕುಲೀಕೃತ್ಯ ಹಯಯಾನವಿಶಾರದಾಃ ॥ ೩೧ ॥

ವಿಪುಚ್ಛಹಸ್ತಾನ್ಸಮರೇ ಚಕ್ರುಃ ಸಾದಿಗಣಾನ್ರಣೇ ।
ನಿಹತಂ ಚ ಶರವ್ರಾತೈಃ ಪಾದಾತಂ ಬಹುಧಾ ರಣೇ ॥ ೩೨ ॥

---

ಗಳನ್ನು ಸೆಳೆದು ಗುಂಪುಗುಂಪಾದ ವೀರರ ಮೇಲೆ ಆ ಬಾಣಪರಂಪರೆಗಳನ್ನು ಹಾರಿಸಿ ಶತ್ರುಗಳ ತಲೆಗಳನ್ನು ಉರುಳಿಸುತ್ತಿದ್ದರು.

೨೯. ಕುದುರೆಯ ಮೇಲೆ ಕುಳಿತು ಯುದ್ಧಮಾಡುವುದನ್ನು ಕಲಿತು ಕೊಂಡಿದ್ದ ಕುದುರೆಯ ಸವಾರರು ತಮ್ಮ ತಮ್ಮ ಕುದುರೆಗಳನ್ನು ವೇಗವಾಗಿ ಕಾಲಾಳು ಗಳ ಮೇಲೆ ಬಿಟ್ಟು ಅವರನ್ನು ಧೂಳೀಪಟಮಾಡಿಬಿಡುತ್ತಿದ್ದರು. ಇನ್ನು ಕೆಲವರು ಕೈಕೈಮಿಲಾಯಿಸಿ ಕುಸ್ತಿಮಾಡಿ ಸಾಯುತ್ತಿದ್ದರು.

೩೦. ಕೆಲವರು ಯುದ್ಧಭಿಕ್ಷೆಯನ್ನಪೇಕ್ಷಿಸುವವರಾಗಿ ಅನೇಕ ವಿಧವಾದ ಯುದ್ಧಗಳನ್ನು ಮಾಡುತ್ತಿದ್ದರು. ಕೆಲವರು ಹಗ್ಗವನ್ನು ಬೀಸಿ ಅದರ ಮೇಲೆ ಚಳಕ ದಿಂದ ಕುಳಿತು, ಅದರ ಸಹಾಯದಿಂದ ರಥಿಕರ ಮೇಲೆ ನುಗ್ಗಿ ಆ ರಥಿಕನನ್ನೂ, ರಥ ನಾಯಕನನ್ನೂ ಹತಮಾಡಿಬಿಡುತ್ತಿದ್ದರು.

೩೧. ಹಲವು ವೀರರು ತಾವು ಮಾಡುತ್ತಿದ್ದ ಸಿಂಹನಾದದಿಂದ ಯುದ್ಧರಂಗ ವನ್ನೂ ವನಾಂತರಾಳವನ್ನೂ ಭೇದಿಸುತ್ತಾ, ಆ ಸಿಂಹನಾದದಿಂದ ಆನೆಗಳನ್ನು ದಿಗಿಲು ಪಡಿಸುತ್ತಾ ಕುದುರೆಗಳ ಮೇಲೆ ಕುಳಿತು ಯುದ್ಧಮಾಡುತ್ತಲಿದ್ದರು.

೩೨. ಕೆಲವು ಸಮರವೀರರು ಆನೆಗಳ ಬಾಲವನ್ನೂ, ಸೊಂಡಿಲನ್ನೂ ಕತ್ತರಿಸಿ ಅದರ ಮೇಲೆ ಕುಳಿತಿದ್ದ ಮಾವುತರನ್ನು ಬಾಣಗಳ ಪ್ರಹಾರದಿಂದ ಉರುಳಿಸುತ್ತಾ ಬಹು ವಿಧವಾಗಿ ಯುದ್ಧವನ್ನು ಮಾಡುತ್ತಲಿದ್ದರು.

**ರಥಿಭಿರ್ಭ್ರಾತಿ ಭೂಪಾಲ ಕಮಲೋತ್ಕರಸನ್ನಿಭಂ ।**
**ತುರಗಾಸ್ತುರಗಾರೋಹಾ ರಥಿಭಿರ್ವಿನಿಪಾತಿತಾಃ ॥ ೩೩ ॥**

**ಆವವ್ರುರ್ವಸುಧಾಂ ತತ್ರ ಶತಶೋಽಥ ಸಹಸ್ರಶಃ ।**
**ರಥಿನಾಂ ರಥಿಭಿಃ ಸಾರ್ಧಂ ಯುದ್ಧಮಾಸೀತ್ಸುದಾರುಣಂ ॥ ೩೪ ॥**

**ಬಾಣತೋಮರಪಾತೈಶ್ಚ ಗದಾಕಂಪನಮುದ್ಗರೈಃ ।**
**ರಥಿನಾಂ ಚ ಮಹದ್ಯುದ್ಧಮಾಸೀತ್ಕುಂಜರಧೂರ್ಗತೈಃ ॥ ೩೫ ॥**

**ಪ್ರಾಸಬಾಣಮಹಾಪಾತದುರ್ನಿರೀಕ್ಷ್ಯಂ ಸಮಂತತಃ ।**
**ನಿಹತಂ ಬಹು ಪಾದಾತಂ ಕುಂಜರೈಸ್ತತ್ರ ದೃಶ್ಯತೇ ॥ ೩೬ ॥**

---

೩೩. ಇನ್ನು ತುರಗಾರೋಹಿಗಳೂ ರಥಾರೋಹಿಗಳೂ ಮಾಡುವ ಯುದ್ಧ ಕ್ರಮವನ್ನು ವಿವರಿಸಲಾಗುವುದು.—ತಾವರೇಕಮಲದಂತೆ ಆಕಾರವುಳ್ಳ ರಥಗಳ ಮೇಲೆ ಕುಳಿತು ರಥಿಕರು ಅಶ್ವಾರೋಹಿಗಳ ಮೇಲೆ ತಮ್ಮ ರಥಗಳನ್ನು ವೇಗದಿಂದೋಡಿಸಿ ಆ ಕುದುರೆ ಸವಾರರನ್ನೂ ಕುದುರೆಯನ್ನೂ ಒಟ್ಟಿಗೆ ಸಂಹಾರಮಾಡುತ್ತಿದ್ದರು.

೩೪. ಈ ಮಧ್ಯದಲ್ಲಿ ರಥಿಕರು ನೂರಾರು ಸಾವಿರಾರು ಸಂಖ್ಯಾಕರಾಗಿ ಸೇರಿ ತಮ್ಮ ತಮ್ಮ ರಥಗಳನ್ನು ಆ ಸಮರಾಂಗಣದ ಸುತ್ತಲೂ ವೇಗವಾಗಿ ಓಡಿಸುತ್ತಾ ರಥಗಳನ್ನು ರಥಗಳಿಂದಲೇ ಪುಡಿಪುಡಿಮಾಡುತ್ತಿದ್ದರು.

೩೫. ಎತ್ತನೋಡಿದರತ್ತ ಪ್ರಾಸಗಳೂ ಬಾಣಗಳೂ ಮಳೆಯಂತೆ ಸುರಿಯುತ್ತಿದ್ದವಾರಣರಂಗದ ಸರ್ವತೋಮುಖದೋಳ್ ಕೇಳೈ, ವೀರವಜ್ರನರಪತಿ! ಮತ್ತು ಆನೆಗಳ ಪದಗಳ ತುಳಿತದಿಂದ ಪದಾತಿಗಳನೇಕರು ಮಡಿದುಬಿದ್ದರೈ! ಎಷ್ಟೆಂದು ವರ್ಣಿಸಲ್ಕೆ! ಆ ಮಹಾಭೀಕರ ಸಮರವಾರ್ತಾತರಂಗವಂ, ರಾಜ್ವ?

೩೬. ಬಾಣಗಳೂ, ತೋಮರಗಳೂ, ಗದೆಗಳೂ, ಮುದ್ಗರಗಳೂ ಆನೆಗಳ ಮೇಲೆ ಕುಳಿತಿದ್ದ ಮಾವುತರಿಂದಲೂ, ರಥದ ಮೇಲೆ ಕುಳಿತಿದ್ದ ರಥಿಕರಿಂದಲೂ ಬಿಡಲ್ಪಡುತ್ತಾ, ಆ ಗಂಧರ್ವಮಾನವ ಸಮರವೇಗವು ದುರ್ನಿರೀಕ್ಷ್ಯವಾಗಿ ಪರಿಣಮಿಸಿತು.

ರಣೇ ನೃಪತಿಶಾರ್ದೂಲ ವಿನಿಕೀರ್ಣಂ ಸಹಸ್ರಧಾ ।
ಸಾದಿನಾಂ ಸತುರಂಗಾಣಾಂ ಸುಮಹತ್ಕದನಂ ಕೃತಂ ॥ ೩೭ ॥

ಮಹಾಮಾತ್ರಪ್ರಮುದಿತೈಃ ಕುಂಜರೈರ್ಬಲದರ್ಪಿತೈಃ ।
ಆಕ್ರಮ್ಯ ರಥವೃಂದಾನಿ ಚೂರ್ಣಿತಾನಿ ತುರಂಗಮೈಃ ॥ ೩೮ ॥

ವ್ಯದೃಶ್ಯಂತ ಮಹಾರಾಜ ವಿಪ್ರಕೀರ್ಣಾನಿ ಭೂತಲೇ ।
ಏವಂ ಮಧ್ಯಾಹ್ನಸಮಯೇ ತೀಕ್ಷ್ಣಂ ತಪತಿ ಭಾಸ್ಕರೇ ॥ ೩೯ ॥

ಬಭೂವಾಕುಲಸಂಗ್ರಾಮಂ ಘೋರಂ ರುಧಿರಕರ್ದಮಂ ।
ರಥಾಶ್ವಕುಂಜರೈಃ ಸಾರ್ಧಂ ಪತ್ತಯಶ್ಚ ಸಮಾಗತಾಃ ॥ ೪೦ ॥

---

೩೭. ಎತ್ತೆತ್ತಲೂ ಸುತ್ತಿಕೊಂಡು ಮುತ್ತಿರುವ ಕುದುರೆಯ ಸವಾರರು ತಮ್ಮ ತಮ್ಮ ಇದಿರಾಳುಗಳೊಡನೆ ಮಾಡುತ್ತಿದ್ದ ಯುದ್ಧವೂ ಸಹ ಸ್ವಲ್ಪ ಹೊತ್ತಿಗೊಳಗಾಗಿ ಘೋರಾಕಾರವಂ ತಳೆದುದಾ ರಣರಂಗ ಮಧ್ಯಭೂಮಿಯೊಳ್.

೩೮. ಬಹು ಹರ್ಷಚಿತ್ತರಾದ ಸೇನಾಪ್ರಧಾನರುಗಳಿಂದ ಮುಂದೆ ನೂಕಲ್ಪಟ್ಟ ಆನೆಗಳು ರಥಗಳ ಮೇಲೆ ನುಗ್ಗಿ, ಕುದುರೆಗಳೂ ಸಹ ಅಂತೆಯೇ ಬೇರೆ ಬೇರೆ ರಥಗಳ ಮೇಲೆ ತಿರುಗಿಬಿದ್ದು ಒಂದೇ ನಿಮಿಷದೊಳಗಾಗಿ ರಥಗಳನೇಕಗಳು ಪುಡಿಪುಡಿಯಾದ ವಿಚಿತ್ರವನ್ನೇನೆಂದುಸುರಲೈ!

೩೯. ಸೂರ್ಯನು ನಡುನೆತ್ತಿಯ ಮೇಲೆ ಬರುತ್ತಿರುವ, ಆ ಮಟಮಟ ಮಧ್ಯಾಹ್ನದ ಹೊತ್ತಿಗೆ ಆ ರಣರಂಗದಲ್ಲೇಷ್ಟೋ ಮಂದಿ ವೀರರು ಮಡಿದರು. ಎಷ್ಟೋ ಲೆಕ್ಕವಿಲ್ಲದಷ್ಟು ಆನೆಗಳೂ, ಕುದುರೆಗಳೂ, ತೇರುಗಳೂ ತೆರವಿಲ್ಲದೆ ಉರುಳುರುಳಿ ನೆಲಕ್ಕೆ ಬಿದ್ದೊರಗಿದುವು.

೪೦. ನಿಬಿಡವಾಗಿ ಕೂಡಿದ್ದ ಸಂಗ್ರಾಮಾಂಗಣದಲ್ಲಿ ರಕ್ತದಿಂದ ಕೆಸರಾಗಿದ್ದ ವಿಸ್ತಾರವಾದ ಯುದ್ಧದ ಬಯಲಲ್ಲಿ ತೇರುಗಳೂ, ಕುದುರೆಗಳೂ, ಆನೆಗಳೂ, ಕಾಲಾಳುಗಳೂ ಸಹ ಒಂದರಗಳಿಗೆಯೊಳಗಾಗಿ ಮತ್ತೆ ಬಂದು ಕೂಡಿದುವು.

**ಕುಂಜರಾಶ್ಚ ಮಹಾಕಾಯಾ ಪತ್ತ್ಯಶ್ಚರಥಿನಸ್ತಥಾ ।**
**ಪತ್ತಿಭಿಶ್ಚ ಪದಾತೀನಾಂ ಸಾದಿನಾಂ ಸಹ ಸಾದಿಭಿಃ ॥ ೪೧ ॥**

**ರಥಿನಾಂ ರಥಿಭಿರ್ಯುದ್ಧಂ ಕುಂಜರಾಣಾಂ ಚ ಕುಂಜರೈಃ ।**
**ಬಭೂವ ರಾಜಂಸ್ತುಮುಲೇ ಸಂಗ್ರಾಮೇ ಶೋಣಿತೋದಕೇ ॥ ೪೨ ॥**

**ಶೂರಾಣಾಂ ರಣಲುಬ್ಧಾನಾಮಮರ್ಷಾಕ್ರಾಂತಚೇತಸಾಂ ।**
**ಪತ್ತಿನಾ ನಿಹತಃ ಸಾದೀ ಗಜೇನ ನಿಹತೋ ನರಃ ॥ ೪೩ ॥**

**ರಥಿನಾ ನಿಹತೋ ನಾಗಃ ಕ್ವಚಿದಾಸೀದಘಾತಿತಃ ।**
**ಹತಾಃ ಪದಾತಿಭಿಶ್ಚಾನ್ಯೇ ವ್ಯದೃಶ್ಯಂತ ರಣಾಜಿರೇ ॥ ೪೪ ॥**

**ಪದಾತಿರಥನಾಗಾಶ್ಚ ಸಾದಿಭಿರ್ವಿನಿಪಾತಿತಾಃ ।**
**ರಥನಾಗಹಯಾ ಯುದ್ಧೇ ನಿಹತಾಶ್ಚ ಪದಾತಿಭಿಃ ॥ ೪೫ ॥**

---

೪೧. ದೊಡ್ಡ ದೊಡ್ಡ ದೇಹಗಳುಳ್ಳ ಆನೆಗಳೂ, ವೇಗವಾದ ಕುದುರೆಗಳೂ, ಮತ್ತನೇಕ ವಿಧ ರಥಗಳೂ ಒಂದಕ್ಕೊಂದಕ್ಕೆ ಯುದ್ಧಮಾಡತೊಡಗಿದವು. ಸೈನಿಕರು ಸೈನಿಕರೊಡನೆ ಕಾದಾಡತೊಡಗಿದರು.

೪೨. ರಕ್ತದ ಕೋಡಿ ಕಾಲುವೆಯಾಗಿ ಹರಿಯುತ್ತಿರುವಲ್ಲಿ ಆ ರಕ್ತದ ಕೋಡಿಯ ಮೇಲೆಯೇ ನಿಂತು ರಥಿಕರು ರಥಿಕರೊಡನೆಯೂ, ಆನೆಗಳು ಆನೆಗಳೊಡನೆಯೂ, ಕುದುರೆಗಳು ಕುದುರೆಗಳೊಡನೆಯೂ, ಕಾಲಾಳುಗಳು ಕಾಲಾಳುಗಳೊಡನೆಯೂ ಕೂಡಿ ಯುದ್ಧಮಾಡಿದರು.

೪೩. ರಣಲೋಭಿಗಳಾದ ಶೂರರು ಬಹು ಕೋಪದಿಂದಾಕ್ರಾಂತರಾಗಿ ಆನೆಗಳ ಮೇಲೆ ಬಿದ್ದು ಅವುಗಳನ್ನು ಕೊಲ್ಲುತ್ತಿದ್ದರು. ಮತ್ತು ಅದರ ಮೇಲೆ ಕುಳಿತಿದ್ದ ಮಾವುತನನ್ನೂ ಸಹ ಕೊಂದು ಕೆಡವುತ್ತಿದ್ದರು. ಇದನ್ನು ನೋಡಿ ಕೋಪಗೊಂಡ ಆನೆಗಳು ಅನೇಕರನ್ನು ಸೀಳಿಬಿಟ್ಟವು.

೪೪. ಒಬ್ಬ ರಥಿಕನು ಒಂದಾನೆಯನ್ನು ಕೊಂದುಬಿಟ್ಟನು. ಕೆಲವು ಕಡೆಯಲ್ಲಿ ಆನೆಗಳಿಗೆ ಏಟೇ ಬೀಳಲಿಲ್ಲ. ಪದಾತಿಗಳಿಂದ ಅನೇಕರು ಸಂಹೃತರಾದರು. ಇಂತಹ ಅನೇಕ ನೋಟಗಳನ್ನು ಅಲ್ಲಿ ನೋಟಕರು ನೋಡಬಹುದಾಗಿತ್ತು.

೪೫. ಪದಾತಿಗಳೂ, ರಥಗಳೂ, ಆನೆಗಳೂ, ಆನೆಯ ಮಾವುತರಿಂದೇಟು ತಿಂದು ಕೆಳಕ್ಕುರುಳುತ್ತಿದ್ದವು. ರಥಗಳೂ, ಆನೆಗಳೂ, ಕುದುರೆಗಳೂ ಸಹ ಆ ರಣರಂಗದಲ್ಲಿ ಪದಾತಿಗಳ ಏಟಿನಿಂದ ನೆಲಕ್ಕುರುಳಿದುವು.

ನರೇಣ ಚ ಹತೋ ಹಸ್ತೀ ಶೂರೇಣ ಕೃತಬುದ್ಧಿನಾ ।
ಸಾದಿನಾ ಚ ಹತೋ ಹಸ್ತೀ ಸಾದೀ ಚೈವ ಪದಾತಿನಾ ॥ ೪೬ ॥

ರಥಿನಾ ಚ ಹತಃ ಪತ್ತಿಃ ಪತ್ತಿನಾ ಚ ಹತೋ ರಥೀ ।
ರಥಿನಾ ನಿಹತಃ ಸಾದೀ ಸಂಗ್ರಾಮೇ ಲೋಮಹರ್ಷಣೇ ॥ ೪೭ ॥

ರೇಣುನಾ ಚ ದಿಶೋ ವ್ಯಾಪ್ತಾಸ್ತುಮುಲೇ ಭೃಶಸಂಕುಲೇ ।
ವ್ಯರಾಜಂತ ಮಹಾರಾಜ ಸಮರೇ ಗತಜೀವಿತಾಃ ॥ ೪೮ ॥

ಪತತಾಂ ಬಾಣಜಾಲಾನಾಂ ಧನುಷಾಂ ಚೈವ ಕೂಜತಾಂ ।
ಮುದ್ಗರಾಣಾಂ ಭುಶುಂಡೀನಾಂ ತೋಮರಾಣಾಂ ತಥೈವ ಚ ॥ ೪೯ ॥

ಪಟ್ಟಿಶಾನಾಂ ಚ ಯಷ್ಟೀನಾಂ ಕ್ಷೇಪಣಾನಾಂ ಚ ಯಾದವ ।
ಅಯೋಗುಡಾನಾಂ ಪ್ರಾಸಾನಾಂ ಚರ್ಮಣಾಮಥ ವರ್ಮಣಾಂ ॥ ೫೦ ॥

---

೪೬. ಮಹಾಬುದ್ಧಿಶಾಲಿಯಾದ ಓರ್ವಶೂರಮಾನವನಿಂದ ಒಂದು ಆನೆಯು ಏಟುತಿಂದು ನೆಲಕ್ಕೊರಗಿತು. ಎಮರಾಳಯಾದ ಮಾವುತನಿಂದ ಒಂದು ಆನೆಯು ಏಟುತಿಂದು ಬೀಳಲು, ಆ ಮಾವುತನನ್ನೋರ್ವಪದಾತಿಯು ಕೂಡಲೆ ಸಂಹರಿಸಿಬಿಟ್ಟನು.

೪೭. ಒಬ್ಬ ರಥಿಕನಿಂದ ಒಬ್ಬ ಪದಾತಿಯೂ, ಮತ್ತೊಬ್ಬ ಪದಾತಿಯಿಂದ ಆ ರಥಿಕನೂ, ಮತ್ತೊಬ್ಬ ರಥಿಕನಿಂದ ಆ ಪದಾತಿಯೂ ಸಹ ಅನುಕ್ರಮವಾಗಿ ಆ ಮಹಾಸಮರದಲ್ಲೇ ನಾಮಾವಶೇಷರಾದರು.

೪೮. ಪುನಃ ಧೂಳಿನಿಂದ ದಿಕ್ಕುಗಳು ತುಂಬಿಹೋದುವು. ಆಗ ಆರಂಭವಾದ ತುಮುಲಯುದ್ಧದಿಂದ ಅನೇಕರು ಪ್ರಾಣಗಳನ್ನು ಕಳೆದುಕೊಂಡರು.

೪೯. ಸೊಯ್ಯೆಂದು ಬಾಣಗಳು ಧನುಸ್ಸಿನಿಂದ ಹೊರಡುತ್ತಿದ್ದುವು. ಧನುಸ್ಸುಗಳು ಟಂಕಾರಧ್ವನಿಯನ್ನುಂಟುಮಾಡುತ್ತಿದ್ದುವು. ಅದೇ ಮೇರೆ ಮುದ್ಗರ, ಭುಶುಂಡಿ, ತೋಮರವೇ ಮುಂತಾದ ಆಯುಧಗಳು ವಿವಿಧಧ್ವನಿಗಳನ್ನುಂಟುಮಾಡುತ್ತಿದ್ದುವು.

೫೦-೫೧. ಮೇಲ್ಕಂಡ ಆಯುಧಧ್ವನಿಗಳಲ್ಲದೆ ಇನ್ನೂ ಬೇರೆಬೇರೆ ವಿಧವಾದ ಪಟ್ಟಿಶಾದ್ಯನೇಕವಾದ ಆಯುಧಗಳನ್ನು ಪ್ರಯೋಗಿಸುವುದರಿಂದುಂಟಾಗುವ

ಅನಿಶಂ ಶ್ರೂಯತೇ ಶಬ್ದೋ ಘೋರಸ್ತಸ್ಮಿನ್ರಣಾಂಗಣೇ ।
ಹಯೈಶ್ಚ ವಿಗತಾರೋಹೈರ್ಧಾವಮಾನೈರಿತಸ್ತತಃ ॥ ೫೧ ॥

ಭಗ್ನೇಷಾಕೂಬರಾಕ್ಷೈಶ್ಚ ರಥೈರ್ನಿರ್ಗತನಾಯಕೈಃ ।
ಭಿನ್ನದಂತೈಶ್ಚ ಮಾತಂಗೈರ್ಭಿನ್ನಕುಂಭಘಟಾನನೈಃ ॥ ೫೨ ॥

ಲತಾವೇಷ್ಟಿತವೃಕ್ಷಾಭೈಃ ಶೋಭಾಂ ಯಾತಿ ರಣಾಜಿರಂ ।
ಕುಂಜರೈರ್ನಿರ್ಗತಾರೋಹೈಸ್ತ್ರಾಸಿತೈರ್ದೃಢಧನ್ವಿಭಿಃ ॥ ೫೩ ॥

ಮರ್ದ್ಯಮಾನಾನಿ ಸೈನ್ಯಾನಿ ಶತಶೋಽಥ ಸಹಸ್ರಶಃ ।
ಭಿನ್ನಾನ್ ಸುದಂತೈಃ ಪುರುಷಾನ್ ದಂತಾಸಕ್ತಾಂಸ್ತಥಾ ಗಜಾಃ ॥ ೫೪ ॥

---

ಧ್ವನಿಯೂ, ಹಾರೆ, ಒನಿಕೆ, ಗುರಾಣಿಗಳ ಮತ್ತು ಅವುಗಳ ಹೊಡೆತಗಳಿಂದ ಹೊರಡುವ ಧ್ವನಿಯೂ ಆ ಘೋರ ಸಮರಾಂಗಣ ಪ್ರದೇಶದಿಂದ ಎಲ್ಲೆಲ್ಲಿಯೂ ಕೇಳಿ ಬರುತ್ತಿದ್ದಿತು. ಕುದುರೆಗಳ ಮೇಲಿನಿಂದ ಆನೆಗಳ ಮೇಲಿನಿಂದ ಕೆಳಗೆ ಬಿದ್ದು ಅಲ್ಲಿಂದಿಲ್ಲಿಗೆ ಓಡಾಡುತ್ತಿರುವ ಜನರ ಅವಸ್ಥೆಯನ್ನು ನಾವು ಅಲ್ಲಿ ನೋಡಬಹುದಾಗಿದ್ದಿತು.

೫೨. ರಥಗಳ ಚಕ್ರಗಳು ಮುರಿದು ಅನೇಕ ರಥಗಳು ಕೆಳಕ್ಕುರುಳಿಬಿದ್ದುವು. ರಥಿಕರಿಲ್ಲದ ಆ ರಥಗಳು ಅನಾಯಕವಾಗಿದ್ದುವು. ಅನೇಕ ಆನೆಗಳು ಕೊಂಬು ಮುರಿದುಕೊಂಡು ಬಿದ್ದಿದ್ದುವು. ಕೆಲವು ಆನೆಗಳ ಕುಂಭಸ್ಥಳವೇ ಕತ್ತರಿಸಿ ಹೋಗಿತ್ತು.

೫೩. ಮಾವುತರಿಲ್ಲದ ಆನೆಗಳು ಹೆದರಿ ಮೈಗೆಲ್ಲಾ ಬಿಲ್ಲಿನ ಹಗ್ಗಗಳನ್ನು ಸುತ್ತಿಕೊಂಡು ಆ ರಣರಂಗದಲ್ಲಿ ಬಿದ್ದಿದ್ದುದನ್ನು ನೋಡಿದರೆ, ಬಳ್ಳಿಗಳಿಂದ ಸುತ್ತುವರೆಯಲ್ಪಟ್ಟ ಕಾಡುಮರಗಳಂತೆ ಕಾಣಬರುತ್ತಿದ್ದುವು.

೫೪. ಆನೆಗಳು ಸೈನ್ಯದೊಳಹೊಕ್ಕು ತಮ್ಮ ಕೊಂಬುಗಳಿಂದ ತಿವಿದು ತಮ್ಮ ಕಾಲುಗಳಿಂದ ತುಳಿದು ಸಾಯಿಸುತ್ತಿದ್ದ ಸೈನಿಕವೃಂದವನ್ನೂ, ಅಂತಹ ಆನೆಗಳನ್ನೇ ಶತ್ರುಪಕ್ಷದ ಗಜಗಳು ತಮ್ಮ ಕೊಂಬುಗಳಿಂದ ತಿವಿಯುತ್ತಿದ್ದುದನ್ನೂ ನಾವು ಅಲ್ಲಿ ನೂರಾರು ಸಾವಿರಾರು ಗಟ್ಟಲೆಯಾಗಿ ನೋಡಬಹುದಾಗಿತ್ತು.

**ವಹಮಾನಾ ವ್ಯರಾಜಂತ ಕರ್ಣವ್ಯಜನವೀಜಿತಾಃ ।**
**ಲಗ್ನಾಂತ್ರಜಾಲೈರ್ದಶನೈರ್ದಂತಿನಃ ಪರ್ವತೋಪಮಾಃ  ॥ ೫೫ ॥**

**ಲತಾವೇಷ್ಟಿತವೃಕ್ಷಾಭೈಃ ಶೋಭಯಂತಿ ರಣಾಜಿರಂ ।**
**ತಸ್ಮಿಂಸ್ತಥಾವಿಧೇ ರೌದ್ರೇ ಸಂಗ್ರಾಮೇ ಘೋರದರ್ಶನೇ  ॥ ೫೬ ॥**

**ನರಾಶ್ವನಾಗರುಧಿರೈರ್ನಿಸಸ್ರುಃ ಶೋಣಿತಾಪಗಾಃ ।**
**ಖಡ್ಗಮೀನಾ ಮಹಾಛತ್ರರಾಜಹಂಸವಿಭೂಷಿತಾಃ**
**ಯೋಧಮಸ್ತಕಪಾಷಾಣಾಃ ಕೇಶಶೈವಾಲಭೂಷಣಾಃ  ॥ ೫೭ ॥**

**ಮಹಾಫೇನೌಘವತ್ಯಶ್ಚ ಭೀತಾನಾಂ ಭಯವರ್ಧನಾಃ ।**
**ತಾಸ್ತರಂತಿ ತದಾ ಯೋಧಾಃ ಶೂರಾ ಜಯಧನೈಷಿಣಃ  ॥ ೫೮ ॥**

---

೫೫. ಕೊಂಬು ಮುರಿದುಕೊಂಡು ಮಾಂಸಖಂಡಗಳನ್ನು ಕಳೆದುಕೊಂಡು ಬೆಟ್ಟದಂತೆ ಕೆಳಕ್ಕೆ ಬಿದ್ದ ಆನೆಗಳು ತಮ್ಮ ಕಿವಿಗಳನ್ನು ಬೀಸಣಿಗೆಯಂತೆ ಬೀಸುತ್ತಾ ಅಲ್ಲಿ ಕಾಣಿಸುತ್ತಿದ್ದುವು.

೫೬. ಹಿಂದೊಂದು ಬಾರಿ ಹೇಳಿದಂತೆ ಬಳ್ಳಿಗಳಿಂದ ಸುತ್ತಲ್ಪಟ್ಟ ಮರಗಳಂತೆ ಬಿದ್ದ ಆನೆಗಳ ಸಮೂಹದಿಂದ ಸಮರಭೂಮಿಯು ತುಂಬಿಹೋಗಿತ್ತು. ಆರೀತಿ ಕಾಣುತ್ತಿದ್ದ ಆ ಮಹಾರಣರಂಗದಲ್ಲಿ ಮನುಷ್ಯರ, ಕುದುರೆಗಳ, ಆನೆಗಳ ಮೈಯಿಂದ ಹೊರಟ ರಕ್ತವು ಪ್ರವಾಹವಾಗಿ ಹರಿಯುತ್ತಾ ರಕ್ತನದಿಗಳಂತೆ ಕಾಣುತ್ತಿದ್ದುವು.

೫೭. ಆ ರಕ್ತದ ಹೊಳೆಗಳಲ್ಲಿ ಬಿದ್ದು ತೇಲಿಹೋಗುತ್ತಿರುವ ಕತ್ತಿಗಳೇ ಮೀನುಗಳು, ಛತ್ರಿಗಳೇ ಹಂಸಪಕ್ಷಿಗಳು. ಯೋಧರ ತಲೆಗಳೇ ಕಲ್ಲುರಾಶಿಗಳು. ಕೂದಲುಗಳೇ ಪಾಶೆಗಳು.

೫೮. ಆ ರಕ್ತದ ಹೊಳೆಗಳಲ್ಲಿ ಉಕ್ಕಿಬರುತ್ತಿರುವ ನೊರೆಗಳನ್ನು ನೋಡಿದರೆ ಅಂಜುಪುರುಕರಂತೂ ಇನ್ನೂ ಹೆಚ್ಚಾಗಿ ಅಂಜಿಕೊಂಡು ಸತ್ತೇಹೋಗುವ ಹಾಗಿರುತ್ತವೆ. ಆ ರಕ್ತದ ಹೊಳೆಗಳನ್ನು ಜಯಧನದಲ್ಲಾಸಕ್ತರಾದ ಸೈನಿಕರು ದಾಟಿ ಹೋಗುತ್ತಿದ್ದರು.

ರಾಜನ್ವಾಹನನೌಭಿಸ್ತೇ ವ್ಯವಸಾಯಪರಸ್ಪರಾಃ ।
ಭಿನ್ನಾನಿ ಸ್ವಾನಿ ಗಾತ್ರಾಣಿ ನ ಜಾನಂತಿ ರಣೇ ಪರೈಃ ॥ ೫೯ ॥

ತತ್ರ ಶೂರಾ ಮಹಾಭಾಗಾಸ್ತ್ವಮರ್ಷಾಕ್ರಾಂತ ಚೇತಸಃ ।
ಆಯುಧಕ್ಷಯಮಾಸಾದ್ಯ ಮುಷ್ಟಿಯುದ್ಧಾನಿ ಚಕ್ರಿರೇ ॥ ೬೦ ॥

ಕೇಶಾಕೇಶೀ ತಥಾ ಕೇಚಿದ್ದಂತಾದಂತೀ ನಖಾನಖೀ ।
ಚಕ್ರುರ್ಯುದ್ಧಂ ಮಹಾರಾಜ ಬ್ರಹ್ಮಲೋಕಜಿಗೀಷವಃ ॥ ೬೧ ॥

ಕ್ರಂದಂತೋಽನ್ಯೇ ಪಿತೄನ್ಪುತ್ರಾನ್ಭ್ರಾತೄನನ್ಯೇ ಪಿತಾಮಹಾನ್ ।
ಮಾತುಲಾನ್ಭಾಗಿನೇಯಾಂಶ್ಚ ಸ್ಯಾಲಾನ್ಸಬಂಧಿನಸ್ತಥಾ ॥ ೬೨ ॥

---

೫೯. ಎಲೈ ವಜ್ರರಾಜನೇ! ಕೇಳು. ಯುದ್ಧವ್ಯವಸಾಯದಲ್ಲಿ ಪರಸ್ಪರವಾಗಿ ಸ್ಪರ್ಧಿಸುತ್ತಿದ್ದ ಆ ಯೋಧರು ತಮ್ಮ ವಾಹನಗಳೆಂಬ ಹಡಗುಗಳಿಂದ ಆ ರಕ್ತದ ನದಿಯನ್ನು ದಾಟುತ್ತಿರುವಾಗ, ಶತ್ರುಗಳ ಏಟಿನಿಂದ ತಮ್ಮ ದೇಹವು ಕ್ಷತವಿಕ್ಷತವಾಗಿ ಗಾಯಗೊಂಡುದನ್ನು ಅರಿಯಲೇ ಇಲ್ಲ.

೬೦. ಮಹಾಕೋಪೋದ್ದೀಪಿತರಾದ ವೀರಸೈನಿಕರು ತಮ್ಮ ತಮ್ಮಲ್ಲಿದ್ದ ಆಯುಧಗಳೆಲ್ಲವೂ ಮುಗಿದುಹೋದ ಬಳಿಕ ಯುದ್ಧಸಾಮಗ್ರಿಗಳು ದೊರೆಯದೇ ಇರಲು ಮುಷ್ಟಾಮುಷ್ಟಿಗೆ (ಯುದ್ಧಕ್ಕೆ) ಆರಂಭಮಾಡಿದರು.

೬೧. ಮುಷ್ಟಿಯುದ್ಧಕ್ಕಾರಂಭವಾದೊಡನೆಯೇ ಆ ಯುದ್ಧವು ತೀವ್ರಭರದಿಂದ ಸಾಗಿ ಕೇಶಾಕೇಶಿ (ಜುಟ್ಟುಹಿಡಿದು ಸೆಣಸುವುದು), ದಂತಾದಂತಿ (ಹಲ್ಲುಗಳಿಂದ ಕಡಿಯುವುದು), ನಖಾನಖಿ (ಉಗುರುಗಳಿಂದ ಗೀಚುವುದು) ಯುದ್ಧದವರಿವಿಗೂ ಹಬ್ಬಿಹೋಯಿತು. ಬ್ರಹ್ಮಲೋಕ (ವೀರಸ್ವರ್ಗ) ವನ್ನು ಹೊಂದಲಪೇಕ್ಷೆಯುಳ್ಳ ಆ ವೀರರೆಲ್ಲರೂ ಹಿಂಜೆಗೆಯದೆ ಇಂತು ವಿವಿಧಯುದ್ಧಗಳಿಗೆ ಆರಂಭಿಸಿದರು.

೬೨. ಯುದ್ಧದಲ್ಲಿ ಮಡಿದುಬಿದ್ದ ತಂದೆಮಕ್ಕಳನ್ನೂ, ಅಣ್ಣತಮ್ಮಂದಿರನ್ನೂ, ತಾತ, ಸೋದರಮಾವ, ಸೋದರಳಿಯ, ಭಾವಮೈದನೇ ಮುಂತಾದ ಸಂಬಂಧಿಗಳನ್ನು ನೋಡಿ ಹಲವರು ಘಟ್ಟಿಯಾಗಿ ಅಳುವುದಕ್ಕೆ ಮೊದಲುಮಾಡಿದರು.

ಪಿತೄನ್ಪ್ಯಾನಾರ್ಯಕಾನನ್ಯೇ ದೌಹಿತ್ರಾನಪರೇ ತಥಾ ।
ಧಾವಂತ್ಯನ್ಯೇ ಪತಂತ್ಯನ್ಯೇ ಗರ್ಜಂತ್ಯನ್ಯೇ ಜಿಗೀಷಯಾ ॥ ೬೩ ॥

ಸ್ವನಂತ್ಯನ್ಯೇ ಪತಂತ್ಯನ್ಯೇ ಮ್ರಿಯಂತೇ ಚಾಪರೇ ತಥಾ ।
ಶೋಚಂತ್ಯನ್ಯೇ ತಥಾ ಬಂಧೂನ್ಸ್ಯೋಚ್ಯಾಸ್ತ್ವನ್ಯೇ ತು ಬಂಧುಭಿಃ ॥ ೬೪ ॥

ಯಾಚಂತ್ಯನ್ಯೇ ಮಹಾರಾಜ ತೃಷ್ಣಾರ್ತಾಶ್ಚ ತಥಾ ಜಲಂ ।
ವಾಹನೇಷು ಸಮಾರೋಪ್ಯ ನೀಯಂತ್ಯನ್ಯೇ ಚ ಬಂಧುಭಿಃ ॥ ೬೫ ॥

ಶಿಬಿರಾಯ ಮಹಾರಾಜ ಶತಶೋಽಥ ಸಹಸ್ರಶಃ ।
ಅನ್ಯೇ ಸಂಸ್ಪೃತ್ಯ ಚಾತ್ಮಾನಂ ಭೀತಾ ಜಗ್ಮುರುಪಹ್ವರಂ ॥ ೬೬ ॥

---

೬೩. ಇನ್ನು ಕೆಲವರು ಸಮರಾಂಗಣದಲ್ಲಿ ಸತ್ತುಬಿದ್ದ ಚಿಕ್ಕಪ್ಪಂದಿರನ್ನೂ, ತಮ್ಮ ಪೂಜ್ಯಗುರುಗಳನ್ನೂ ಮೊಮ್ಮಕ್ಕಳನ್ನೂ ನೋಡಿ ಅಳುತ್ತಾ ಆ ಹೆಣಗಳ ಹತ್ತಿರಕ್ಕೆ ಓಡಿ ಬರುತ್ತಿದ್ದರು. ನನ್ನ ಸಂಬಂಧಿಗಳನ್ನು ಕೊಂದ ಪಾಪಿಯೇ, ನಿಲ್ಲು! ನಿನ್ನನ್ನೀಗಲೇ ತೀರಿಸಿಬಿಡುತ್ತೇನೆಂದು ಕೆಲವರು ತನ್ನ ಶತ್ರುವನ್ನು ಗೆಲ್ಲಲು ಬೀಳುತ್ತಾ ಏಳುತ್ತಾ ಗರ್ಜಿಸುತ್ತಾ ಓಡಿಹೋಗುತ್ತಿದ್ದರು-

೬೪. ಕೆಲವರು ಕಿರಿಚಿಕೊಳ್ಳುತ್ತಿದ್ದರು. ಕೆಲವರು ನೆಲದಮೇಲೆ ಮೂರ್ಛೆ ಬೀಳುತ್ತಿದ್ದರು. ಕೆಲವರು ಎದೆಯೊಡೆದು ಪ್ರಾಣವನ್ನೇ ಕಳೆದುಕೊಳ್ಳುತ್ತಿದ್ದರು. ಇನ್ನು ಕೆಲವರು ಎಷ್ಟು ಹೊತ್ತಾದರೂ ಅಳುತ್ತಲೇ ಇದ್ದರು. ಮತ್ತೆ ಹಲವರು ನೆಂಟರಿಷ್ಟರೊಡನೆ ಕೂಡಿ ಸತ್ತವರಿಗಾಗಿ ಅತ್ತು ಹೊರಳುತ್ತಿದ್ದರು.

೬೫. ಇನ್ನು ಕೆಲವರು ಪ್ರಾಣಬಿಡುವಾಗ ದಾಹವನ್ನು ತಡೆಯಲಾರದೆ ನೀರು ಕೊಡಿ, ನೀರುಕೊಡಿ, ಎಂದು ಅಂಗಲಾಚಿಬೇಡಿಕೊಳ್ಳುತ್ತಿದ್ದರು. ಇನ್ನು ಕೆಲವರ ಹೆಣಗಳನ್ನು ಅವರು ಸತ್ತೊಡನೆಯೇ ಆ ಮೃತನ ಬಂಧುಗಳು ಚಿತಿಯ ಮೇಲಿರಿಸಿ ಹೊತ್ತುಕೊಂಡು ಹೋಗುತ್ತಿದ್ದರು.

೬೬. ಉತ್ಕ್ರಮಣಾವಸ್ಥೆಯಲ್ಲಿದ್ದ ಇನ್ನು ಕೆಲವರನ್ನು ಅವರ ಬಂಧು ಬಾಂಧವರು ಸೇರಿ ಶಿಬಿರದ ಕಡೆ ಒಯ್ಯುತ್ತಿದ್ದರು. ಎಲೈ ಮಹಾರಾಜನೇ! ಕೇಳು. ಇಂಥವರು ಒಬ್ಬಿಬ್ಬರೆಂದು ತಿಳಿಯಬೇಡ. ನೂರಾರು ಸಾವಿರಾರು ಮಂದಿಗಳು ಅಲ್ಲಿ

**ಜಲಾರ್ಥಮನ್ಯೇ ಚ ನರಾ ಬಾಂಧವೈಶ್ಚ ಪ್ರಚೋದಿತಾಃ ।**
**ಆಗಮ್ಯ ದೃಷ್ಟ್ವಾ ಚ ಮೃತಂ ಭಾಜನಂ ಭುಂಕ್ತ್ವಾ ವಿಚುಕ್ರುಶುಃ** ॥ ೧೭ ॥

**ಹತಬಂಧುಮನಾದೃತ್ಯ ಸ್ವಾಮಿಕಾರ್ಯೈಕತತ್ಪರಾಃ ।**
**ಪರಾನಭಿಮುಖಾನ್ಯೇ ತತ್ರಾಯುಧ್ಯಂತ ಮಾನಿನಃ** ॥ ೧೮ ॥

**ಯುಧ್ಯತಾಮೇವ ತೇಷಾಂ ತು ಶತಶೋಽಥ ಸಹಸ್ರಶಃ ।**
**ಉತ್ಥಿತಾನಿ ರಣೇ ಯಾನಿ ಕಬಂಧಾನಿ ಮಹೀಪತೇ** ॥ ೧೯ ॥

**ಕಶ್ಚಿನ್ನನರ್ತ ಸಮರೇ ಕಬಂಧಸ್ತು ಧನುರ್ಧರಃ ।**
**ಗದಾಪಾಣಿಸ್ತಥೈವಾನ್ಯಃ ಖಡ್ಗಚರ್ಮಧರೋಽಪರಃ** ॥ ೨೦ ॥

ಕಾಣಲ್ಪಡುತ್ತಿದ್ದರು. ಕೆಲವು ಮಂದಿ ಹೇಡಿಗಳು ಪ್ರಾಣಭಯಕ್ಕಂಜಿ ಹಿಂತಿರುಗಿ ಹೋಗಿ ಗುಹೆಗಳಲ್ಲಿ ಅಡಗಿಕೊಂಡುಬಿಡುತ್ತಿದ್ದರು.

೧೭. ಸಾಯುವವನ ಬಾಯಿಗೆ ನೀರು ಬಿಡುವುದಕ್ಕೋಸ್ಕರ ಕೆಲವರು ಜಲಾಶಯದ ಬಳಿಗೆ ಹೋಗಿ ಗಡಿಗೆಗಳಲ್ಲಿ ನೀರು ತುಂಬಿಕೊಂಡು ಬರುವಷ್ಟರಲ್ಲಿಯೇ, ಆ ಪಿಪಾಸುವು ಪ್ರಾಣಬಿಟ್ಟುದನ್ನು ನೋಡಿ ತಾವು ತಂದಿದ್ದ ನೀರಿನ ಗಡಿಗೆಯ ಮೇಲೆ ಕೋಪಿಸಿಕೊಂಡು ಅದನ್ನು ಚೂರುಚೂರಾಗಿ ಒಡೆದುಹಾಕುತ್ತಿದ್ದರು

೧೮. ಸ್ವಾಮಿಕಾರ್ಯೈಕತತ್ಪರರಾದ ಕೆಲವು ಮಂದಿ ವೀರರು ಸತ್ತುಹೋಗಿರುವ ಬಂಧುಗಳನ್ನೂ ಸಹ ಲಕ್ಷ್ಯಮಾಡದೆ, ಅವರ ಅಪರ ಕರ್ಮಗಳ ವಿಚಾರವನ್ನೇ ಚಿಂತಿಸದೆ ಶತ್ರುಸೈನ್ಯಕ್ಕೆ ನುಗ್ಗಿ ಯುದ್ಧಮಾಡುತ್ತಲೇ ಇದ್ದರು.

೧೯. ಹೀಗೆ ಯುದ್ಧವು ಭೀಕರವಿಕಾರವಾಗಿ ನಡೆಯುತ್ತಿರಲು ಆ ಯುದ್ಧದಲ್ಲಿ ತಲೆ ಕತ್ತರಿಸಿಹೋದ ನೂರಾರು ಸಾವಿರಾರು ಕಬಂಧ (ತಲೆ ತರಿದ ಮುಂಡ) ಗಳು ಮೇಲಕ್ಕೆದ್ದೆದ್ದು ಕುಣಿಯುತ್ತಿದ್ದುವು.

೨೦. ಅದರಲ್ಲೊಂದು ಕಬಂಧ (ಮುಂಡ) ವು ಕೈಯಲ್ಲಿ ಧನುಸ್ಸ (ಬಿಲ್ಲ) ನ್ನು ಹಿಡಿದುಕೊಂಡಿದ್ದಂತೆಯೇ ಕುಣಿಯುತ್ತಿತ್ತು. ಮತ್ತೊಂದು ಕಳೇಬರವು ಗದೆಯನ್ನು ಹಿಡಿದು ನರ್ತಿಸುತ್ತಿತ್ತು. ಮತ್ತೊಂದು ಮುಂಡವು ಕತ್ತಿಗುರಾಣಿಗಳನ್ನು ಗಟ್ಟಿಯಾಗಿ ಹಿಡಿದುಕೊಂಡೇ ಕುಣಿಯುತ್ತಿತ್ತು.

ನಿಗೃಹ್ಯ ದಶನೈಃ ಕಶ್ಚಿತ್ ಪ್ರಾಸಪಾಣಿಸ್ತಥಾಪರೇ
ಪ್ರನೃತ್ಯತ್ಸು ಕಬಂಧೇಷು ಯಾಯಿನ್ಯೋ ದೇವದುಂದುಭಿನಾದಿತೇ ॥ ೨೧

ಪ್ರವರ್ತಮಾನೇ ಸಂಗ್ರಾಮೇ ಶೂರಾಣಾಂ ಸ್ವರ್ಗಲೋಕದೇ ।
ದೃಶ್ಯಂತ ಮಹಾರಾಜ ಪಿಶಾಚಾ ಘೋರದರ್ಶನಾಃ ॥ ೨೨ ॥

ರಾಕ್ಷಸಾಶ್ಚ ಮಹಾಕಾಯಾಃ ಕ್ರವ್ಯಾದಾಶ್ಚ ತಥಾ ಪರೇ ।
ಜಗಾಮಾಸ್ತಂ ಸವಿತಾ ತದಾ ರಕ್ತವಪುರ್ಧರಃ
ಸಂಗ್ರಾಮಸ್ಥ ಯೋಧಾನಾಂ ಪೀತ್ವೇವ ರುಧಿರಂ ಕರೈಃ ॥ ೨೩ ॥

ತತೋಽಸ್ತಶೈಲಂ ಭಗವತ್ಯಥಾಶ್ರಿತೇ
ಗತೇ ಜಪಾಪುಷ್ಪಸಮಂಬರಾಭೇ ।

---

೨೧. ಮತ್ತೊಂದು ಪಿಶಾಚಿಯನ್ನು ಹಿಡಿದು ನರ್ತಿಸುತ್ತಿತ್ತು. ಮತ್ತೊಂದು ಕಬಂಧವು ಪ್ರಾಸವನ್ನು ಹಿಡಿದು ಕುಣಿಯುತ್ತಿತ್ತು. ಇಂತಹ ಕಬಂಧಗಳು ಅಸಂಖ್ಯಾ ತನಾಗಿ ಕುಣಿಯುತ್ತಿದ್ದಾಗ ನಮುಯುವಲ್ಲಿ ದೇವಲೋಕದ ವಾದ್ಯಗಳ ಸದ್ದು ಬಲವಾಗಿ ಕೇಳಿಬರುತ್ತಿತ್ತು.

೨೨. ಶೂರರಾದ ಜನರಿಗೆ ಸ್ವರ್ಗಲೋಕವಾಸವನ್ನು ನಿರಾಯಾಸವಾಗಿ ಕೊಡುತ್ತಿದ್ದ, ಯುದ್ಧವು ನಡೆಯುತ್ತಿದ್ದ, ಸಂಗ್ರಾಮಭೂಮಿಯಲ್ಲಿ ಇದ್ದಕ್ಕಿದ್ದಂತೆಯೇ ಭಯಂಕರಾಕಾರವಾದ ಪಿಶಾಚಿಗಣಗಳು ಕಾಣಿಸಿಕೊಂಡವು.

೨೩. ಕೂಡಲೆ ಮಹಾಕಾಯರಾದ ರಾಕ್ಷಸರೂ, ಕ್ರವ್ಯಾದರೂ (ಮಾಂಸಾ ಶನರು) ವಿಶೇಷ ಸಂಖ್ಯೆಯಿಂದ ಆ ರಣರಂಗದಲ್ಲಿ ಸನ್ನಿಹಿತರಾದರು. ಅಷ್ಟು ಹೊತ್ತಿಗೆ ಸೂರ್ಯನು ಕೆಂಪಾದ ಶರೀರ ಮತ್ತು ಮುಖವುಳ್ಳವನಾಗಿ ಅಸ್ತಪರ್ವತಕ್ಕೆ ಪ್ರವೇಶಮಾಡಿದನು. ಆಗ ಸೂರ್ಯನು ಅಸ್ತಾಚಲಕ್ಕೆ ಹೋಗುತ್ತಿರುವ ದೃಶ್ಯ ವನ್ನು ನೋಡಿದರೆ ಸಂಗ್ರಾಮದಲ್ಲಿ ಮಡಿದ ಸಕಲ ಮಂದಿ ಸೈನಿಕರ ರಕ್ತಗಳನ್ನೂ ತನ್ನ ಕೈ (ಕಿರಣ) ಗಳಿಂದ ಹಿಡಿದು ಕುಡಿದು ಕುಡಿದು ಹೋಗುತ್ತಿರುವನೋ ಎಂಬಂತೆ ಕಾಣಿಸುತ್ತಿತ್ತು.

೨೪. ಜಪಾಕುಸುಮ ಸಮೂಹದಂತೆ ಕೆಂಪಾದ ಕಾಂತಿಯುಳ್ಳ ಭಗವಾನ್ ಸಹಸ್ರ ಕಿರಣನು ಈ ಪ್ರಕಾರವಾಗಿ ಅಸ್ತಪರ್ವತವಂ ಕುರಿತು ಬಿಜಯಂಗೈದೊಡ

**ಸೇನಾದ್ವಯಂ ತಚ್ಛಿಬಿರಾಯ ಯಾತಂ**
**ಕೃತ್ವಾವರೋಹಂ ಪರಬಾಣತಪ್ತಂ** ॥ ೭೪ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಸಂಕುಲಯುದ್ಧೋ ನಾಮ ಷಷ್ಟ್ಯುತ್ತರ**
**ದ್ವಿಶತತಮೋಽಧ್ಯಾಯಃ**

---

ನೆಯೇ (ಸಾಯಂಕಾಲವಾದೊಡನೆಯೇ) ಗಂಧರ್ವರ ಮತ್ತು ಮಾನವರ ಸೈನ್ಯದ್ವಯವೂ ಸಹ ಶತ್ರುಬಾಣಗಳಿಂದ ತಪ್ತವಾಗಿ (ಬಳಲಿ) ತಮ್ಮ ತಮ್ಮ ಶಿಬಿರಗಳಿಗೆ ಹೋಗಿ ಸೇರಿಕೊಂಡವು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಸಂಕುಲಯುದ್ಧವೆಂಬ ಹೆಸರಿನ
ಇನ್ನೂರಅರವತ್ತನೆಯ ಅಧ್ಯಾಯವು
ಮುಗಿದುದು.

ಶ್ರೀಃ

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಏಕಷಷ್ಟ್ಯುತ್ತರ ದ್ವಿಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ನಿಶಾವಸಾನೇ ಗಂಧರ್ವಾಃ ಕೃತ್ವಾ ವ್ಯೂಹಂ ಸುದುರ್ಜಯಂ ।
ಸಂಪ್ರತೀಕ್ಷ್ಯಂತ ಭರತಮಾಯಾತಂ ರಣಕೋವಿದಂ ॥ ೧ ॥

ಭರತೋಽಪಿ ಚ ರಾತ್ರ್ಯಂತೇ ವಜ್ರವ್ಯೂಹೇನ ದಂಶಿತಃ ।
ಆಸಸಾದ ಮಹತ್ಸೈನ್ಯಂ ಗಂಧರ್ವಾಣಾಂ ಸುದುರ್ಜಯಂ ॥ ೨ ॥

ತತಃ ಪ್ರವವೃತೇ ಯುದ್ಧಂ ಯಮರಾಷ್ಟ್ರವಿವರ್ಧನಂ ।
ದೇವಾಸುರಸಮಪ್ರಖ್ಯಂ ತ್ರೈಲೋಕ್ಯಭಯಕಾರಕಂ ॥ ೩ ॥

---

### ಇನ್ನೂರಅರವತ್ತೊಂದನೆಯ ಅಧ್ಯಾಯವು.

೧. ಮಾರ್ಕಂಡೇಯನು ಹೇಳುತ್ತಾನೆ:—ಆ ರಾತ್ರಿ ಕಳೆದು ಬೆಳಗಾಗಲು ಗಂಧರ್ವರೆಲ್ಲರೂ ಒಟ್ಟುಗೂಡಿದವರಾಗಿ ಪರರಾಜರಿಂದ ಭೇದಿಸಲಶಕ್ಯವಾದ ವ್ಯೂಹವನ್ನು ರಚಿಸಿದವರಾಗಿ ರಣಕೋವಿದನಾದ ಭರತನು ಬರುವ ಸಮಯವನ್ನಿದಿರು ನೋಡುತ್ತಲಿದ್ದರು.

೨. ಇದೇ ಮೇರೆ ಭರತನೂ ಸಹ ರಾತ್ರಿ ಕಳೆಯುವುದನ್ನೇ ನಿರೀಕ್ಷಿಸುತ್ತಲಿದ್ದವನಾಗಿ ಬೆಳಗಾದೊಡನೆಯೇ ವಜ್ರವ್ಯೂಹವನ್ನು ರಚಿಸಿ, ಗಂಧರ್ವರ ಸೈನ್ಯವು ಕೂಡಿದ್ದಲ್ಲಿಗೆ ಬಂದನು.

೩. ಆಗ ಎರಡು ಪಕ್ಷಗಳಿಗೂ ಯಮನಗರವನ್ನು ಅಭಿವೃದ್ಧಿಗೊಳಿಸುವ (ಸೈನಿಕರ ಮರಣಹೇತುವಾದ) ಮೂರುಲೋಕವನ್ನೂ ನಡುಗಿಸಬಲ್ಲ ದೇವಾಸುರ ಸಮರಕ್ಕೆ ಸಮಾನವಾದ ಸಂಗ್ರಾಮವು ಆರಂಭವಾಯಿತು.

ಪತ್ತೀನಾಂ ಪತ್ತಿಭಿಃ ಸಾರ್ಧಂ ಸಾದಿನಾಂ ಚೈವ ಸಾದಿಭಿಃ ।
ರಥಿನಾಂ ರಥಿಭಿಶ್ಚೈವ ಕುಂಜರಾಣಾಂ ಚ ಕುಂಜರೈಃ ॥ ೪ ॥

ಘೋಷತಾಂ ನಾಮಗೋತ್ರಾಣಿ ಶೂರಾಣಾಂ ಚೈವ ಗರ್ಜತಾಂ ।
ಧನುಷಾಂ ಕೂಜತಾಂ ಚೈವ ಶಬ್ದಃ ಸಮಭವತ್ತದಾ ॥ ೫ ॥

ತತಃ ಪ್ರವೃತ್ತೇ ಸಂಗ್ರಾಮೇ ಭಾರತಃ ಪುಷ್ಕರೋ ರಣೇ ।
ಆಸಸಾದ ವಿಶಾಲಾಕ್ಷಂ ಗಂಧರ್ವಂ ರಣಗರ್ವಿತಂ ॥ ೬ ॥

ತಕ್ಷಶ್ಚ ಭಾರತಿಃ ಶ್ರೀಮಾನ್ ಯುಯುಧೇ ವೀರಬಾಹುನಾ ।
ಸೇನಾನೀರ್ವಿಜಯಃ ಶ್ರೀಮಾನ್ನಮುಚಿಶ್ಚ ತಮಾಗತಃ । ॥ ೭ ॥

ಭೂಮನ್ಯುಃ ಕೌರವಃ ಶ್ರೀಮಾನ್ ಕಾಮಪಾಲೇನ ಸಂಗತಃ ।
ಕಿರಾತರಾಜೋ ದಮನಶ್ಚಂದ್ರಾಪೀಡೇನ ಸಂಗತಃ ॥ ೮ ॥

---

೪. ಪದಾತಿಗಳಿಂದ ಪದಾತಿಗಳೂ, ಮಾವುತರಿಂದ ಮಾವುಗರೂ ರಥಿಗಳಿಂದ ರಥಿಗಳೂ, ಆನೆಗಳಿಂದ ಆನೆಗಳೂ ಪರಸ್ಪರವಾಗಿ ಹೊಡೆದಾಡಲಾರಂಭವಾಯಿತು.

೫. ಶೂರರಾದವರು ತಮ್ಮ ತಮ್ಮ ನಾಮಗೋತ್ರಗಳನ್ನು ಹೇಳಿಕೊಳ್ಳುತ್ತಾ, ತಮ್ಮ ತಮ್ಮ ಜಂಭಗಳನ್ನು ಕೊಚ್ಚಿಕೊಳ್ಳುತ್ತಾ, ಸಿಂಹನಾದಗಳನ್ನು ಮಾಡುತ್ತಾ, ಧನುಷ್ಟಂಕಾರಮಾಡುತ್ತಾ ಇದ್ದ ಶಬ್ದವು ಬಹಳ ದೂರದವರಿಗೆ ಹಬ್ಬಿತು.

೬. ಆಗ ಯುದ್ಧಾರಂಭವಾದೊಡನೆಯೇ ಭರತನ ಮಗನಾದ ಪುಷ್ಕರನು ರಣದಿಂದ ಕೊಬ್ಬಿದ್ದ ವಿಶಾಲಾಕ್ಷನೆಂಬ ಗಂಧರ್ವನ ಮೇಲೆ ಯುದ್ಧವನ್ನು ಹೂಡಿದನು.

೭. ಭರತನ ಇನ್ನೊಬ್ಬ ಮಗನಾದ ತಕ್ಷನು ವೀರಬಾಹುವೆಂಬ ಗಂಧರ್ವನೊಡನೆ ಯುದ್ಧಾರಂಭವನ್ನು ಮಾಡಿದನು. ಆವರಿಬ್ಬರಿಗೂ ಈರೀತಿ ಸಮರನಾರಂಭವಾದೊಡನೆಯೇ ಸೇನಾಪತಿಯಾದ ವಿಜಯನೂ, ನಮುಚಿಯೂ ಜೊತೆಯಾಗಿ ಯುದ್ಧಕ್ಕೆ ತೊಡಗಿದರು.

೮. ಕುರುರಾಜರ ಧೊರೆಯಾದ ಭೂಮನ್ಯುವು ಕಾಮಪಾಲನೆಂಬ ಗಂಧರ್ವನನ್ನೆದುರಿಸಿ ಸಂಗ್ರಾಮವನ್ನು ಹೂಡಿದನು ಕಿರಾತರಾಜನಾದ ದಮನನು ಚಂದ್ರಾಪೀಡನೆಂಬ ಗಂಧರ್ವನೊಡನೆ ಕದನಕ್ಕಾರಂಭಿಸಿದನು.

ಪ್ರಭದ್ರಕೇಣ ಶಿಬಿನಾ ತಥೈವಾಜಿಕರೋ ರಣೇ ।
ಮಹೋದಯಃ ಮುನಿರ್ದೇಶೋ ಹರಿಕೇಶೇನ ಸಂಗತಃ ॥ ೯ ॥

ತ್ರೈಗರ್ತೋ ವಸುದಾನಶ್ಚ ಸೂರ್ಯರಶ್ಮಿಶ್ಚ ಸಂಗತೌ ।
ಗಂಧರ್ವಃ ಕುಮುದಾಪೀಡಃ ಕುಲೂತಾಧಿಪತಿರ್ಜಯಃ ॥ ೧೦ ॥

ಚಕ್ರತುಸ್ತುಮುಲಂ ಯುದ್ಧಂ ದೇವಾಸುರಸಮಂ ತದಾ ।
ದಾಶೇರಕಸ್ತಥಾ ರಾಜಾ ಯುವನೋ ವಾಶನಃ ಪರಃ ॥ ೧೧ ॥

ಏಕಲವ್ಯಶ್ಚ ಸಂಗ್ರಾಮೇ ತೇನಾಸೀತ್ಸ ಮಹಾತ್ಮನಾ ।
ಕುಮುದಃ ಶೋಣಿಮಾ ಶೂರೋ ಬಲಬಂಧುಃ ಸುಯೋಧನಃ ॥ ೧೨ ॥

೯. ಆ ಸಮರಮುಖದಲ್ಲಿ ಪ್ರಭದ್ರಕನೂ ಶಿಬಿಯೂ ಒಬ್ಬರನ್ನೊಬ್ಬರಿದಿರಿಸಿ ನಿಂತರು. ಮಹೋದಯರಾಜನಾದ ಮುನಿರ್ದೇಶನೆಂಬುವನು ಹರಿಕೇಶನೆಂಬ ಗಂಧರ್ವವೀರನಿಗಭಿಮುಖನಾಗಿ ನಿಂತನು.

೧೦. ತ್ರಿಗರ್ತದೇಶಾಧೀಶ್ವರನಾದ ವಸುದಾನನೂ, ಸೂರ್ಯರಶ್ಮಿಯೆಂಬ ಗಂಧರ್ವನೂ ಇದಿರುಬದಿರಾದರು. ಕುಲೂತದೇಶಾಧಿಪತಿಯಾದ ಜಯನೂ ಕುಮುದಾಪೀಡನೆಂಬ ಗಂಧರ್ವನೂ ಜೋಡಿಕಟ್ಟಿಕೊಂಡರು.

೧೧. ಹೀಗೆ ಜೋಡಿಜೋಡಿಯಾಗಿ ಸೇರಿ ಇವರೆಲ್ಲರೂ ದೇವಾಸುರಸಮರಕ್ಕೆ ಸಮನಾದ ತುಮುಲಯುದ್ಧಕ್ಕೆ ಆರಂಭಿಸಿದೊಡನೆಯೇ. ದಾಶೇರಕದೇಶದ ರಾಜನಾದ ಯುವನನೂ, ವಾಶನನೆಂಬ ಗಂಧರ್ವನೂ ಜೋಡಿಯಾದರು

೧೨. ಆ ಯುದ್ಧದಲ್ಲಿ ಏಕಲವ್ಯನೂ, ಸುಮಹಾತ್ಮನೂ ಜೋಡಿಯಾದರು. ಇಷ್ಟಾದಮೇಲೆ ಕುಮುದ, ಶೋಣಿಮ, ಶೂರ, ಬಲಬಂಧು, ಸುಯೋಧನನೆಂಬ ಹೆಸರಿನ ಐದುಮಂದಿ ಗಂಧರ್ವರಾಜನೊಡನೆ ಕಾದಾಡಲು, ಪಾರ್ವತೀಯ (ಬೆಟ್ಟಗುಡ್ಡದ ಸಮೀಪಪ್ರದೇಶದಲ್ಲಿರುವ ರಾಜ್ಯಗಳ) ರಾಜನ್ಯೈವರು ಸನ್ನಾಹಮಾಡಿದರು.

ಗಂಧರ್ವೈಃ ಪಂಚಭಿಃ ಪಂಚ ಪಾರ್ವತೀಯಾಃ ಸಮಾಗತಾಃ ।
ಬಲಾಕಾ ಬಲಕಾಭ್ಯಾಂ ತು ಗದಿನಾ ಮೌಲಿನಾ ತಥಾ ॥ ೧೩ ॥

ಕುಮುದೇನ ತು ವೀರೇಣ ಸದಸೀಷ್ವನಿವರ್ತಿನಾ ।
ಮದ್ರರಾಜೋಽಂಶುಮಾನ್ನಾಮ ಚತುರ್ಭಿಃ ಸಂಗತೋ ರಣೇ ॥ ೧೪ ॥

ಭೀಮನಾದ ಮಹಾನಾದ ವಸುಷೇಣ ಗಜಾಕರ್ಣೈಃ ।
ದಾರ್ವಃ ಶ್ರುತಂಜನಃ ಶ್ರೀಮಾನಭಿಮಾನಃ ಕೃತಂಜಯಃ ॥ ೧೫ ॥

ಯುದ್ಧಂ ತೌ ಚಕ್ರತುರ್ಘೋರಂ ಸಹಿತೌ ಚಂದ್ರವರ್ಮಣಾ ।
ಕಾಶ್ಮೀರಕಃ ಸುಬ ಹುಶ್ಚ ಗಂಧರ್ವೇಣ ಸುಬಾಹುನಾ ॥ ೧೬ ॥

---

೧೩. ಹೀಗೆ ಒಟ್ಟೊಟ್ಟಿಗೆ ಸೇರಿ ಗದೆ, ಮುಸಲ (ಒನಕೆ) ವೇ ಮುಂತಾದ ಆಯುಧಗಳನ್ನು ಹಿಡಿದು ಒಬ್ಬರಮೇಲೊಬ್ಬರು ಪ್ರಯೋಗಿಸುತ್ತಾ ಯುದ್ಧ ಮಾಡಿದರು.

೧೪. ಯುದ್ಧರಂಗದಿಂದ ಎಂದೆಂದಿಗೂ ಹಿಂತಿರುಗದೆ ಇರುವ ಸಮರಶೂರನಾದ ಕುಮುದನೆಂಬ ಗಂಧರ್ವನೊಡನೆ ಯುದ್ಧಮಾಡಲು ಅಂಶುಮಂತನೆಂಬ ಹೆಸರಿನ ಮದ್ರರಾಜನು ನಾಲ್ಕುಜನ ವೀರರೊಡನೆ ಎದುರಾದನು.

೧೫. ಇವರೆಲ್ಲರೂ ಸಮರವನ್ನು ಸಾಗಿಸುತ್ತಿರುವಲ್ಲಿ ಭೀಮನಾದ, ಮಹಾನಾದ, ವಸುಷೇಣ, ಗಜಾಕರರೆಂಬ ಗಂಧರ್ವರನ್ನಭಿಮುಖಮಾಡಿಕೊಂಡು, ದಾರ್ವ, ಶ್ರುತಂಜನ, ಅಭಿಮಾನ, ಕೃತಂಜಯರೆಂಬೀ ನಾಲ್ವರೂ ಆಯೋಧನವನ್ನಾರಂಭಿಸಿದರು.

೧೬. ಚಂದ್ರಬಾಹು, ಸುಬಾಹುಗಳೆಂಬೀರ್ವರು ಗಂಧರ್ವರೊಡನೆ ಕಾಶ್ಮೀರ, ಚಂದ್ರವರ್ಮರೆಂಬಿಬ್ಬರು ಸೇನಾಧಿಪತಿಗಳು ಇದಿರುಬದಿರಾಗಿ ನಿಂತು ಆಸ್ಕಂದನವನ್ನಾರಂಭಮಾಡಿದರು.

ಚಕಾರ ತುಮುಲಂ ಯುದ್ಧಂ ಭೀರೂಣಾಂ ಭಯವರ್ಧನಂ ।
ಭರತಸ್ಯಾಪರೇ ಯೋಧಾ ಗಂಧರ್ವೈರ್ಭೀಮವಿಕ್ರಮೈಃ ॥ ೧೭ ॥

ಸಮಾಗತಾಸ್ತದಾ ಯುದ್ಧೇ ಶತಶೋಽಥ ಸಹಸ್ರಶಃ ।
ಭರತಶ್ಚ ಮಹಾತೇಜಾಃ ಶೈಲೂಷೇಣ ಸಮಾಗತಾಃ ॥ ೧೮ ॥

ಚಕಾರ ತುಮುಲಂ ಯುದ್ಧಂ ಸರ್ವಭೂತ ಭಯಂಕರಂ ।
ಪರ್ವತಾಭೇನ ನಾಗೇನ ತ್ರಿಧಾ ಪ್ರಸ್ರವತಾ ಮದಂ ॥ ೧೯ ॥

ಬಾಧಮಾನಮರೀನ್ಸಂಖ್ಯೇ ಮಹೇಂದ್ರಮಿವ ದಾನವಾನ್ ।
ವಿಶಾಲೋ ಮಯಾಮಾಸ ರಥೇನಾಭ್ಯೇತ್ಯ ಪುಷ್ಕರಂ ॥ ೨೦ ॥

---

೧೭. ಹೀಗೆ ನಾಲ್ಕು ನಾಲ್ಕಾಗಿ, ಐದೈದಾಗಿ, ಹತ್ತುಹತ್ತಾಗಿ, ಹೀಗೆ ಬಹು ಬಲವಾದ ಭರತಸೈನ್ಯದ ವೀರರೊಡನೆ ಗಂಧರ್ವವೀರರೂ ಸಹ ಸಮಸಮಬಲರಾಗಿ ನಿಂತು ಯುದ್ಧವನ್ನಾರಂಭಿಸಿದರು.

ಟಿಪ್ಪಣಿ :— ವಿವಾಹಶ್ಚ ವಿವಾದಶ್ಚ ಸಮಯೋರೇವಶೋಭತೇ ; ಎಂಬ ಆರ್ಯೋಕ್ತಿಯು ಇದಕ್ಕಾಗಿಯೇ ಹುಟ್ಟಿದೆ. ಮದುವೆಮಾಡಬೇಕಾದರೆ ಸಮಸಮ ನಾದ ಯೋಗ್ಯತೆ ಐಶ್ವರ್ಯವುಳ್ಳವರೇ ಬೀಗರಾಗಬೇಕು. ವಿವಾದಮಾಡಬೇಕಾ ದರೂ ಸಮಸಮಬಲವುಳ್ಳವರೇ ಆಗಿರಬೇಕೆಂದು ಇದರ ಅಭಿಪ್ರಾಯ.

೧೮. ಹೀಗೆ ಒಬ್ಬರನ್ನೊಬ್ಬರು ನೋಡಿ ಮತ್ತೊಬ್ಬರೆಂಬಂತೆ ಎರಡು ಪಕ್ಷದ ವೀರರಲ್ಲಿಯೂ ಸಮಸಮ ಬಲರಾದ ನೂರಾರು ಸಾವಿರಾರು ಮಾನುಷಗಂಧರ್ವ ವೀರರು ಏಕತ್ರಮಿಳಿತವಾಗಿ ಪರಸ್ಪರ ಯುದ್ಧವನ್ನಾರಂಭಿಸಿದುದನ್ನು ನೋಡಿ, ಭರತನೂ, ಶೈಲೂಷನೂ ಜೋಡಿಯಾಗಿ ನಿಂತು ಯುದ್ಧವನ್ನಾರಂಭಿಸಿದರು.

೧೯. ಇವರಿಬ್ಬರೂ ಏರಿದ್ದ ಆನೆಗಳು ಮೂರು ಮೂರು ಧಾರೆಯಾಗಿ ಮದೋದಕವನ್ನು ಸುರಿಸುತ್ತಿದ್ದ ಪರ್ವತೋಪಮಾನವಾದ ದೇಹಗಳನ್ನು ಧರಿಸಿದ್ದುವು. ಇಂತಹ ಆನೆಗಳ ಮೇಲೆ ಕುಳಿತು ಭರತಶೈಲೂಷರು ಯುದ್ಧಕ್ಕುಪ ಕ್ರಮಿಸಿದರು.

೨೦. ದೇವೇಂದ್ರನು ದಾನವರನ್ನು ಸದೆಬಡಿಯುವಂದದಿ ಭರತನು ಗಂಧರ್ವರ ಗುಂಪನ್ನು ಭೇದಿಸುತ್ತ ಬಂದನು. ಇಷ್ಟರೊಳಗೆ ವಿಶಾಲನೆಂಬ ಗಂಧರ್ವನು ರಥದ ಮೇಲೆ ಕುಳಿತು ಬಂದು ಪುಷ್ಕರನನ್ನು ಮುತ್ತಿಗೆಹಾಕಿದನು.

**ಬಾಣೌಘೇನ ರಣೇ ಭಿತ್ವಾ ವೇಗಂ ಪುಷ್ಕರದಂತಿನಃ ।**
**ಪುಷ್ಕರಂ ತಾಡಯಾಮಾಸ ನಾರಾಚೈರ್ಬಹುಭಿಸ್ತದಾ ॥ ೨೧ ॥**

**ರಿಪುಭಿಸ್ತಾಡ್ಯಮಾನಸ್ತು ಭಾರತಿರ್ಭೀಮವಿಕ್ರಮಃ ।**
**ವವರ್ಷ ಶರಸಂಘಾತೈರ್ವಿಶಾಲಂ ಸೇನಯಾ ಸಹ ॥ ೨೨ ॥**

**ಪುಷ್ಕರಸ್ಯ ವಿಶಾಲೋಽಥ ಮಧ್ಯೇ ಚಿಚ್ಛೇದ ಕಾರ್ಮುಕಂ ।**
**ಛಿನ್ನಧನ್ವಾ ವಿಶಾಲಸ್ಯ ಸ ಜಘಾನಾಥ ಸಾರಥಿಂ ॥ ೨೩ ॥**

**ಆಕ್ರಮ್ಯ ಯೋಧಯಾಮಾಸ ವಿಶಾಲಸ್ಯ ಮಹಾರಥಂ ।**
**ಯದಾ ರಣೇ ಮಹಾರಾಜ ಪುಷ್ಕರಸ್ಯ ರಥೋತ್ತಮಂ ॥ ೨೪ ॥**

---

೨೧. ತನ್ನ ಮುಂದೆ ವೇಗದಿಂದೋಡಿ ಬರುತ್ತಿದ್ದ ಪುಷ್ಕರನು ಕುಳಿತಿದ್ದ ಆನೆಯನ್ನು ಆ ವಿಶಾಲನು ಬಾಣಪರಂಪರೆಯನ್ನು ಪ್ರಯೋಗಿಸಿ ಅದರ ವೇಗವನ್ನು ತಡೆದು, ಮತ್ತೆ ಕೆಲವು ಬಾಣಗಳಿಂದ ಪುಷ್ಕರನನ್ನು ಪ್ರಹರಿಸಿದನು.

೨೨. ಈ ಪ್ರಕಾರವಾಗಿ ವಿಶಾಲಗಂಧರ್ವನು ಅವಿಶ್ರಾಂತಿಯಿಂದ ಬಾಣಗಳನ್ನು ಪ್ರಯೋಗಿಸುತ್ತಿರುವುದನ್ನು ನೋಡಿ ಭರತನ ಮಗನಾದ ಪುಷ್ಕರನು ಆ ವಿಶಾಲನನ್ನೂ, ವಿಶಾಲನ ಸೈನ್ಯವನ್ನೂ ಗುರಿಯಿಟ್ಟು ಲೆಕ್ಕವಿಲ್ಲದಷ್ಟು ಬಾಣಗಳನ್ನು ಮಳೆಯಂತೆ ಸುರಿಸಿಬಿಟ್ಟನು.

೨೩. ಹೀಗೆ ಮೇಲೆ ಮೇಲೆ ಮಳೆಯು ಹಾಗೆ ಸುರಿಯುತ್ತಿದ್ದ ಪುಷ್ಕರನ ಬಾಣಗಳನ್ನು ವಿಶಾಲನು ಮಧ್ಯದಲ್ಲಿಯೇ ತುಂಡುತುಂಡಾಗಿ ಕತ್ತರಿಸಿಬಿಡುತ್ತಿದ್ದನು ಮತ್ತು ಪುಷ್ಕರನ ಧನುಸ್ಸನ್ನು ತನ್ನದೊಂದು ಬಾಣದಿಂದ ತುಂಡುಮಾಡಿಬಿಟ್ಟನು. ಈರೀತಿ ತನ್ನ ಧನುಸ್ಸು ಮುರಿದುಹೋಗಲು ಆ ಮುರಿದುಹೋದ ಧನುಸ್ಸನ್ನೇ ವಿಶಾಲನ ಸಾರಥಿಯ ಮೇಲೆ ಎಸೆದನು.

೨೪. ಆನೆಯಮೇಲೆ ಕುಳಿತಿದ್ದ ಪುಷ್ಕರನು ವಿಶಾಲನ ಸಾರಥಿಯನ್ನು ತುಂಡಾದ ಬಿಲ್ಲಿನಿಂದ ಹೊಡೆದು ಹಿಂಸಿಸಿದೊಡನೆಯೇ, ವಿಶಾಲನ ರಥಕ್ಕೆ ಮುತ್ತಿಗೆ ಹಾಕಿದನು.

ಹಂತುಂ ಸ ರಥಮುತ್ಸೃಜ್ಯ ವಿಶಾಲೋಽಪಿ ಮಹೀಪತೇಃ
ಗದಯಾ ಯೋಧಯಾಮಾಸ ಪುಷ್ಕರಸ್ಯ ತು ವಾರಣಂ ॥ ೨೫ ॥

ಪುಷ್ಕರೋಽಪಿ ಗದಾಪಾಣಿರ್ವಿಶಾಲಾಭಿಮುಖಂ ಯಯೌ ।
ಗದಾಭಿಸ್ತೌ ತತೋ ವೀರೌ ಪರಸ್ಪರಜಿಗೀಷಯಾ ॥ ೨೬ ॥

ಸವ್ಯದಕ್ಷಿಣತಸ್ತತ್ರ ಮಂಡಲಾನಿ ವಿಚೇರತುಃ ।
ಪ್ರಜಹ್ರತುಸ್ತಥಾನ್ಯೋನ್ಯಮನ್ಯೋನ್ಯಸ್ಯ ವಧೈಷಿಣೌ ॥ ೨೭ ॥

ಪುಷ್ಕರೇಣ ರಣೇ ಯೋಗಾದ್ವಿಶಾಲಸ್ಯ ಗದಾ ಹತಾ ।
ಮುಮೋಚ ಪಾವಕಂ ತೀಕ್ಷ್ಣಂ ಸಸ್ಫುಲಿಂಗಂ ಮಹೀಪತೇ ॥ ೨೮ ॥

---

೨೫. ತನ್ನ ರಥವನ್ನು ಮುತ್ತಿದೊಡನೆ ವಿಶಾಲನೂ ಸಹ ಪುಷ್ಕರನ ರಥವನ್ನಾಕ್ರಮಿಸಿ ಅವನನ್ನು ಸಂಹರಿಸಲೋಸುಗ ರಥದಿಂದ ಕೆಳಗಿಳಿದು, ತನ್ನ ಕೈಯಲ್ಲಿದ್ದೊಂದು ಗದೆಯಿಂದ ಪುಷ್ಕರನ ಆನೆಯನ್ನು ಬಲವಾಗಿ ಪ್ರಹರಿಸಿದನು.

೨೬. ಆ ಕೂಡಲೆ ಪುಷ್ಕರನೂ ಸಹ ತಾನೂ ಒಂದು ಗದೆಯನ್ನು ಹಿಡಿದು ವಿಶಾಲನಿಗೆ ಅಭಿಮುಖನಾಗಿ ಬಂದು ನಿಂತುಕೊಂಡನು ಹೀಗೆ ಆ ವಿಶಾಲಪುಷ್ಕರರೀರ್ವರೂ ಗದಾಪಾಣಿಗಳಾಗಿ ಪರಸ್ಪರವಾಗಿ ಜಯಿಸಬೇಕೆಂಬ ಕುತೂಹಲದಿಂದ ಗದಾಯುದ್ಧಕ್ಕಾರಂಭಿಸಿದರು.

೨೭. ಆ ಗದೆಗಳನ್ನು ಇಬ್ಬರೂ ಎಡಕ್ಕೂ ಬಲಕ್ಕೂ ವರಸೆ ವರಸೆಯಾಗಿ ತಿರುಗಿಸುತ್ತಾ ಮಂಡಲಾ (ಗುಂಡಾದಾ)-ಕಾರವಾಗಿ ತಿರುಗುತ್ತಾ, ಬಗ್ಗುತ್ತಾ, ಏಳುತ್ತಾ ಪಟ್ಟು ಸಿಕ್ಕಿದಾಗ ಒಬ್ಬರನ್ನೊಬ್ಬರು ಹೊಡೆಯಬೇಕೆಂದು ಹವಣಿಸುತ್ತಿದ್ದರು.

೨೮. ಹೀಗೆ ಬಲು ಹೊತ್ತು ಗದೆಗಳನ್ನು ತಿರುಗಿಸುತ್ತಿದ್ದ ಸಮಯದಲ್ಲಿ ದೈವಯೋಗದಿಂದ ವಿಶಾಲನ ಗದೆಯು ಪುಷ್ಕರನ ಗದೆಗೆ ಬಲವಾಗಿ ತಗುಲಿ ಅನೇಕ ಬೆಂಕಿಯ ಕಿಡಿಗಳು ಉತ್ಪತ್ತಿಯಾಗಿ ಕಡೆಗೆ ಭಯಂಕರವಾದ ಅಗ್ನಿಜ್ವಾಲೆಯೇ ಹತ್ತಿಕೊಂಡಿತು.

ವಿಶಾಲೇನ ತತೋ ಯುದ್ಧೇ ಗದಯಾ ಪುಷ್ಕರೋ ಹತಃ ।
ಹಿಮವತ್ಸನ್ನಿಕಾಶಸ್ತು ನ ಚಚಾಲ ಪದಾತ್ಪದಂ ॥ ೨೯ ॥

ಪುಷ್ಕರೇಣ ಮಹಾರಾಜ ವಿಶಾಲೋ ಗದಯಾ ಹತಃ ।
ತತಃ ಶೈಲೂಷವಚನಾನ್ಮಹಾಮಾತ್ರಪ್ರಚೋದಿತಂ ॥ ೩೦ ॥

ಆರುರೋಹ ಮಹಾನಾಗಂ ವಿಶಾಲೋ ರಣದರ್ಪಿತಃ ।
ಆರುರೋಹ ರಥಂ ಶ್ರೀಮಾನ್ಗಂಧರ್ವಸ್ಯ ಚ ಪುಷ್ಕರಃ ॥ ೩೧ ॥

ತಾವೇಕರಥಮಾರೂಢೌ ತದಾ ರಾಜೇಂದ್ರಪುಷ್ಕರೌ ।
ನಿಜಘ್ನತುರ್ವಿಶಾಲಸ್ಯ ಸಂಗ್ರಾಮೇ ವರವಾರಣಂ ॥ ೩೨ ॥

---

೨೯. ಆಗ ವಿಶಾಲನು ಮಹಾಕೋಪದಿಂದ ಪುಷ್ಕರನನ್ನು ಹೊಡೆದುಬಿಟ್ಟನು. ಇಂತಹ ಏಟುಬಿದ್ದಾಗ್ಯೂ ಪುಷ್ಕರನು ಒಂದು ಹೆಜ್ಜೆಯನ್ನೂ ಹಿಂದಕ್ಕಾಗಲೀ ಮುಂದಕ್ಕಾಗಲೀ ಇಡದೆ ಸ್ತಬ್ಧನಾಗಿ ನಿಂತುಬಿಟ್ಟನು.

೩೦. ಹೀಗೆ ತಾನು ವಿಶಾಲನ ಗದೆಯಿಂದೇಟು ತಿಂದ ಬಳಿಕಲಾ ಪುಷ್ಕರನು ತನ್ನ ಗದೆಯನ್ನು ಬಲವಾಗಿ ತಿರುಗಿಸಿ ವಿಶಾಲನನ್ನು ಹೊಡೆದನು. ಈರೀತಿ ತನ್ನ ಮಗನಾದ ವಿಶಾಲನಿಗೆ ಗದೆಯ ಏಟು ಬಿದ್ದುದನ್ನು ಶೈಲೂಷನು ನೋಡಿದನು.

೩೧. ಆ ಕೂಡಲೆ ಶೈಲೂಷನು ಮಂತ್ರಿಗಳಿಗೆ ಆಜ್ಞಾಪಿಸಿ ತನ್ನ ಮಗನ ಬಳಿಗೆ ಒಂದು ಮಹಾಗಜವನ್ನು ಕಳುಹಿಸಲು ವಿಶಾಲನು ಆ ಆನೆಯನ್ನೇರಿ ಕುಳಿತು ಕೊಂಡನು.

೩೨. ವಿಶಾಲನು ಈಮೇರೆ ಆನೆಯನ್ನೇರಿ ಕುಳಿತೊಡನೆಯೇ ಆ ವಿಶಾಲನ ರಥದಮೇಲೆ ಪುಷ್ಕರನು ಹತ್ತಿ ಕುಳಿತುಕೊಂಡನು. ಈರೀತಿ ಗಜರಥಗಳನ್ನಾರೋಹಿಸಿ ಕುಳಿತೊಡನೆಯೇ ಪುಷ್ಕರನು ವಿಶಾಲನು ಕುಳಿತಿದ್ದ ಆನೆಗೆ ಒಂದು ಬಾಣವನ್ನು ಪ್ರಯೋಗಿಸಿ ಅದನ್ನು ಉರುಳಿಸಿದನು.

ಯಸ್ಯಾವರ್ಜಿತನಾಗಸ್ಯ ಕುಂಜರಾನ್ನಿಪತಿಷ್ಯತಃ ।
ಚಿಚ್ಛೇದಾಥ ವಿಶಾಲಸ್ಯ ಶಿರೋ ಜ್ವಲಿತ ಕುಂಡಲಂ ॥ ೩೩ ॥

ಹತ್ವಾ ವಿಶಾಲಂ ಸಂಗ್ರಾಮೇ ರಥಮಾರುಹ್ಯ ಚಾಪರಂ ।
ಛಾದಯಾಮಾಸ ತತ್ಸೈನ್ಯಂ ಗಂಧರ್ವಾಣಾಂ ಶಿರೋತ್ಕರೈಃ ॥ ೩೪ ॥

ವಿಶಾಲಂ ನಿಹತಂ ದೃಷ್ಟ್ವಾ ರುಹಃ ಪರಮಕೋಪನಃ ।
ಸಾದೀ ಜಘಾನ ಪ್ರಾಸೇನ ಗಾಂಧಾರಂ ರಣಗರ್ವಿತಂ ॥ ೩೫ ॥

ತಸ್ಯ ಚಿಚ್ಛೇದ ಗಾಂಧಾರಃ ಸಪ್ರಾಸಂ ತು ಭುಜದ್ವಯಂ ।
ಶಿರಶ್ಚ ಸಶಿರಸ್ತ್ರಾಣಂ ಕ್ಷುರಪ್ರೇಣ ಮಹೀಪತೇ ॥ ೩೬ ॥

---

೩೩. ಆನೆಯಿಂದ ಕೆಳಗೆ ಬೀಳುತ್ತಿದ್ದ ವಿಶಾಲನನ್ನು ನೋಡಿ ಪುಷ್ಕರನು ಮತ್ತೊಂದು ದಿವ್ಯಾಸ್ತ್ರವನ್ನು ಪ್ರಯೋಗಿಸಿ, ಕುಂಡಲವಿಂದ ಜ್ವಲಿಸುತ್ತಿದ್ದ ವಿಶಾಲನ ಶಿರಸ್ಸನ್ನು ಹಾರಿಸಿಬಿಟ್ಟನು.

೩೪. ಯಾವಾಗ ವಿಶಾಲನು ಹತನಾದನೋ, ಆ ಕ್ಷಣವೇ ಪುಷ್ಕರನು ತಾನು ಕುಳಿತಿದ್ದ ರಥವನ್ನು ಬಿಟ್ಟು, ಬೇರೆಯೊಂದು ರಥವನ್ನೇರಿದವನಾಗಿ ಗಂಧರ್ವರ ಸೈನ್ಯದ ಮೇಲೆ ಅನೇಕ ಬಾಣಗಳನ್ನು ಪ್ರಯೋಗಿಸಿ, ಬಾಣಪರಂಪರೆಗಳಿಂದ ಆ ಸೈನ್ಯವನ್ನೆಲ್ಲಾ ಮುಚ್ಚಿಬಿಟ್ಟನು.

೩೫. ವಿಶಾಲನು ನಿಹತನಾದುದನ್ನು ನೋಡಿ ಆತನ ಆನೆಯ ಮಾವುತನಾದ ರುಹನೆಂಬುವನು ಕ್ರೋಧಸಂತಪ್ತನಾಗಿ ಒಂದು ಪ್ರಾಸಾಯುಧವನ್ನು ತೆಗೆದುಕೊಂಡು ಪುಷ್ಕರನ ಆನೆಯ ಮಾವುತನಾದ, ರಣಗರ್ವಿತನಾದ ಗಾಂಧಾರನ ಮೇಲೆ ಪ್ರಯೋಗಿಸಿದನು.

೩೬. ಆ ಗಾಂಧಾರನೇನು ಸಾಮಾನ್ಯನೇ? ತನ್ನ ಮೇಲೆ ರುಹನು ಪ್ರಯೋಗಿಸಿದ ಪ್ರಾಸವನ್ನೊಂದು ಬಾಣದಿಂದ ಕತ್ತರಿಸಿ, ಅದೇ ತೀಕ್ಷ್ಣಬಾಣದಿಂದಲೇ ಆ ರುಹನ ಎರಡು ಭುಜಗಳನ್ನೂ ಪೇಟ (ಶಿರಸ್ತ್ರಾಣ) ದಿಂದ ಪ್ರಕಾಶಿಸುತ್ತಿದ್ದ ಅವನ ತಲೆಯನ್ನೂ ಸಹ ಕತ್ತರಿಸಿ ಕೆಡವಿದನು.

**ತಕ್ಷೋ ರಥೇನ ಶುಭ್ರೇಣ ಕಿಂಕಿಣೀಜಾಲಮಾಲಿನಾ ।**
**ಆಸಸಾದ ಮಹಾಬಾಹುಂ ವೀರಬಾಹುಂ ರಣಾಜಿರೇ ॥ ೬೭ ॥**

**ಏಕಚ್ಛಾಯ ಇವಾಕಾಶಸ್ತಯೋರಾಸೀಚ್ಛರೋತ್ಕರೈಃ ।**
**ನ ವಾತಿ ಪವನಸ್ತತ್ರ ನ ವಿಭ್ರಾಜತಿ ಭಾಸ್ಕರಃ ॥ ೬೮ ॥**

**ತಕ್ಷಃ ಸಪುಂಖಮಾಕೃಷ್ಯ ಬಾಣಂ ಭಾಸ್ಕರಸಪ್ರಭಂ ।**
**ಚಿಚ್ಛೇದ ಸಾರಥೇಸ್ತಸ್ಯ ಶಿರೋ ಜ್ವಲಿತಕುಂಡಲಂ ॥ ೬೯ ॥**

**ನಿರ್ಯಂತೃಣಾ ರಥೇನಾಸೌ ಸಮರಾದಪವಾಹಿತಃ ।**
**ತಸ್ಮಿನ್ರಣಾಜಿರಾನ್ನಿರ್ತೇ ತಕ್ಷಂ ಕುಂಜರಧೂರ್ಗತಃ ॥ ೭೦ ॥**

---

೬೭. ಇಷ್ಟಾದ ಬಳಿಕ ಮಹಾಭುಜಪರಾಕ್ರಮಶಾಲಿಯಾದ ವೀರಬಾಹು ವೆಂಬ ಗಂಧರ್ವನು ಕಿರುಗಂಟೆಗಳ ಸರವನ್ನು ಕಟ್ಟಿದ್ದ, ಶುಭ್ರವಾದೊಂದು ರಥದ ಮೇಲೆ ಕುಳಿತು ಸಮರಾಂಗಣದಲ್ಲಿ ಕಾಣಿಸಿಕೊಂಡನು.

೬೮. ಆ ವೀರಬಾಹುವನ್ನು ಭರತನ ಮತ್ತೊಬ್ಬ ಮಗನಾದ ತಕ್ಷನು ಎದುರಿಸಿದನು. ಅವರಿಬ್ಬರೂ ಒಂದೇ ಸಮನಾದ ವೀರರಾಗಿದ್ದರು. ಇಬ್ಬರೂ ರಥದ ಮೇಲೆ ಸನ್ನಿಹಿತರಾಗಿ ಪರಸ್ಪರ ಬಾಣಪ್ರಯೋಗ ಮಾಡಿದೊಡನೆಯೇ ಆ ಬಾಣಗಳು ಭೂವ್ಯಂತರಿಕ್ಷಗಳನ್ನು ವ್ಯಾಪಿಸಿಕೊಂಡುಬಿಟ್ಟವು. ಆಗ ಗಾಳಿಯು ಬೀಸುತ್ತಿರಲಿಲ್ಲ. ಸೂರ್ಯನು ಕಾಣಿಸುತ್ತಿರಲಿಲ್ಲ.

೬೯. ಆಗ ತಕ್ಷನು ಒಂದು ಬಾಣವನ್ನು ಧನುಸ್ಸಿನಲ್ಲಿ ಹೂಡಿ ಅದನ್ನು ಆಕರ್ಣಾಂತವಾಗಿ ಸೆಳೆದು, ಸೂರ್ಯನಂತೆ ಸುಡುತ್ತಿದ್ದ ಆ ಬಾಣವನ್ನು ವೀರಬಾಹುವಿನ ಸಾರಥಿಯ ಕತ್ತಿಗೆ ಗುರಿಯಿಟ್ಟು ಹೊಡೆಯಲು, ಆ ಬಾಣವು ಸರ್ರನೆ ಹೋಗಿ ವೀರಬಾಹುವಿನ ಸಾರಥಿಯ ಸಕುಂಡಲವಾದ ಕತ್ತನ್ನು ಕತ್ತರಿಸಿಯೇಬಿಟ್ಟಿತು.

೭೦. ಯಾವಾಗ ತನ್ನ ಸಾರಥಿಯು ಹತನಾದನೋ ಆಗಲೇ ವೀರಬಾಹುವು ತನ್ನ ರಥವನ್ನು ತಾನೇ ಹಿಂತಿರುಗಿಸಿದವನಾಗಿ ರಣಭೂಮಿಯಿಂದ ಹಿಂತಿರುಗಿದನು. ಹಿಂತಿರುಗಿದ ವೀರಬಾಹುವು ಮತ್ತೊಂದು ಆನೆಯ ಬೆನ್ನನ್ನೇರಿ ಹೊರಟುಹೋದನು.

**ಆಜಗಾಮ ಮಹಾರಾಜ ಗಂಧರ್ವಸ್ತು ಸುದರ್ಶನಃ ।**
**ತಸ್ಯಾಪತಿತಮಾತ್ರಸ್ಯ ಶರೇಣ ನತಪರ್ವಣಾ ॥ ೪೧ ॥**

**ಚಿಚ್ಛೇದ ನಾಗಮೂರ್ಧಾನಂ ಭಾರತಿರ್ಭೀಮವಿಕ್ರಮಃ ।**
**ಸೇನಾನೀರ್ವಿಜಯಃ ಶ್ರೀಮಾನ್ನಮುಚಿಶ್ಚ ಸಮಾಗತೌ ॥ ೪೨ ॥**

**ಸಾರಥಿಂ ತುರಗಾನ್ಕೇತುಮದೃಶ್ಯಂ ಚಕ್ರತುಃ ಶರೈಃ ।**
**ಅನ್ಯೋನ್ಯಸ್ಯ ಮಹಾರಾಜ ಸಮರೇ ಭೀಮವಿಕ್ರಮೌ ॥ ೪೩ ॥**

**ಚತುರ್ಭಿಃ ಸಾಯಕೈರ್ಹತ್ವಾ ನಮುಚೇಃ ಸ ತುರಂಗಮಾನ್ ।**
**ಪಂಚಮೇನ ಶಿರಃ ಕಾಯಾಜ್ಜಹಾರ ರಥಸಾರಥೇಃ ॥ ೪೪ ॥**

೪೧. ವೀರಬಾಹುವು ಮರೆಯಾದ ಮೇಲೆ, ತಕ್ಷನ ಮೇಲೆ ಯುದ್ಧಮಾಡಲು ಸುದರ್ಶನನೆಂಬ ಗಂಧರ್ವನು ಆನೆಯ ಮೇಲೆ ಸವಾರಿಮಾಡಿಕೊಂಡು ಬಂದು ತಕ್ಷನ ಮುಂದೆ ನಿಂತುಕೊಂಡನು. ಅವನು ಮುಂದೆ ನಿಂತೊಡನೆಯೇ ತಕ್ಷನು ಒಂದೇ ಬಾಣದಿಂದ ಅವನನ್ನು ಕೆಡಪಿಬಿಟ್ಟನು.

೪೨. ಆ ಬಳಿಕ ಅವನು ಕುಳಿತುಬಂದ ಆನೆಯ ತಲೆಯಮೇಲೆ ಒಂದೇಟು ಕೊಟ್ಟನು. ಆ ಕೂಡಲೆ ಆ ಆನೆಯ ತಲೆ ಒಡೆದು ಹೋಯಿತು. ಆಮೇಲೆ ತಕ್ಷನ ಮೇಲೆ ಯುದ್ಧಮಾಡಲಿಕ್ಕಾಗಿ ವಿಜಯ ಮತ್ತು ನಮುಚಿಗಳೆಂಬೀರ್ವರು ಗಂಧರ್ವ ಸೇನಾನಾಯಕರು ಬಂದರು.

೪೩. ಅವರಿಬ್ಬರೂ ರಥಾರೋಹಿಗಳಾಗಿ ಬಂದುದನ್ನು ನೋಡಿ ತಕ್ಷನು ತಕ್ಷಣವೇ ಬಾಣಗಳನ್ನು ಪ್ರಯೋಗಿಸಿ ವಿಜಯನ ಸಾರಥಿಯನ್ನೂ, ಅವನ ರಥಕ್ಕೆ ಕಟ್ಟಿದ್ದ ಕುದುರೆಗಳನ್ನೂ, ರಥದ ಮೇಲಿದ್ದ ಬಾವುಟವನ್ನೂ ಅದೃಶ್ಯ (ಕಣ್ಣಿಗೆ ಕಾಣದಂತೆ) ಮಾಡಿಬಿಟ್ಟನು. ಆ ಬಳಿಕ ಅವರಿಬ್ಬರಿಗೂ ಭಯಂಕರವಾದ ಕದನಕ್ಕಾರಂಭವಾಯಿತು.

೪೪. ವಿಜಯನು ಇಂತು ಸೋಲಲಾಗಿ ನಮುಚಿಯು ನಾಲ್ಕು ಕುದುರೆ ಸಾರೋಟಿನ ಮೇಲೆ ಬಂದು ಇವನ ಮೇಲೆರಗಿದನು. ಆಗ ತಕ್ಷನು ನಾಲ್ಕು ಬಾಣಗಳಿಂದ ಆ ರಥದ ಕುದುರೆಗಳನ್ನೂ ಐದನೆ ಬಾಣದಿಂದ ಸಾರಥಿಯ ತಲೆಯನ್ನೂ ತರಿದುಬಿಟ್ಟನು.

ನಮುಚಿರ್ನಿರಥಃ ಖಡ್ಗಮಾದಾಯ ಪರವೀರಹಾ ।
ಜಗಾಮಾಭಿಮುಖಸ್ತೂರ್ಣಂ ಸೇನಾಪತಿಮರಿಂದಮ ॥ ೪೫ ॥

ವೇಗೇನಾಪತತಸ್ತಸ್ಯ ಚಕ್ರಮಾದಾಯ ಭಾಸ್ವರಂ ।
ವಿವೃತ್ತಾಕ್ಷಂತು ಚಿಚ್ಛೇದ ತಸ್ಯ ಮೂರ್ಧಾನಮಂಜಸಾ ॥ ೪೬ ॥

ಭೂಮನ್ಯುಃ ಕಾಮಪಾಲಶ್ಚ ಚಕ್ರತುರ್ಯುದ್ಧಮುತ್ತಮಂ ।
ಯಥಾ ದೇವಾಸುರೇ ಯುದ್ಧೇ ಬಲಶಕ್ರೌ ಮಹಾಬಲೌ ॥ ೪೭ ॥

ತಾವುಭೌ ಕುಂಜರಾರೂಢೌ ಪರಸ್ಪರವಧೈಷಿಣೌ ।
ತೋಮರೈಶ್ಚಕ್ರತುರ್ಯುದ್ಧಂ ಸೂರ್ಯಾಂಶುಸದೃಶಪ್ರಭೈಃ ॥ ೪೮ ॥

೪೫. ನಮುಚಿಯು ಕೂಡಲೆ ರಥದಿಂದಿಳಿದು ಒಂದು ಖಡ್ಗವನ್ನು ಕೈಯಲ್ಲಿ ಹಿಡಿದು ಝಳಪಿಸುತ್ತಾ ತಕ್ಷನ ಸೇನಾಪತಿಯ ಮೇಲೆ ಬೀಳಲು ವೇಗವಾಗಿ ಓಂದನು.

೪೬. ಹೀಗೆ ಸೇನಾಧಿಪತಿಯ ಮೇಲೆ ವೇಗದಿಂದ ಬೀಳಲು ಹೊರಟ ಆ ವೀರಬಾಹುವನ್ನು ನೋಡಿ ತಕ್ಷನು, ಕಣ್ಣುಗಳನ್ನು ತಿರುಗಿಸುತ್ತಾ ನಿಂತಿದ್ದ ಅವನ ಮೇಲೆ ಒಂದು ಚಕ್ರವನ್ನು ಪ್ರಯೋಗಿಸಿ ಅವನ ತಲೆಯನ್ನು ಕತ್ತರಿಸಿಬಿಟ್ಟನು.

೪೭ ಈ ಯುದ್ಧವು ಹೀಗೆ ನಡೆಯುತ್ತಿರುವಲ್ಲಿ ಭೂಮನ್ಯುವೂ, ಕಾಮಪಾಲನೂ ಬಹಳ ಶ್ರೇಷ್ಠವಾದ ಯುದ್ಧಕ್ಕಾರಂಭಿಸಿದರು. ಇವರ ಯುದ್ಧವನ್ನು ನೋಡಿದರೆ ಹಿಂದೆ ದೇವಾಸುರರ ಯುದ್ಧವು ನಡೆದಾಗ ವೃತ್ರಾಸುರನಿಗೂ ಇಂದ್ರನಿಗೂ ನಡೆದ ಯುದ್ಧವು ನೆನಪಿಗೆ ಬರುತ್ತಿದ್ದಿತು.

೪೮. ಇಂತಹ ಘನಯುದ್ಧವನ್ನು ಮಾಡತೊಡಗಿದ ಭೂಮನ್ಯು ಕಾಮಪಾಲರುಗಳೀರ್ವರೂ ಆನೆಗಳ ಮೇಲೆ ಕುಳಿತುಕೊಂಡು ಪರಸ್ಪರ ವಧೈಷಿಗಳಾಗಿ, ಸೂರ್ಯಕಿರಣದಂತೆ ಪ್ರಕಾಶಮಾನವಾದ ತೋಮರಾಯುಧವನ್ನು ಹಿಡಿದು ಯುದ್ಧ ಮಾಡಲಾರಂಭಿಸಿದನು.

ಯುಧ್ಯತಾನೇನ ತೇಷಾಂ ತು ಭೂಮನ್ಯುರ್ವರವಾರಣಃ ।
ಪಾರ್ಶ್ವೇ ಜಘಾನ ದಂತಾಭ್ಯಾಂ ಕಾಮಪಾಲಸ್ಯ ವಾರಣಂ ॥ ೪೯ ॥

ಸಹಿತಸ್ತೇನ ನಾಗೇನ ಕೃತ್ವಾ ರಾವಂ ಭಯಾನಕಂ ॥ ೫೦ ॥

ಆಪೀತ್ಪರಾಙ್ಮುಖೋ ಯುದ್ಧೇ ವರ್ತಮಾನಃ ಸ್ವಕಂ ಬಲಂ ।
ಕಾಮಪಾಲಂ ರಣೇ ಜಿತ್ವಾ ಭೂಮನ್ಯುರ್ಭೀಮವಿಕ್ರಮಃ ॥ ೫೧ ॥

ಗಂಧರ್ವಸೇನಾಂ ಸಹಸಾ ಜಘಾನ ನಿಶಿತೈಃ ಶರೈಃ ।
ಕಿರಾತರಾಜಕೋ ದಮನಶ್ಚಂದ್ರಾಪೀಡಶ್ಚ ಸಂಗತೌ ॥ ೫೨ ॥

ಚಕ್ರತುಸ್ತುಮುಲಂ ಯುದ್ಧಂ ಸಮರೇ ರಥಧೂರ್ಗತೌ ।
ಚಂದ್ರಾಪೀಡಶರವ್ರಾತನಿಹತೌ ಪಾರ್ಷ್ಣಿಸಾರಥೀ ॥ ೫೩ ॥

---

೪೯. ಈ ರೀತಿ ಇವರಿಬ್ಬರಿಗೆ ಪರಸ್ಪರಯುದ್ಧವು ಪ್ರಾಪ್ತವಾಗಿರಲಾಗಿ ಭೂಮನ್ಯುವು ತಾನು ಕುಳಿತಿದ್ದ ಆನೆಯ ಕೊಂಬುಗಳಿಂದ ಕಾಮಪಾಲನ ಆನೆಯ ಪಕ್ಕ (ಪಾರ್ಶ್ವ) ವನ್ನು ಚುಚ್ಚಿಸಿದನು.

೫೦-೫೧. ಈ ರೀತಿಯಾಗಿ ಆ ಆನೆಯನ್ನು ಕೊಂಬಿನಿಂದ ತಿವಿದೊಡನೆಯೇ ಏಟುತಿಂದ ಆನೆಯು ಗಟ್ಟಿಯಾಗಿ ಕಿರಚಿಕೊಂಡಿತು. ಆಗ ಕಾಮಪಾಲನು ತನ್ನ ಸೈನ್ಯವು ಹೆದರಿ ಹಿಂತಿರುಗಿ ಹೋಗುತ್ತಿರುವುದನ್ನು ನೋಡಿ ಹೆದರಿ ಹಿಂತಿರುಗಿದ ತನ್ನ ಆನೆಯ ಮೇಲೆ, ತಾನೂ ಸೋತು ಓಡಿಹೋದನು.

೫೨. ಈರೀತಿ ಕಾಮಪಾಲನು ತನ್ನಿಂದ ಜಿತನಾಗಿ ಹೊರಟುಹೋದುದನ್ನು ನೋಡಿ ಭೂಮನ್ಯುವು, ತನ್ನ ಮುಂದೆ ನಿಂತಿದ್ದ ಅಪಾರವಾದ ಗಂಧರ್ವರಸೇನೆಯ ಮೇಲೆ ತೀಕ್ಷ್ಣವಾದ ಅನೇಕ ಬಾಣಗಳನ್ನು ಬಿಟ್ಟು ಅವರನ್ನು ಪೀಡಿಸಿದನು.

೫೩. ಆ ಬಳಿಕ ಕಿರಾತರಾಜನಾದ ದಮನನೂ, ಚಂದ್ರಾಪೀಡನೂ ಜೊತೆಯಾಗಿ ಆ ರಣಮುಖದಲ್ಲಿ ತುಮುಲಯುದ್ಧವನ್ನು ಮಾಡಲುಪಕ್ರಮಿಸಿದರು. ಆಗ ಚಂದ್ರಾಪೀಡನು ಬಾಣಗಳ ಗುಂಪಿನಿಂದ ದಮನನನ್ನೂ, ಅವನ ಸಾರಥಿಯನ್ನೂ ಪ್ರಹರಿಸಿದನು.

ಕಿರಾತರಾಜಟ್ಟ್ರೈರಂಗಾಣಾಂ ಸ್ವಯಂ ರಶ್ಮಿಗ್ರಹೋಽಭವತ್ ।
ವಿವ್ಯಾಧ ಸ ಶರವ್ರಾತೈಶ್ಚಂದ್ರಾಪೀಡಂ ರಣೇ ತದಾ ॥ ೫೪ ॥

ಚಂದ್ರಾಪೀಡಶರವ್ರಾತೈಃ ಕೃತಪೀಡೋ ರಣಾಜಿರೇ
ಜಘಾನ ತುರಗಾಸ್ತಸ್ಯ ದಮನಸ್ಯ ಮಹೀಪತೇಃ ॥ ೫೫ ॥

ಶಕ್ತ್ಯಾ ವೇಗಾಚ್ಚ ವಿವ್ಯಾಧ ತದಾ ತಂ ಭೀಮವಿಕ್ರಮಂ ।
ಶಕ್ತ್ಯಾ ವಿಭಿನ್ನಹೃದಯಃ ಪಪಾತ ವಸುಧಾತಲೇ ॥ ೫೬ ॥

ಜಘಾನ ಭರತಂ ಸೈನ್ಯಂ ಚಂದ್ರಾಪೀಡೋಽಪಿ ಸಾಯಕೈಃ ।
ಆರೋಪ್ಯ ಸ್ವರಥೇ ವೀರಂ ಮಧುಮಾರ್ ಪಮನಂ ತಥಾ ॥ ೫೭ ॥

---

೫೪. ಕಿರಾತರಾಜನಾದ ದಮನನು ಆ ಏಟನ್ನು ಸಹಿಸಿ ಆ ಬಳಿಕ ಚಂದ್ರಾಪೀಡನನ್ನೂ, ಅವನ ರಥದ ಕುದುರೆಗಳನ್ನೂ ತೀಕ್ಷ್ಣವಾದ ಬಾಣಧಾರೆಗಳಿಂದ ಪ್ರಹರಿಸಿದನು.

೫೫. ಆ ರಣರಂಗದಲ್ಲಿ ಈರೀತಿ ಚಂದ್ರಾಪೀಡನು ಪ್ರಹಾರವನ್ನು ತಿಂದು, ಅದನ್ನು ಸಹಿಸಿದವನಾಗಿ ದಮನರಾಜನ ಕುದುರೆಗಳ ಮೇಲೆ ಬಾಣಗಳನ್ನು ಬಿಟ್ಟನು.

೫೬. ಪೂರ್ವೋಕ್ತಪ್ರಕಾರವಾಗಿ ಬಿಡಲ್ಪಟ್ಟ ಚಂದ್ರಾಪೀಡನ ಬಾಣಗಳು ಮಹಾಪರಾಕ್ರಮಶಾಲಿಯಾದ ದಮನನನ್ನು ಕುರಿತು, ಬಹು ಶಕ್ತಿಯಿಂದಲೂ ವೇಗದಿಂದಲೂ ಬಂದು ಅವನ ವಕ್ಷಸ್ಥಳವನ್ನು ಭೇದಿಸಿ ಅವನನ್ನು ಭೂಮಿಗೆ ಕೆಡವಿಬಿಟ್ಟುವು.

೫೭. ಆ ಬಳಿಕ ಚಂದ್ರಾಪೀಡನು ಮತ್ತೆ ಕೆಲವು ಬಾಣಗಳನ್ನು ಬಿಲ್ಲಿಗೆ ಹೂಡಿ, ಭರತನ ಮಗನಾದ ತಕ್ಷನ ಸೈನ್ಯದ ಮೇಲೆ ಪ್ರಯೋಗಿಸಿದನು. ಇಂತು ಭರತನ ಸೈನ್ಯಕ್ಕೆ ಒದಗಿದ ವಿಪನ್ನಾವಸ್ಥೆಯನ್ನು ನೋಡಿ ಮಧುಮಂತನು, ದುಃಖಿತನಾಗಿ ಎದೆಯೊಡೆದು ಬಿದ್ದಿದ್ದ ದಮನನ್ನೆತ್ತಿ ತನ್ನ ರಥದ ಮೇಲೆ ಮಲಗಿಸಿಕೊಂಡನು.

ಚಕಾರ ವಿರುಜಂ ಶೀಘ್ರಮವ್ರಣಂ ಚ ಮಹೌಷಧೈಃ ।
ಯುಯುಧೇ ಚ ನಿಕುಂಭೇನ ಮತ್ಸ್ಯರಾಟ್ ಸರಥಸ್ತಥಾ ॥ ೫೮ ॥

ರಥಸ್ಥಿತೌ ಮಹಾವೀರೌ ವರಚಾಪಮಹಾಕರೌ ।
ಅನ್ಯೋಽನ್ಯಂ ಶರವರ್ಷೇಣ ಛಾದಯೇತಾಂ ಘನಾವಿವ ॥ ೫೯ ॥

ಸುರತಸ್ತು ನಿಕುಂಭಸ್ಯ ಶರೇಣ ನತಪರ್ವಣಾ ।
ಚಾಪಮುಷ್ಟೌ ಪ್ರಚಿಚ್ಛೇದ ಭುಜದಂಡಂ ತಥಾಽಹವೇ ॥ ೬೦ ॥

ನಿಕುಂಭೋಽಪಿ ಪ್ರಚಿಚ್ಛೇದ ಸುರಥಸ್ಯ ತು ಕಾರ್ಮುಕಂ ।
ತಾವನ್ಯೇ ಧನುಷೀ ಸಜ್ಯೇ ಕೃತ್ವಾ ವೀರೌ ಪರಸ್ಪರಂ ॥ ೬೧ ॥

---

೫೮. ಪರಮಕಾರುಣಿಕನಾದ ಮಧುಮಂತನು ದಮನನನ್ನು ನೋಡಿ ಮರುಗುತ್ತಾ, ಮಹೌಷಧಗಳನ್ನು ತಂಸಿ ಅವನ ಮೈಗೆ ಲೇಪಿಸಿ ಬಲು ಜಾಗ್ರತೆಯಾಗಿ ಅವನ ಮೈಮೇಲಿನ ಗಾಯಗಳನ್ನೆಲ್ಲಾ ವಾಸಿಮಾಡಿದನು.

೫೯. ಇತ್ತಕಡೆ ದಮನನ ಚಿಕಿತ್ಸೆಯು ನಡೆಯಿರಲು ಅತ್ತಕಡೆ ರಣರಂಗದಲ್ಲಿ ಮತ್ಸ್ಯರಾಜನಾದ ಸುರಥನು, ನಿಕುಂಭನೊಡನೆ ಸಮರದಲ್ಲಿ ಸೆಣಸಲು ನಿಂತನು. ಈ ರೀತಿ ಆ ವೀರರೀರ್ವರೂ ಜೋಡಿಮಾಡಿಕೊಂಡು ರಥದ ಮೇಲೆ ಕುಳಿತೇ ಧನುಸ್ಸಿನಿಂದ ಹೂಡಿದ ಬಾಣವರ್ಷಗಳನ್ನು ಪರಸ್ಪರ ಪ್ರಯೋಗಿಸುತ್ತಿದ್ದರು.

೬೦. ಈರ್ವರ ಬಾಣಪರಂಪರೆಗಳೂ ಒಂದನ್ನೊಂದು ಕತ್ತರಿಸುವುದನ್ನು ನೋಡಿದರೆ, ಮೋಡಕ್ಕೆ ಮೋಡ ತಗುಲಿ ಮಿಂಚುಂಟಾದಂತೆ ತೋರುತ್ತಿತ್ತು.

೬೧. ಇಂತು ಪ್ರಕಾಶಿಸುತ್ತಿದ್ದ ರಣಮುಖದಲ್ಲಿ ಸುರಥನು ತನ್ನ ಬಿಲ್ಲನ್ನು ಬಲವಾಗಿ ಬಗ್ಗಿಸಿ, ಅದರಲ್ಲಿ ಬಾಣವನ್ನು ತೊಡಿಸಿ ಅದನ್ನು ನಿಕುಂಭನ ಭುಜಕ್ಕೆ ಗುರಿಯಿಟ್ಟು ಪ್ರಯೋಗಿಸಲು. ಆ ಬಾಣವು ವೇಗವೆಂದೋಡಿ ಆ ನಿಕುಂಭನ ಕೈಯಲ್ಲಿದ್ದ ಭುಜದಂಡದಂತಿದ್ದ ಧನುವನ್ನು ಕತ್ತರಿಸಿ ಕೆಡವಿಬಿಟ್ಟಿತು. ಆ ಕೂಡಲೆ ನಿಕುಂಭನೂ ಸಹ ಸುರಥನ ಕಾರ್ಮುಕವನ್ನು ತಾನು ಕತ್ತರಿಸಿ ಕೆಡಹಿದನು. ಈ ರೀತಿಯಾಗಿ ಇಬ್ಬರ ಕೈಗಳಲ್ಲೂ ಇದ್ದ ಬಿಲ್ಲುಗಳು ನಾಶವಾಗಿ ಹೋಗಲೊಡನೆಯೇ ಅವರಿಬ್ಬರೂ ಬೇರೆ ಬೇರೆ ಧನುಸ್ಸುಗಳನ್ನು ತಮ್ಮ ತಮ್ಮ ಹಸ್ತಗಳಲ್ಲಿ ಪುನಃ ಧರಿಸಿ ಪರಸ್ಪರ ಜಯೈಷಿಗಳಾಗಿ ಸಮರಕ್ಕೆ ತೊಡಗಿದರು.

**ಛಾದಯೇತಾಂ ತಥಾನ್ಯೋಽನ್ಯಂ ವೀರೌ ಸಾಯಕವೃಷ್ಟಿಭಿಃ ।**
**ಅನ್ಯೋಽನ್ಯಸ್ಯ ಹಯಾನ್ಹತ್ವಾ ಚಿಚ್ಛೇದ ಧನುಷೀ ತತಃ ॥ ೬೨ ॥**

**ಹಯಾನ್ರಥಾಭ್ಯಾಂ ಕಾಲಸ್ಯ ನಿರ್ಜಿತ್ಯಾವಶವೋಜಸಾ ।**
**ಧನುಷೋ ಮಧ್ಯಭಾಗೇ ತು ಅನ್ಯೋಽನ್ಯಸ್ಯ ಸ್ಯಕ್ರಂತತಾಂ ॥ ೬೩ ॥**

**ವಿರಥಾವಸಿಯುದ್ಧಾಯ ಚಕ್ರತುರ್ಯತ್ನಮುತ್ತಮಂ ।**
**ಆದಾಯ ವಿಪುಲಂ ಚರ್ಮ ಶತಚಂದ್ರಂ ಚ ಭಾಸ್ವರಂ ॥ ೬೪ ॥**

---

೬೨. ಈ ರೀತಿ ಚಾಪಾಂತರಗಳಂ ಸ್ವೀಕರಿಸಿದ ಆಹವಮಲ್ಲರೀರ್ವರೂ ಅನ್ಯೋನ್ಯವಾಗಿ ಬಹಳ ಹೊತ್ತು ಯುದ್ಧಮಾಡಿ ಪರಸ್ಪರನಾದ ತುರಗಗಳಂ ತಂದು ಸುಮರಕ್ರೀಡಾನಿರತರಾಗಿದ್ದು, ಆ ಬಳಿಕ ಮೊದಲಿನಂತೆಯೇ ಪರಸ್ಪರವಾಗಿ ತಮ್ಮ ತಮ್ಮ ಹಸ್ತಾಲಂಕಾರಪ್ರಾಯವಾಗಿದ್ದ ಶರಾಸನಗಳನ್ನು ಭೇದಿಸಿಬಿಟ್ಟರು.

೬೩. ಎರಡು ಕಡೆಯ ರಥಗಳಿಗೂ ಕಟ್ಟಿದ್ದ ಕುದುರೆಗಳು ಕಾಲನ ಮನೆಯನ್ನು ಸೇರಲು ಮೇಲೆ ವಿವರಿಸಿದಂತೆ ಧನುಸ್ಸುಗಳೆರಡೂ ಮಧ್ಯಭಾಗವಲ್ಲಿ ಕತ್ತರಿಸಲ್ಪಟ್ಟುವು.

(ಇಲ್ಲಿ ಈ ವಿಚಾರವನ್ನು ದ್ವಿರುಕ್ತಿಯಾಗಿ ಹೇಳಿದ್ದಾರೆ. ಇಂತಹ ದ್ವಿರುಕ್ತಿಗಳು ಈ ಪುರಾಣದಲ್ಲನೇಕ ಕಡೆ ವಿವರಿಸಲ್ಪಟ್ಟಿದೆಯಾದರೂ, ಇದು ಸಾಕ್ಷಾದ್ವ್ಯಾಸರ ಮುಖದಿಂದಲೇ ಹೊರಟಿರುವುದರಿಂದ ಇದರ ವಿಚಾರವಾಗಿ ಯಾರೂ ಬಾಯೆತ್ತುವಂತಿಲ್ಲ. ಟೀಕಾಕಾರನಾದ ನಾನಾದರೂ ವ್ಯಾಸರಿಗೆ ಕೈಜೋಡಿಸಿ ಬೇಡಿಕೊಳ್ಳುತ್ತಾ ಅವರನ್ನೇ ಧ್ಯಾನಿಸುತ್ತಾ, ಅವರ ಮಾತನ್ನೇ ಪುನಃ ಪುನಃ ಲೇಖನಿಯಲ್ಲಿ ತುಂಬಿ ಈ ನನ್ನ ಲೇಖನವನ್ನೋಡಿಸುತ್ತ ಬರುವೆನು. )

೬೪. ಈರೀತಿ ಆ ಧನ್ವಿಗಳೀರ್ವರೂ ವಿಧನ್ವಿಗಳಾಗಿ ವಿರಥರಾಗಿ ಭೂಮಿಯ ಮೇಲೆ ನಿಂತುಕೊಂಡು ಕತ್ತಿಗಳನ್ನು ಕೈಯಲ್ಲಿ ಹಿಡಿದು ಯುದ್ಧಾರಂಭಮಾಡಿದರು. ನೂರು ಚಂದ್ರರಂತೆ ಪ್ರಕಾಶಮಾನವಾದ ಖಡ್ಗಗಳನ್ನು ಕೈಗೆ ತೆಗೆದುಕೊಂಡೊಡನೆಯೇ ಆ ವೀರರಿಬ್ಬರೂ ಮತ್ತೊಂದು ಕೈಯಲ್ಲಿ ವಿಸ್ತಾರವಾದ ಚರ್ಮದಿಂದ ಮಾಡಿದ ಗುರಾಣಿಗಳನ್ನು ಹಿಡಿದುನಿಂತರು.

ಆದಧಾತೇ ಖಡ್ಗವರಾವನ್ಯೋಽನ್ಯವಧಕಾಂಕ್ಷಿಣೌ ।
ಖಡ್ಗಮಾಕಾರಸದೃಶಮನ್ಯೋಽನ್ಯಂ ಪ್ರವಿಜಘ್ನತುಃ ॥ ೭೫ ॥

ಮಂಡಲಾನಿ ವಿಚಿತ್ರಾಣಿ ಗತಪ್ರತ್ಯಾಗತಾನಿ ಚ ।
ಕೈಶಿಕಾನಿ ತು ಮಾರ್ಗಾಣಿ ದರ್ಶಯಾಮಾಸತುಸ್ತದಾ ॥ ೭೬ ॥

ಭ್ರಾಂತಮುದ್ಭ್ರಾಂತಮಾವಿದ್ಧಮಾಪ್ಲುತಂ ವಿಪ್ಲುತಂ ಸೃತಂ ।
ಸಂಪಾತಂ ಸಮುದೀರ್ಣಂ ಚ ಖಡ್ಗಚರ್ಮವಿಚಾರಣಂ ॥ ೭೭ ॥

ಈಕ್ಷಿತೃಪ್ರೀತಿಜನನಂ ಯುದ್ಧಮಾಸೀತ್ತಯೋಸ್ತದಾ ।
ಕೃತ್ವಾ ತೌ ಸುಚಿರಂ ಯುದ್ಧಂ ಪರಸ್ಪರರಣೇ ಹತೌ ॥ ೭೮ ॥

---

೭೫. ಅನ್ಯೋನ್ಯವಧೆಯನ್ನಪೇಕ್ಷಿಸುತ್ತಾ ಆ ವೀರರೀರ್ವರೂ ಖಡ್ಗಾಖಡಿ ಯುದ್ಧಕ್ಕುಪಕ್ರಮಿಸಿದರು. ಪರಸ್ಪರ ಹೊಡೆದಾಟಕ್ಕೆ ಆರಂಭವಾಯಿತು.

೭೬. ಕತ್ತಿಗಳನ್ನು ವರಸೆವರಸೆಯಾಗಿ ತಿರುಗಿಸುತ್ತಾ ಮಂಡಲಾಕಾರವಾಗಿ (ದುಂಡಗೆ)ಸುತ್ತಾಡುತ್ತಾ ಒಬ್ಬರ ಕತ್ತಿಯ ಏಟನ್ನು ಮತ್ತೊಬ್ಬರು ತಪ್ಪಿಸಿಕೊಳ್ಳುತ್ತಾ ಕೈಶಿಕಾದಿ ಯುದ್ಧಶಿಕ್ಷಣಮಾರ್ಗವನ್ನು ಆಗಲೀಗ ಪರಸ್ಪರ ಚೆನ್ನಾಗಿ ಪ್ರದರ್ಶಿಸಿದವರಾದರು.

೭೭. ಆ ಕೈಶಿಕಾದಿ ಯುದ್ಧಕ್ರಮವೆಂತೆಂದೊಡೆ :- ಭ್ರಾಂತನಾದವನಂತೆಯೂ, ಉದ್ಭ್ರಾಂತನಾದವನಂತೆಯೂ, ಬಗ್ಗಿದವನಂತೆಯೂ, ಎದ್ದವನಂತೆಯೂ, ಗುರಿಗೆ ಸಿಕ್ಕಿದವನಂತೆಯೂ, ಗುರಿಗೆ ಜಾರಿದವನಂತೆಯೂ, ಬಿದ್ದವನಂತೆಯೂ, ಗುರಿಗೆ ಜಾರಿದವನಂತೆಯೂ, ಬಿದ್ದವನಂತೆಯೂ, ಹಾರಿದವನಂತೆಯೂ ತೋರಿಸುತ್ತಾ ಎದುರಾಳಿಗೆ ಸಿಕ್ಕಿದಂತೆ ಬಹು ಚಮತ್ಕಾರವಾಗಿ ಕತ್ತೀವರಸೆ (ತಿರುಗಿಸುವ) ಮಾಡುವ ಕ್ರಮವೇ ಕೈಶಿಕಾದಿಮಾರ್ಗ, ಹೀಗೆ ನಡೆದ ಯುದ್ಧದಲ್ಲಿ ಕತ್ತಿಯು ಗುರಾಣಿಯಮೇಲೆ ತಗಲುತ್ತಿದ್ದ ಏಟಿನ ಶಬ್ದವು ಬಹು ಭಯಂಕರವಾಗಿ ತೋರುತ್ತಿತ್ತು.

೭೮. ಅವರಿಬ್ಬರಗೂ ನಡೆಯುತ್ತಿದ್ದ ಆ ಯುದ್ಧಕ್ರಮವನ್ನು ನೋಡಿದ ಯುದ್ಧಶಾಸ್ತ್ರಪ್ರವೀಣರಿಗೆ ಬಹಳ ಕುತೂಹಲವುಂಟಾಗುತ್ತಿದ್ದಿತು. ಹೀಗೆ ಮನೋಹರವಾದ ಯುದ್ಧವನ್ನು ಮಾಡಿ ಆ ವೀರರೀರ್ವರೂ ಪರಸ್ಪರ ಹೊಡೆದಾಡಿ ಭೂಮಿಯಲ್ಲಿ ಬಿದ್ದು ಬಿಟ್ಟರು

ಜಗ್ಮತುರ್ವಸುಧಾಂ ವೇಗಾಚ್ಛಕ್ರಚಾಪಸಮಪ್ರಭೌ ।
ತತಃ ಸ್ವರಥಮಾರೋಪ್ಯ ಸುರಥೋ ರಥಿವರ್ಧನಃ ॥ ೬೯ ॥

ತಸ್ಮಾದ್ದೇಶಾದಪಕ್ರಾಮ್ಯ ಸರ್ವಸೈನ್ಯಸ್ಯ ಪಶ್ಯತಃ ।
ನಿಕುಂಭೇ ಚಾಥ ಸಮರೇ ಸುರಥೇನ ತದಾ ರುಷಾ ॥ ೭೦ ॥

ಗೋವಾಸನೇನ ಸಾಲ್ವೇನ ತ್ವರಮಾಣಃ ಸಮಾಗತಃ ।
ಬಾಣಜಾಲೇನ ಸಮರೇ ಚಕ್ರಾತೇಯುರ್ಯುದ್ಧಂ ಸುಭೈರವಂ ॥ ೭೧ ॥

ತಾವುಭೌ ರಥಗೌ ವೀರೌ ರೇಜತುರ್ದಿವ್ಯಧನ್ವಿನೌ ।
ತತಕ್ಷತುಃ ಶರವ್ರಾತೈಸ್ತದಾಽನ್ಯೋಽನ್ಯಂ ತಥಾನ್ವಿತೌ ॥ ೭೨ ॥

---

೬೯. ಅವರು ಬಗ್ಗಿ ಭೂಮಿಗೆ ಬಿದ್ದುದನ್ನು ನೋಡಿದರೆ ಇಂದ್ರಧನುಸ್ಸು (ಕಾಮನಬಿಲ್ಲು) ಆಕಾಶದಿಂದ ಕಳಚಿಕೊಂಡು ಕೆಳಕ್ಕೆ ಬೀಳುತ್ತಲಿದೆಯೋ ಎಂಬಂತೆ ಕಾಣುತ್ತಿತ್ತು. ಇವರಿಬ್ಬರ ಯುದ್ಧವೂ ಈರೀತಿ ತೀರಿಹೋದನಂತರ, ಆ ರಣಾಂಗಣಕ್ಕೆ ರಥಿಕರೊಳಗೆ ಮಹಾರಥಿಯೆನಿಸಿಕೊಂಡು ಪ್ರಸಿದ್ಧನಾಗಿದ್ದ ಸುರಥನೆಂಬುವನು ತನ್ನ ರಥದಲ್ಲಿ ಕುಳಿತುಕೊಂಡು ಪ್ರವೇಶಿಸಿದನು.

೭೦. ಈರೀತಿ ಯುದ್ಧರಂಗದಲ್ಲಿಳಿದ ಸುರಥನನ್ನು ನೋಡಿದೊಡನೆಯೇ ಎಲ್ಲರೂ ನೋಡುನೋಡುತ್ತಿದ್ದಂತೆ ಆ ಸುರಥನೊಡನೆ ಕಾಳಗವಾಡಲು ನಿಕುಂಭನೆಂಬ ಬಲಶಾಲಿಯು ಅತಿವೇಗದಿಂದ ಪ್ರವೇಶಿಸಿದನು.

೭೧. ಇದೇ ಸಮಯದಲ್ಲಿಯೇ ಗೋವಾಸನನೆಂಬ ಗಂಧರ್ವನೂ, ಸಾಲ್ವರಾಜನೂ ಪರಸ್ಪರ ಯುದ್ಧೋತ್ಸುಕರಾಗಿ ಸಮರಭೂಮಿಯಲ್ಲಿ ಕಾಣಿಸಿಕೊಂಡರು.

೭೨. ಹೀಗೆ ಒಂದೇ ಬಾರಿ ಸೇರಿದ ಆ ಎರಡು ಜೋಡಿ ವೀರರೂ ಅನ್ಯೋನ್ಯವಾಗಿ ರಥಗಳ ಮೇಲೆ ಕುಳಿತು ಧನುಸ್ಸಿನಲ್ಲಿ ಬಾಣಗಳನ್ನನುಸಂಧಾನಮಾಡಿ ಎದುರಾಳಿಗಳ ಮೇಲೆ ತಡವಿಲ್ಲದೆ ಎಡಬಿಡದೆ ಬಾಣವರ್ಷಗಳನ್ನು ಸುರಿಸಿದರು.

**ಅನ್ಯೋನ್ಯಸ್ಯ ಹಯಾನ್ಹತ್ವಾ ಛಿತ್ವಾ ಚ ಧನುಷೀ ತಥಾ ।**
**ವಿರಥೌ ಚಕ್ರತುರ್ಯುದ್ಧಂ ಗದಾಭಿರಿತರೇತರಂ　　॥ ೭೩ ॥**

**ವಿಚೇರತುಸ್ತೌ ಸಂಗ್ರಾಮೇ ಗದಾಹಸ್ತೌ ಮದೋದ್ಧತೌ ।**
**ವಾಸಿತಾರ್ಥೇ ವನೇ ಮತ್ತೌ ಕುಂಜರಾವಿವ ಯೂಥಪೌ　　॥ ೭೪ ॥**

**ಸುಚಿರಂ ತೌ ತದಾ ಯುದ್ಧಂ ಕೃತ್ವಾ ವ್ಯಾಯಾಮಕರ್ಷಿತೌ ।**
**ಪ್ರಹಾರವರಸಂತಪ್ತೌ ಜಗ್ಮತುರ್ವಸುಧಾತಲಂ　　॥ ೭೫ ॥**

**ವಿಹ್ವಲೌ ರಥಯೋಃ ಕೃತ್ವಾ ನೀತೌ ತೌ ಸ್ವಸ್ವಸೈನಿಕೈಃ ।**
**ವಿರುಜೌ ಚ ಕೃತೌ ಭೂಯೋ ರಣಶೀರ್ಷಮುಪಾಗತೌ　　॥ ೭೬ ॥**

---

೭೩. ಹೀಗೆ ಜೋಡಿಜೋಡಿಯಾಗಿ ಸೇರಿಕೊಂಡು ವೀರಯೋದ್ಧೃದ್ವಯವೂ ಸಹ ಅನ್ಯೋನ್ಯರಥದ ಕುದುರೆಗಳನ್ನು ಕೊಂದು ಪರಸ್ಪರ ಬಿಲ್ಲುಗಳನ್ನು ತುಂಡು ತುಂಡುಮಾಡಿ, ಅನ್ಯೋನ್ಯರಥಗಳನ್ನು ಪುಡಿಪುಡಿಮಾಡಿ ವಿರಥರಾಗಿ ವಿಧನ್ವರಾಗಿ ಕೆಳಗೆ ನಿಂತುಕೊಂಡು ಪರಸ್ಪರವಾಗಿ ಗದಾಯುದ್ಧಕ್ಕಾರಂಭಿಸಿದರು.

೭೪. ಮದೋನ್ಮತ್ತರಾದ ಆ ವೀರರೀರ್ವರೂ ಸಮರಾಂಗಣದಲ್ಲಿ ಗದೆಯನ್ನು ತಿರುಗಿಸುತ್ತಾ, ಕಾಡಿನಲ್ಲಿ ಸ್ವಚ್ಛಂದವಾಗಿ ತಿರುಗುತ್ತಿರುವ ಮದಗಜಗಳಂತೆ ಮಂಡಲಾಕಾರವಾಗಿ ಸುತ್ತುತ್ತಿದ್ದರು.

೭೫. ಬಹು ಕಾಲ ಗದೆಯನ್ನು ತಿರುಗಿಸಿದಾಗ್ಯೂ ಒಬ್ಬರಿಗೊಬ್ಬರು ಸೋಲದೆ ಇರಲು, ಆ ಗದೆಗಳನ್ನತ್ತ ಬಿಸುಟು, ವ್ಯಾಯಾಮ ಯುದ್ಧ (ಕುಸ್ತಿ) ವನ್ನಾರಂಭಿಸಿದವರಾಗಿ ನಾನಾವಿಧವಾದ ಪಟ್ಟುಗಳಿಂದ ಒಬ್ಬರನ್ನೊಬ್ಬರು ಹೊಡೆದಾಡಿ ಕಡೆಗೆ ವೀರದ್ವಯರೂ ಭೂಮಿಯಲ್ಲುರುಳಿಬಿದ್ದರು.

೭೬. ಹೀಗೆ ಆ ಎರಡು ಜೋಡಿಯೂ ನಿಶ್ಚೇಷ್ಟಿತರಾಗಿ ಭೂಮಿಯಲ್ಲಿ ಬಿದ್ದುದನ್ನು ನೋಡಿ, ಅವರವರ ಕಡೆಯ ಬಂಧುಗಳು ರಥಗಳನ್ನು ತೆಗೆದುಕೊಂಡು ಬಂದು ಅವರನ್ನೆಲ್ಲಾ ಎತ್ತಿ ರಥದಮೇಲೆ ಮಲಗಿಸಿಕೊಂಡು ಶಿಬಿರಕ್ಕೆ ಕರೆದುಕೊಂಡು ಹೋಗಿ ಗಾಯಗಳಿಗೂ, ಮೈನೋವುಗಳಿಗೂ ಔಷಧವನ್ನು ಹಚ್ಚಿ ಚಿಕಿತ್ಸೆಮಾಡಿ ಗುಣಮಾಡಿದರು. ಈರೀತಿ ಆ ವೀರರು ಚೇತರಿಸಿಕೊಂಡೊಡನೆಯೇ ಪುನಃ ಲಕ್ಷ್ಯವಿಲ್ಲದೆ ಯುದ್ಧಕ್ಕೆ ನುಗ್ಗಿದರು.

ಪ್ರಭದ್ರಕಶ್ಚ ಸಂಗ್ರಾಮಂ ಚಕಾರಾಜಗರೇಣ ಚ ।
ಈಕ್ಷಿತೃಪ್ರೀತಿಜನನಂ ಶರಸಂಛಾದಿತಾಂಬರಂ ॥ ೭೭ ॥

ಸಂಮುಖೇ ವರ್ತಮಾನಸ್ಯ ತದಾ ರಾಜಾ ಪ್ರಭದ್ರಕಃ ।
ಚಿಚ್ಛೇದಾಜಗರಸ್ಯಾಜೌ ಶಿರೋ ಜ್ವಲಿತಕುಂಡಲಂ ॥ ೭೮ ॥

ಮಹೋದಯಃ ಕುಣಿರ್ದೇಶೋ ಹರಿಕೇಶಸ್ಯ ಸಂಯುಗೇ ।
ಗಜೇನ ಪ್ರೋಥಯಾಮಾಸ ಸುರಘ್ನಂ ರಥಸಾರಥಿಂ ॥ ೭೯ ॥

ಹತಾಶ್ವರಥಮುತ್ಸೃಜ್ಯ ಗದಯಾ ಸುದೃಢಂ ರಣೇ ।
ಹರಿಕೇಶಂ ಮಹಾಬಾಹುಂ ಚಕಾರ ಗತಜೀವಿತಂ ॥ ೮೦ ॥

ತ್ರೈಗರ್ತೋ ವಸುಧಾನಶ್ಚ ಸೂರ್ಯರಶ್ಮಿಶ್ಚ ಸಂಗತೌ ।
ಚಕ್ರತುಸ್ತುಮುಲಂ ಯುದ್ಧಂ ಬಲಿಶಕ್ರಾವಿವಾಪರೌ ॥ ೮೧ ॥

---

೭೭. ಪ್ರಭದ್ರಕನೆಂಬುವನು ಅಜಗರನೆಂಬ ಗಂಧರ್ವನೊಡನೆ ಯುದ್ಧವನ್ನು ಹೂಡಿದನು. ಅವರಿಬ್ಬರೂ ಪರಸ್ಪರ ಬಾಣಗಳ ಮಳೆಗಳನ್ನು ಕರೆಯುತ್ತಾ ಯುದ್ಧ ಮಾಡುತ್ತಿದ್ದ ನೋಟವು ನೋಟಕರ ಹರ್ಷವನ್ನಿಮ್ಮಡಿಮಾಡುತ್ತಿದ್ದಿತು.

೭೮. ಪ್ರಭದ್ರಕನು ತನ್ನೊಡನೆ ಚಮತ್ಕಾರವಾಗಿ ಯುದ್ಧಮಾಡುತ್ತಲಿದ್ದ ತನ್ನ ಅಭಿಮುಖನಾಗಿ ನಿಂತಿದ್ದ ಅಜಗರ ಗಂಧರ್ವನ ಶಿರಸ್ಸನ್ನು ಕುಂಡಲಸಹಿತವಾಗಿ ಬಾಣದಿಂದ ಕತ್ತರಿಸಿ ಕೆಡಹಿದನು.

೭೯. ಮಹೋದಯನು ಹರಿಕೇಶನೊಡನೆ ಯುದ್ಧವನ್ನಾರಂಭಿಸಿ, ರಥ ಮತ್ತು ಸಾರಥಿ ಸಹಿತನಾಗಿ ನಿಂತಿದ್ದ, ಸುರಘ್ನನಾದ ಹರಿಕೇಶನನ್ನು ಆನೆಯಿಂದ ತುಳಿಸಿದನು.

೮೦. ಆಗ ಮಹೋದಯನು ಪುನಃ ಮತ್ತೊಂದಾವರ್ತಿ ಹರಿಕೇಶನನ್ನು ಮುತ್ತಿ, ನೆಲದ ಮೇಲೆ ನಿಂತು ಬಲಗೈಯಲ್ಲಿ ಯುದ್ಧಮಾಡುತ್ತಿದ್ದ ಆ ಹರಿಕೇಶನನ್ನು ಹೊಡೆದುರುಳಿಸಿದನು.

೮೧. ತ್ರೈಗರ್ತದೇಶಾಧೀಶ್ವರನಾದ ವಸುಧಾನನು ಸೂರ್ಯರಶ್ಮಿಯೆಂಬ ಗಂಧರ್ವನೊಡನೆ ಯುದ್ಧಮಾಡಲಾರಂಭಿಸಿ, ಅವರಿಬ್ಬರೂ ಬಲಿ, ಮತ್ತು ಇಂದ್ರರು ಸೇರಿ ಮಾಡಿದಂತಹ ಯುದ್ಧವನ್ನು ಮಾಡಿದರು.

ಕೃತ್ವಾ ತೌ ಸುಚಿರಂ ಯುದ್ಧಂ ಪರಸ್ಪರಸಮಾಹತೌ ।
ವಿಚೇತಸೌ ರಥೋಪಸ್ಥೇ ನಿಷೇದತುರರಿಂದಮೌ ॥ ೮೨ ॥

ವಿಸಂಜ್ಞೌ ತು ತದಾ ನೀತೌ ಸಾರಥಿಭ್ಯಾಂ ರಣಾಜಿರಾತ್ ।
ಗಂಧರ್ವಃ ಕುಮುದಾಪೀಡಃ ಕುಲೂತಾಧಿಪತಿರ್ಜಯಃ ॥ ೮೩ ॥

ಚಕ್ರತುಸ್ತುಮುಲಂ ಯುದ್ಧಂ ದೇವಾಸುರಸಮಂ ತದಾ ।
ಅನ್ಯೋಽನ್ಯಸ್ಯ ಹಯಾನ್ಹತ್ವಾ ಛಿತ್ವಾ ಚ ಧನುಷೀ ದೃಢೇ ॥ ೮೪ ॥

ಖಡ್ಗಯುದ್ಧಂ ಚಿರಂ ಕೃತ್ವಾ ಛಿನ್ನಖಡ್ಗೌ ಪರಸ್ಪರಂ ।
ನಿಯುದ್ಧಂ ಚಕ್ರತುರ್ವೀರೌ ಬಾಹುದ್ರವಿಣಶಾಲಿನೌ ॥ ೮೫ ॥

೮೨. ಈರೀತಿ ಇವರಿಬ್ಬರೂ ಬಹಳ ಹೊತ್ತು ರಣಾಂಗಣದಲ್ಲಿ ಯುದ್ಧಮಾಡಿದಾಗ್ಯೂ ಒಬ್ಬರೂ ಸೋಲದೆ ಇದ್ದು ಕಡೆಗೆ ಬಹಳ ಬಹಳ ಕಾದಾಡಿ ದಣಿದು ಇಬ್ಬರೂ ಪ್ರಜ್ಞಾಹೀನರಾಗಿ ನೆಲದಮೇಲೆ ಬಿದ್ದುಬಿಟ್ಟರು.

೮೩. ಈರೀತಿ ಜ್ಞಾನಸಹೀನರಾಗಿ ಬಿದ್ದಿದ್ದ ಅವರನ್ನು ಅವರ ಸಾರಥಿಗಳು ಹಿಡಿದು ಮೇಲಕ್ಕೆತ್ತಿ ತಮ್ಮ ತಮ್ಮ ರಥಗಳ ಮೇಲೆ ಕುಳ್ಳಿರಿಸಿಕೊಂಡು ಔಷಧೋಪಚಾರಗಳಿಂದ ಪ್ರಜ್ಞಾವಂತರನ್ನಾಗಿಮಾಡಿದರು.

೮೪. ಕುಮುದಾಪೀಡನೆಂಬ ಗಂಧರ್ವನೂ, ಕುಲೂಕಾಧಿಪತಿಯಾದ ಜಯನೂ ಸಹ ದೇವಾಸುರ ಸಂಗ್ರಾಮವನ್ನು ಹೋಲುವ ತುಮುಲಯುದ್ಧವನ್ನಾರಂಭಿಸಿದರು. ಆವರಿಬ್ಬರೂ ಒಬ್ಬರ ಕುದುರೆಯನ್ನು ಮತ್ತೊಬ್ಬರು ಕೊಂದು, ಒಬ್ಬೊಬ್ಬರ ಧನುಸ್ಸನ್ನು ಮತ್ತೊಬ್ಬರು ಮುರಿದು ಖಡ್ಗಯುದ್ಧವನ್ನಾರಂಭಿಸಿದರು.

೮೫. ಈರೀತಿ ಬಹಳ ಹೊತ್ತು ಕತ್ತೀವರಸೆಯಿಂದ ಕಾದಾಡಿ ಇಬ್ಬರೂ ತಮ್ಮ ತಮ್ಮ ಕತ್ತಿಗಳನ್ನು ಮುರಿದುಕೊಂಡು, ಆ ಬಳಿಕ ಬಾಹೂಬಾಹವಿಯುದ್ಧವನ್ನು ಮಾಡಿ ದಣಿದುಹೋದರು.

ನಿಯುದ್ಧಸ್ಯಾವಸಾನೇ ತು ಕುಲೂತಾಧಿಪತಿಂ ಜಯಂ ।
ಗಂಧರ್ವಃ ಕುಮುದಾಪೀಡೋ ನಿಷ್ಪಿಪೇಷ ಮಹೀತಲೇ ॥ ೮೬ ॥

ತತಃ ಖಡ್ಗಂ ರಯಾದ್ಗೃಹ್ಯ ಶಿರಶ್ಛೇತ್ತುಂ ಸಮುದ್ಯತಃ ।
ನೃಶಂಸಂ ತಂ ಸಮಾಲೋಚ್ಯ ಸೇನಾಪತಿಮರಿಂದಮ ॥ ೮೭ ॥

ವಿಜಯಸ್ತಸ್ಯ ಮೂರ್ಧಾನಂ ಪಾತಯಾಮಾಸ ಭೂತಲೇ ।
ದಾಶೇರಕಸ್ತಥಾ ರಾಜಾ ಯಶ್ಚ ಗೋವಾಶನೇಶನಃ ॥ ೮೮ ॥

ಏಕಲವ್ಯಸ್ಯ ಸಂಗ್ರಾಮಂ ತೈರಾಸೀತ್ಸುಮಹಾತ್ಮನಃ ।
ತಸ್ಯೈಕಲವ್ಯಸ್ತುರಗಾನ್ಜಘಾನಾಥ ಶಿಲೀಮುಖೈಃ ॥ ೮೯ ॥

---

೮೬. ಹೀಗೆ ತೋಳುಗಳ ಯುದ್ಧದಲ್ಲಿ ಅವರಿಬ್ಬರೂ ಬಳಲಿದ ಬಳಿಕ ಕುಮುದಾಪೀಡನೆಂಬ ಆ ಗಂಧರ್ವನು ಕುಲೂತಾಧಿಪತಿಯಾದ ಜಯನನ್ನು ಯುದ್ಧಭೂಮಿಯಲ್ಲಿ ಕೆಡವಿ ಅರೆದುಬಿಟ್ಟನು.

೮೭. ಈರೀತಿ ಅವನನ್ನು ಕೆಡಪಿದೊಡನೆ ತನ್ನ ಒರೆಯಿಂದ ಕತ್ತಿಯನ್ನು ಹಿಡಿದು ಆದರಿಂದ ಕೆಳಗೆ ಬಿದ್ದಿದ್ದ ಜಯನ ತಲೆಯನ್ನು ತರಿದುಬಿಡಬೇಕೆಂದು, ಆ ಘಾತುಕನಾದ ಕುಮುದಾಪೀಡನು ಪ್ರಯತ್ನಿಸುತ್ತಿರುವುದನ್ನು ನೋಡಿ ವಿಜಯನು ಕೋಪಗೊಂಡವನಾಗಿ ತನ್ನ ಕತ್ತಿಯನ್ನು ಕುಮುದಾಪೀಡನ ಕತ್ತಿಗೆ ಪ್ರಯೋಗಿಸಿ ಅವನನ್ನು ಭೂಗತನನ್ನಾಗಿಮಾಡಿಬಿಟ್ಟನು.

೮೮. ಆ ಬಳಿಕ ಗೋವಾಶನರಾಜ್ಯದ ಅರಸನಾದ ದಾಶೇರಕನು ಏಕಲವ್ಯನ ಸಂಗಡ ಯುದ್ಧಕ್ಕೆ ನಿಂತನು. ಅವರಿಬ್ಬರಿಗೂ ಭಯಂಕರವಾದ ಯುದ್ಧವು ನಡೆಯಿತು.

೮೯. ಆಗ ಏಕಲವ್ಯನು ತನ್ನ ಬಾಣಗಳಿಂದ ಎದುರಾಳಿಯ ರಥಕ್ಕೆ ಕಟ್ಟಿದ್ದ ಕುದುರೆಗಳನ್ನು ಹೊಡೆದು ನೆಲಕ್ಕೆ ಉರುಳಿಸಿದನು. ದಾಶೇರಕನೂ ಸಹ ಏಕಲವ್ಯನ ರಥತುರಗಗಳನ್ನು ನೆಲಕ್ಕೊರಗಿಸಿದನು.

ಗದಯಾ ಘಾತಯಾಮಾಸ ಸ ಚ ತಸ್ಯ ತುರಂಗಮಾನ್ ।
ತಯೋರ್ವಿರಥಯೋರ್ಭೃತ್ಯೈರುಪನೀತೌ ತುರಂಗಮೌ ॥ ೯೦ ॥

ಸ್ಥಿತ್ವ ತತ್ರ ತಥಾ ರೂಢೌ ವರಪ್ರಾಸಧರಾವುಭೌ ।
ಪ್ರಾಸನಿಭ್ರಮಣೋತ್ಕ್ಷೇಪಪರಿವರ್ತವಿವರ್ತನೌ ॥ ೯೧ ॥

ಚಕ್ರತುಸ್ತುಮುಲಂ ಯುದ್ಧಂ ಚಿತ್ರಂ ಲಘು ಚ ಸುಷ್ಠು ಚ ।
ಮಂಡಲಾನಿ ವಿಚಿತ್ರಾಣಿ ತಯೋಶ್ಚಕ್ರುಸ್ತುರಂಗಮಾಃ ॥ ೯೨ ॥

ಉತ್ಕ್ಷಿಪ್ತಪ್ರೀತಿಜನನಂ ಚಿರಂ ಕೃತ್ವಾ ತತೋ ರಣಂ ।
ಅನ್ಯೋನ್ಯವೇಗಾಭಿಹತೌ ಪೇತತುಸ್ಸತುರಂಗಮೌ ॥ ೯೩ ॥

---

೯೦ ಹೀಗೆ ಇಬ್ಬರ ರಥದ ಕುದುರೆಗಳೂ ಪರಲೋಕಕ್ಕೆ ತೆರಳಿದ ಬಳಿಕ ಆ ರಥಗಳು ಒರಿಯದಾದುವು. ಆ ಸಮಯದಲ್ಲಿ ಅವರಿಬ್ಬರ ಭೃತ್ಯರೂ ಸಹ ಬೇರೇ ಕುದುರೆಗಳನ್ನು ತಂದು ಆಯಾ ರಥಗಳಿಗೆ ಕಟ್ಟಿದರು.

೯೧. ಈರೀತಿ ಹೊಸಕುದುರೆಗಳಿಂದ ಸಜ್ಜಿತವಾದ ಆ ರಥಗಳ ಮೇಲೆ ತುರಂಗಗಳ ಹಿಂಭಾಗದಲ್ಲಿ ಕುಳಿತಾವೀರರು ಪ್ರಾಸಾಯುಧವನ್ನು ಧರಿಸಿ ಒಬ್ಬರ ಮೇಲೊಬ್ಬರು ಪ್ರಯೋಗಮಾಡಿದರು.

೯೨. ಪ್ರಾಸವನ್ನು ತಿರುಗಿಸಿ ತಿರುಗಿಸಿ ಗುರಿಯಿಟ್ಟು ಹೊಡೆಯಲಾರಂಭಿಸಿ ಆ ವೀರರಿಬ್ಬರೂ ಆವರ್ತನ ನಿವರ್ತನ ಕ್ರಮಗಳಿಂದ ತುಮುಲಯುದ್ಧಮಾಡಲಾರಂಭಿಸಿದರು. ಆ ಯುದ್ಧವು ಬಹು ಲಘುವಾಗಿಯೂ ನೋಡುವುದಕ್ಕೆ ಚಮತ್ಕಾರವಾಗಿಯೂ ಇತ್ತು. ಆಗ ಅವರ ರಥಕ್ಕೆ ಕಟ್ಟಿದ್ದ ತುರಗಗಳು ಅಭ್ಯಾಸವಿಶೇಷದಿಂದ ವಿಚಿತ್ರವಿಚಿತ್ರವಾಗಿಯೂ ಮಂಡಲಾಕಾರವಾಗಿಯೂ ತಿರುಗುತ್ತಿದ್ದುವು.

೯೩. ಈ ಸಮರದ ನೋಟವು ನೋಟಕರ ಮನಸ್ಸುಗಳನ್ನು ಆಕರ್ಷಿಸುವಂತಿದ್ದಿತು. ಈ ಪ್ರಕಾರ ಆ ಯುದ್ಧವು ಬಹಳ ಹೊತ್ತಿನವರೆವಿಗೂ ನಡೆಯಿತು. ಆ ಬಳಿಕ ಅವರಿಬ್ಬರೂ ಒಬ್ಬರನ್ನೊಬ್ಬರು ಸಂಹರಿಸಲುದ್ಯುಕ್ತರಾಗಿ ವೇಗದಿಂದೋಡಿ ಬಂದು ಒಬ್ಬರಮೇಲೊಬ್ಬರು ಬಿದ್ದು ಕುದುರೆಗಳ ಸಹಿತವಾಗಿ ನೆಲಕ್ಕುರುಳಿದರು.

ಭೃತ್ಯೈಶ್ಚ ರಥಮಾರೋಪ್ಯ ಸಮರಾದಪವಾಹಿತೌ ।
ಕುಮಾರಃ ಶ್ರೇಣಿಮಾನ್ಶೂರೋ ಬಲಬಂಧುಃ ಸುಯೋಧನಃ ॥ ೯೪ ॥

ಗಂಧರ್ವೈಃ ಪಂಚಭಿಃ ಪಂಚ ಪಾರ್ವತೀಯಾಃ ಸಮಾಗತಾಃ ।
ಬಲಾಕಾಬಲಕಾಭ್ಯಾಂ ತು ಗದಿನಾ ಮಾಲಿನಾ ತಥಾ ॥ ೯೫ ॥

ಕುಮುದೇನ ಚ ವೀರೇಣ ಸಮರೇಷ್ವನಿವರ್ತಿನಾ ।
ಚತುರ್ಭಿಃ ಸಾಯಕೈಸ್ತೀಕ್ಷ್ಣೈಃ ಕುಮಾರೋ ಬಲದರ್ಪಿತಃ ॥ ೯೬ ॥

ಹಯಾಂಶ್ಚಕಾರನಿರ್ಜೀವಾನ್ಬಲಾಕಸ್ಯ ಮಹಾತ್ಮನಃ ।
ಹತಾಶ್ವರಥಮುತ್ಸೃಜ್ಯ ಬಲಾಕಾಭ್ರಾತುರಂಜಸಾ ॥ ೯೭ ॥

ಆರುರೋಹ ರಥಂ ಶ್ರೀಮದ್ಬಲಾಕಸ್ಯ ಸುಸಂಯುತಂ ।
ತಾವೇಕರಥಮಾರೂಢೌ ಭ್ರಾತರೌ ಸಮರಪ್ರಿಯೌ ॥ ೯೮ ॥

---

೯೪. ಆ ಕೂಡಲೆ ಅವರವರ ಭೃತ್ಯರುಗಳು ಬಂದು ಕೆಳಗೆ ಬಿದ್ದಿದ್ದ ಅವರುಗಳನ್ನು ಎತ್ತಿಕೊಂಡು ಕುದುರೆಗಳ ರಥಗಳ ಮೇಲೆ ಮಲಗಿಸಿಕೊಂಡು ಶಿಬಿರಕ್ಕೊಯ್ದರು.

೯೫. ಇಷ್ಟು ಹಗರಣವಾದ ಬಳಿಕ ಕುಮುದ, ಶ್ರೇಣಿಮಂತ, ಶೂರ, ಬಲಬಂಧು, ಸುಯೋಧನರೆಂಬ ಐವರು ಶೂರರಾದ ಪರ್ವತರಾಜ್ಯದ ಧೊರೆಗಳೂ, ಬಲಾಕಾಬಲಕರೆಂಬ ವೀರರೂ ಸಹ ಐದು ಗಂಧರ್ವವೀರರನ್ನೆದುರಿಸಿ, ಗದೆ ಮತ್ತು ಮುದ್ಗರಾದಿಗಳಿಂದ ಯುದ್ಧಮಾಡಲಾರಂಭಿಸಿದರು.

೯೬. ಸಮರದಲ್ಲಿಂದೂ ಹಿಂತಿರುಗದ ವೀರನಾದ ಕುಮುದನಿಂದ, ಬಲದರ್ಪಿತನಾದ ಕುಮಾರನು ತೀಕ್ಷ್ಣವಾದೈದು ಬಾಣಗಳಿಂದ ಹೊಡೆಯಲ್ಪಟ್ಟನು.

೯೭. ಮತ್ತು ಆ ಕುಮುದನು ಮಹಾತ್ಮನಾದ ಬಲಾಕನ ರಥದ ಕುದುರೆಗಳ ಪ್ರಾಣಗಳನ್ನು ಸಂಹರಿಸಿದನು. ಈರೀತಿ ಬಲಾಕನು ತನ್ನ ರಥದ ಕುದುರೆಗಳು ಹತವಾದೊಡನೆಯೇ ತನ್ನ ತಮ್ಮನಾದ ಬಲಾಕನ ರಥದ ಮೇಲೇರಿ ಕುಳಿತನು.

೯೮. ಈರೀತಿ ಆ ಬಲಾಕಾಬಲಕರೀರ್ವರೂ ಒಂದೇ ರಥದ ಮೇಲೆ ಕುಳಿತುಕೊಂಡು ಬಲ ದರ್ಪಿತರಾಗಿ ಸಮರವನ್ನಾರಂಭಿಸಿದರು.

ಛಾದಯಾಮಾಸ ವಿಶಿಖೈಃ ಕುಮಾರೋ ಬಲದರ್ಪಿತಃ ।
ಬಲಕಸ್ತು ಕುಮಾರಸ್ಯ ಮಧ್ಯೇ ಚಿಚ್ಛೇದ ಕಾರ್ಮುಕಂ ॥ ೯೯ ॥

ಸ ಚ್ಛಿನ್ನಧನ್ವಾ ವೇಗೇನ ಗದಾಮಾದಾಯ ವೇಗವಾನ್ ।
ತಾಮಾದಾಯ ಜಘಾನಾಥ ಬಲಾಕಂ ಸಮರಪ್ರಿಯಂ ॥ ೧೦೦ ॥

ಬಲಾಕಂ ನಿಹತಂ ದೃಷ್ಟ್ವಾ ರೋಷಾದಶ್ರು ನಿವರ್ತಯನ್ ।
ಕುಮಾರಂ ಪ್ರತಿ ಚಿಕ್ಷೇಪ ಬಲಕಶ್ಚೈವ ತೋಮರಂ ॥ ೧೦೧ ॥

ತೋಮರೇಣ ಚ ನಿರ್ಭಿನ್ನೋ ರಥೋಪಸ್ಥ ಉಪಾವಿಶತ್ ।
ತಂ ವಿಸಂಜ್ಞಮುಥೋವಾಹ ಸಾರಥಿರ್ಯಯಾನವಿತ್ ॥ ೧೦೨ ॥

---

೯೯ ಬಲದರ್ಪಿತನಾದ ಕುಮುವನು ಧನುಸ್ಸಿನಲ್ಲಿ ಬಾಣವನ್ನು ಹೂಡಿ ಬಲಾಕನ ಮೇಲೆ ಪ್ರಯೋಗಿಸಿದನು. ಬಲಾಕನೂ ಸಹ ಅದನ್ನು ಲಕ್ಷ್ಯಕ್ಕೇ ತಾರದೆ ಆ ಬಾಣಗಳನ್ನು ಮಧ್ಯಮಾರ್ಗದಲ್ಲಿಯೇ ಕತ್ತರಿಸಿಹಾಕಿ ಆ ಕುಮುದನ ಧನುಸ್ಸನ್ನೂ ಸಹ ಬಾಣಪ್ರಯೋಗದಿಂದ ತುಂಡರಿಸಿಬಿಟ್ಟನು.

೧೦೦. ಯಾವಾಗ ಕುಮುದನ ಧನುಸ್ಸು ಛಿನ್ನವಾಗಿ ಹೋಯಿತೋ, ಆ ಕೂಡಲೇ ಆ ಕುಮುದನು ಒಂದಾನೊಂದು ದೃಢವಾದ ಗದೆಯನ್ನು ಕೈಯಲ್ಲಿ ಪಿಡಿದು ತಿರುಗಿಸುತ್ತಾ ವೇಗದಿಂದ ಅದನ್ನು ಬಲಾಕನ ಮೇಲೆ ಪ್ರಯೋಗಿಸಿದನು.

೧೦೧. ಆ ಗದೆಯು ಕೂಡಲೆ ಬಲಾಕನ ತಲೆಯನ್ನು ಭೇದಿಸಿ ಅವನನ್ನು ನೆಲಕ್ಕೆ ಬೀಳಿಸಿತು. ಅವನ ತಮ್ಮನಾದ ಬಲಕನು ತನ್ನ ಅಣ್ಣನು ಸತ್ತುದಕ್ಕಾಗಿ ಕಂಬನಿಗಳನ್ನು ಸುರಿಸುತ್ತಾ ಕ್ರೋಧಪರವಶನಾಗಿ ಆ ಕುಮುದನ ಮೇಲೆ ಒಂದು ತೋಮರವನ್ನೆಸೆದನು.

೧೦೨. ಆ ತೋಮರದ (ಗದೆಯಂತಹ ಮತ್ತೊಂದು ಮರದ ಆಯುಧ) ಏಟನ್ನು ತಡೆಯಲಾರದೆ ಆ ಕುಮಾರನು ರಥದ ಮೇಲಿದ್ದ ಹಾಗೆಯೇ ಮೂರ್ಛೆ ನೊಳ್ಳಲು, ಅವನ ಸಾರಥಿಯು ನಿಶ್ಚೇಷ್ಟಿತನಾದ ಕುಮಾರನನ್ನು ರಥದಮೇಲೆ ಮಲಗಿಸಿಕೊಂಡು ಶಿಬಿರಕ್ಕೆ ಹೊರಟುಹೋದನು.

ಶ್ರೇಣಿಮಾನಥ ಸಂಕ್ರುದ್ಧೋ ಬಾಲಕಸ್ಯ ತದಾ ರಣೇ ।
ಕ್ಷುರಪರ್ಯಂತಧಾರೇಣ ಚಕ್ರೇಣಾಪಹರಚ್ಛಿರಃ ॥ ೧೦೩ ॥

ನಿಪಾತಿತೋऽಥ ತತ್ರೈವ ಶೂರೇಣ ಗದಯಾ ಗದೀ ।
ತಂ ನಿಹತ್ಯ ತದಾ ಶೂರೋ ಮೌಲಿನಃ ಸಾರಥಿಂ ರಣೇ ॥ ೧೦೪ ॥

ಗದಯಾ ಪ್ರೋಥಯಾಮಾಸ ಮೇರುಗೌರವಯಾ ತದಾ ।
ಕುಮುದಸ್ಯ ಜಘಾನಾಥ ಗದಯಾ ಸ ತುರಂಗಮಾನ್ ॥ ೧೦೫ ॥

ಹತಾಶ್ವಂ ರಥಮುತ್ಸೃಜ್ಯ ಕುಮುದೋ ಗದಿನೋ ರಥಂ ।
ಆರುರೋಹ ತದಾ ಕ್ಷಿಪ್ರಂ ಖಡ್ಗಬಾಣಧನುರ್ಧರಃ ॥ ೧೦೬ ॥

ರಥಾರೂಢಸ್ಯ ತಸ್ಯಾಥ ಬಲಕಶ್ಚ ಮಹಾರಥಃ ।
ಜಘಾನ ಚತುರೋ ವಾಹಾಂಶ್ಚತುರ್ಭಿಸ್ಸಾಯಕೈಸ್ತದಾ ॥ ೧೦೭ ॥

---

೧೦೩. ಕುಮಾರನನ್ನು ಹೊಡೆದ ಆ ಬಾಲಕನ ಮೇಲೆ ಕುಪಿತನಾದ ಶ್ರೋಣಿಮಂತನೆಂಬುವನು, ಬಲು ಹರಿತವಾದ ಅಲಗುಳ್ಳ ಚಕ್ರಾಯುಧದಿಂದ ಆ ಬಾಲಕನ ಶಿರವನ್ನು ಕತ್ತರಿಸಿಬಿಟ್ಟನು.

೧೦೪. ಅದೇ ಸಮಯದಲ್ಲಿಯೇ ಅಲ್ಲಿಯೇ ಶೂರನಿಂದ ಪ್ರಯುಕ್ತನಾದ ಗದಾಯುದ್ಧಕ್ಕೆ ಶ್ರೋಣಿಮಂತನು ತಲೆಯನ್ನೊಪ್ಪಿಸಿದನು. ಆ ಬಲಶಾಲಿ ಶೂರನು ಶ್ರೋಣಿಮಂತನ ಸಾರಥಿಯನ್ನು ರಣರಂಗಕ್ಕೆ ಬಲಿಕೊಟ್ಟನು.

೧೦೫. ಶೂರನು ಪುನಃ ಅದೇ ಗದೆಯನ್ನೇ ಎತ್ತಿಹಿಡಿದು, ಮೇರುಪರ್ವತಕ್ಕೆ ಸಮನಾದ ಆ ಗದೆಯಿಂದ ಕುಮುದನ ರಥಕ್ಕೆ ಕಟ್ಟಿದ್ದ ಕುದುರೆಗಳನ್ನು ಸದೆಬಡಿದು ಕೊಂದುಬಿಟ್ಟನು.

೧೦೬. ತನ್ನ ರಥದ ಕುದುರೆಗಳು ಸಂಹೃತವಾದುದನ್ನು ನೋಡಿ ಕುಮುದನು ಆ ರಥದಿಂದಿಳಿದು ಬೇರೊಂದು ರಥವನ್ನಾರೋಹಿಸಿ ಕೈಯಲ್ಲಿ ಖಡ್ಗಬಾಣ ಧನುಸ್ಸುಗಳನ್ನು ಹಿಡಿದುಕೊಂಡು ಕುಳಿತನು.

೧೦೭. ಇಂತು ಯುದ್ಧಸನ್ನದ್ಧನಾಗಿ ಕುಳಿತ ಕುಮುದನನ್ನು ನೋಡಿ, ಮಹಾರಥಿಕನಾದ ಬೇರೊಂದು ಹೆಸರಿನ ವೀರನು, ಅನೇಕ ಬಾಣಗಳನ್ನು ಪ್ರಯೋಗಿಸಿ ಆ ಕುಮುದನ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನೂ ನೆಲಕ್ಕೊರಗಿಸಿದನು.

ಜಹಾರ ಪಂಚಮೇನಾಥ ಶಿರಸ್ತಸ್ಯ ಸಕುಂಡಲಂ ।
ಸಾರಥಿಂ ತು ರಥಾತ್ತಸ್ಮಾನ್ಮೌಲಿಸೋ ರಥಮುತ್ತಮಂ ॥ ೧೦೮ ॥

ಹತಸಾರಥಿನಂ ಪೂರ್ವಮಾರುರೋಹ ಮಹಾರಣೇ ।
ಮೌಲೀ ಯುದ್ಧಾಯ ತಸ್ಥೌ ಚ ಮಹಾಬಲಪರಾಕ್ರಮಃ ॥ ೧೦೯ ॥

ಆರುಹ್ಯ ಸ ರಥಂ ದಿವ್ಯಂ ಕಿಂಕಿಣೀಜಾಲನಾದಿತಂ ।
ತತಃ ಸ ಮೌಲಿನಾಽಕ್ರಾಂತಃ ಸುಯೋಧನರಥೋ ರಣೇ ॥ ೧೧೦ ॥

ಅವಾಕಿರದಮೇಯಾತ್ಮಾ ಶಸ್ತ್ರೈಸ್ಸನ್ನತಪರ್ವಭಿಃ ।
ಸುಯೋಧನೋಽಪಿ ವಿಕ್ರಮ್ಯ ಮೌಲಿನಂ ಮೌಲಿಭೂಷಿತಂ ॥ ೧೧೧ ॥

---

೧೦೮. ನಾಲ್ಕು ಬಾಣಗಳಿಂದ ನಾಲ್ಕು ಕುದುರೆಗಳೂ ನೆಲಕ್ಕುರುಳಿದ ಬಳಿಕ ಐದನೆಯ ಬಾಣದಿಂದ ಸಕುಂಡಲವಾದ ಕುಮುದನ ತಲೆಯನ್ನು ಮೇಲಕ್ಕೆ ಹಾರಿಸಿ ಬಿಟ್ಟನು. ಆ ಬಳಿಕ ಮತ್ತೊಂದು ಬಾಣದಿಂದ ಅವನ ಸಾರಥಿಯನ್ನೂ ರಥವನ್ನೂ ಸಹ ನಾಮಾವಶೇಷವನ್ನಾಗಿಮಾಡಿದನು.

೧೦೯. ಆ ರಥದಲ್ಲಿ ಕುಳಿತಿದ್ದ ಮೌಳಿಯೆಂಬ ವೀರನು ಈ ಪ್ರಕಾರವಾಗಿ ಸಾರಥಿಯೂ ರಥವೂ ನಾಶವಾಗುವ ಸೂಚನೆಯನ್ನರಿತು ಮೊದಲೇ ಬೇರೊಂದು ರಥದ ಮೇಲೆ ಹಾರಿ ಕುಳಿತನು. ಆ ಬಳಿಕ ಬೇರೆ ರಥದಲ್ಲಿ ಕುಳಿತಿದ್ದಂತೆಯೇ ತಾನೂ ಸಹ ಯುದ್ಧಾರಂಭವನ್ನು ಮಾಡಿದನು.

೧೧೦. ಆಗ ಸುಯೋಧನನು ಅವನ ಇದಿರಾಗಿ ಬಂದು ನಿಂತನು. ಆ ಸುಯೋಧನನು ಕುಳಿತಿದ್ದ ರಥವು ಅನೇಕ ಕಿರುಗಂಟೆಗಳಿಂದ ಧ್ವನಿತವಾಗುತ್ತಿತ್ತು. ಅಂತಹ ರಥದ ಮೇಲೆ ಕುಳಿತೊಡನೆಯೇ ಸುಯೋಧನನು ಮೌಳಿಯಿಂದಾಕ್ರಾಂತನಾದನು.

೧೧೧. ಮೌಳಿಯಲ್ಲಿ ದಿವ್ಯಕಿರೀಟವನ್ನು ಧರಿಸಿದ್ದ ಮೌಳಿಯು ಅನೇಕ ಸಹಸ್ರ ಬಾಣಗಳನ್ನು ಹೂಡಿ ಸುಯೋಧನನ ಮೇಲೆ ಬಾಣಗಳ ಮಳೆಯನ್ನೇ ಕರೆದನು. ಸುಯೋಧನನೂ ಸಹ ಸುಮ್ಮನಿರದೆ ಆ ಮೌಳಿಯ ಮೇಲೆ ಸಹಸ್ರಾವಧಿ ಬಾಣಗಳನ್ನು ಪ್ರಯೋಗಿಸಿದನು.

ಜಹಾರ ಸ ಶಿರಸ್ತ್ರಾಣಂ ಶಿರೋಜ್ಜ್ವಲಿತಕುಂಡಲಂ ।
ಮದ್ರರಾಜೋಂಶುಮಾನ್ನಾಮ ಚತುರ್ಭಿಃ ಸಾಯಕೋತ್ತಮೈಃ ॥ ೧೧೨ ॥

ಭೀಮನಾದಮಹಾನಾದವಸುಮೋಷರುಜಾಕರೈಃ ।
ಚತ್ವಾರಸ್ತೇ ಮಹಾರಾಜ ಮದ್ರರಾಜಸ್ಯ ಸಾಯಕೈಃ ॥ ೧೧೩ ॥

ನಿಜಘ್ನುಶ್ಚತುರೋ ವಾಹಾನ್ಸಾರಥಿಂ ಚ ತಥಾ ರಣೇ ।
ಅಂಶುಮಾನ್ರಥಮುತ್ಸೃಜ್ಯ ಗದಾಮಾದಾಯ ವೀರ್ಯವಾನ್ ॥ ೧೧೪ ॥

ಜಘಾನ ಚತುರೋ ವಾಹಾನ್ಭೀಮನಾದಸ್ಯ ಸಂಯುಗೇ ।
ಸಾರಥಿಂ ಪೋಥಯಾಮಾಸ ಮಹಾನಾದಶರಾಂಸ್ತಥಾ ॥ ೧೧೫ ॥

---

೧೧೨. ಈರೀತಿ ಪ್ರಯೋಗಿಸಿದ ಬಾಣಪರಂಪರೆಗಳಿಂದ ಜ್ವಲಿತ ಕುಂಡಲಗಳನ್ನುಳ್ಳ ಮೌಳಿಯ ಶಿರಸ್ಸು ಆಕಾಶಕ್ಕೆ ಹಾರಿಹೋಯಿತು. ಅನಂತರ ಮದ್ರರಾಜನಾದ ಅಂಶುಮಂತನೆಂಬುವನು ಯುದ್ಧಕ್ಕಾರಂಭಿಸಿ ನಾಲ್ಕು ಬಾಣಗಳನ್ನು ಬಿಲ್ಲಿಗೇರಿಸಿದನು.

೧೧೩. ಈರೀತಿ ಧನುಸ್ಸಿನಲ್ಲಿ ತೊಟ್ಟು ಬಾಣಗಳನ್ನು ಭೀಮನಾದ, ಮಹಾನಾದ, ವಸುಮೋಷ, ರುಜಾಕರರೆಂಬ ನಾಲ್ವರು ವೀರರ ಮೇಲೆ ಪ್ರಯೋಗಿಸಿದನು.

೧೧೪. ಈರೀತಿ ತಮ್ಮ ಮೇಲೆ ಬಂದು ಬೀಳುತ್ತಿರುವ ಬಾಣಗಳನ್ನು ಆ ನಾಲ್ವರು ವೀರರೂ ತಡೆದು, ತಾವು ಬೇರೆ ಬಾಣಗಳನ್ನು ಅನುಸಂಧಾನಮಾಡಿ ಮದ್ರರಾಜನ ರಥಕ್ಕೆ ಹೂಡಿದ್ದ ಕುದುರೆಗಳ ಮೇಲೆ ಪ್ರಯೋಗಿಸಿ ಅವುಗಳನ್ನು ಕೆಳಕ್ಕುರುಳಿಸಿಬಿಟ್ಟರು.

೧೧೫. ಆ ಬಳಿಕ ಅಂಶುಮಂತನು ರಥದಿಂದಿಳಿದು ತನ್ನ ಕೈಯಲ್ಲೊಂದು ಗದೆಯನ್ನು ಧರಿಸಿ ಎದುರಾಳಿಯ ರಥದ ಕುದುರೆಗಳ ಮೇಲೆ ಹೊಡೆದು, ಅವುಗಳನ್ನು ಸಂಹರಿಸಿ ಸಿಂಹನಾದಮಾಡುತ್ತಾ, ಆ ಬಳಿಕ ಮಹಾನಾದನ ರಥವನ್ನೂ ಸಾರಥಿಯನ್ನೂ ಬಾಣದಿಂದ ಪ್ರಹರಿಸಿದನು

ಗತಾಶ್ವಂ ರಥಮುತ್ಸೃಜ್ಯ ಗದಾವೇಗೇನ ಯಾದವ ।
ಮಹೋದಯಸ್ಯ ತಂ ನಾಗಂ ಪೋಥಯಾಮಾಸ ವೀರ್ಯವಾನ್ ॥ ೧೧೬ ॥

ಸಾರಥಿರ್ಭೀಮನಾದಸ್ಯ ಮಹಾನಾದರಥಂ ಯಯೌ ।
ಭೀಮನಾದಂ ಚ ಗದಯಾ ನಿಜಘಾನಾಥ ಮದ್ರರಾಟ್ ॥ ೧೧೭ ॥

ಸ ಮದ್ರರಾಜೇನ ಗದಯಾ ಸಮರೇ ತಾಡಿತೋ ಭೃಶಂ ।
ಜಗಾಮ ತ್ರಿದಿವಂ ರಾಜಂಸ್ತ್ಯಕ್ತ್ವಾ ದೇಹಂ ರಣಪ್ರಿಯಃ ॥ ೧೧೮ ॥

ಮಹಾನಾದೋಽಪಿ ಸಮರೇ ಸಾಯಕೈರ್ಲೋಮವಾಹಿಭಿಃ ।
ಬಿಭೇದ ಮದ್ರರಾಜಾನಂ ಶತಶೋಽಥ ಸಹಸ್ರಶಃ ॥ ೧೧೯ ॥

---

೧೧೬. ಈರೀತಿ ಮಹಾನಾದನು ತನ್ನ ಸಾರಥಿಯನ್ನೂ, ಕುದುರೆಗಳನ್ನೂ ನೀಗಿಕೊಂಡ ಬಳಿಕ ರಥದಿಂದ ಕೆಳಕ್ಕಿಳಿದು ಒಂದು ಗದೆಯನ್ನು ತೆಗೆದುಕೊಂಡು ಅದರಿಂದ ಮಹೋದಯನ ಆನೆಯನ್ನು ಪ್ರಹರಿಸಿದನು.

೧೧೭. ಆ ಬಳಿಕ ಅವನ ತಮ್ಮ ಭೀಮನಾದನ ಸಾರಥಿಯು ಮಹಾನಾದನನ್ನು ತನ್ನ ರಥವನ್ನೇರಿಸಿಕೊಂಡವನಾಗಿ ಅಂಶುಮಂತನ ಮೇಲೆ ಮರಳಿ ಬಾಣ ಪ್ರಯೋಗಮಾಡಿದನು. ಆಗ ಮದ್ರರಾಜನಾದ ಅಂಶುಮಂತನು ಆ ಗದೆಯನ್ನು ನಿವಾರಿಸಿ ಕೂಡಲೆ ತಾನೂ ಒಂದು ಗದೆಯಿಂದ ಭೀಮನಾದನನ್ನು ಚೆನ್ನಾಗಿ ಪ್ರಹಾರ ಮಾಡಿದನು.

೧೧೮. ಅಂಶುಮಂತನ ಗದಾಪ್ರಹಾರದಿಂದ ಕೂಡಲೆ ಆ ಭೀಮನಾದನು ಬಲವಾಗಿ ಹೊಡೆಯಲ್ಪಟ್ಟವನಾಗಿ ಅದರ ಪ್ರಹಾರವನ್ನು ತಡೆದುಕೊಳ್ಳಲಾರದೆ ಪ್ರಾಣವನ್ನು ಬಿಟ್ಟನು.

೧೧೯. ಭೀಮನಾದನು ಪ್ರಾಣಬಿಟ್ಟುದನ್ನು ನೋಡಿ, ಅವನ ಸಹೋದರನಾದ ಮಹಾನಾದನು ನೂರಾರು ಸಾವಿರಾರು ಬಾಣಗಳನ್ನು ಮದ್ರರಾಜನ ಮೇಲೆ ಪ್ರಯೋಗಿಸಿದನು.

**ಸ ಬಾಧ್ಯಮಾನೋ ನಾರಾಚೈರ್ಮಹಾನಾದಭುಜಚ್ಯುತೈಃ ।**
**ಆರುರೋಹ ರಥಂ ಶೀಘ್ರಂ ವಸುಷೇಣಸ್ಯ ಸತ್ವರಃ** ॥ ೧೨೦ ॥

**ರಥಮಾರುಹ್ಯ ವೇಗೇನ ಗದಯಾ ಭೀಮವೇಗಯಾ ।**
**ಚಕಾರ ಯುದ್ಧೇ ನಿರ್ಜೀವಂ ವಸುಷೇಣಂ ರಣಪ್ರಿಯಂ** ॥ ೧೨೧ ॥

**ಅವರುಹ್ಯ ರಥಾತ್ತಸ್ಮಾದ್ಗದಯಾ ಭೀಮವೇಗಯಾ ।**
**ಗಜಾಕರಸ್ಯ ತುರಗಾನ್ಸಾರಥಿಂ ಚಾಹನಚ್ಛೃಶಂ** ॥ ೧೨೨ ॥

**ಹತೇಷು ತೇಷು ರಾಜೇಂದ್ರ ತದಾ ವೀರೋ ಗಜಾಕರಃ ।**
**ರಥಂ ತಂ ತು ಸಮಾರುಹ್ಯ ಭೂಯ ಏವ ತದಂಶುಮಾನ್** ॥ ೧೨೩ ॥

---

೧೨೦. ಈ ರೀತಿಯಾಗಿ ಮಹೋದಯನಿಂದ ಪ್ರಯೋಗಿಸಲ್ಪಟ್ಟ ಬಾಣಪರಂಪರೆಗಳಿಂದ ಹಿಂಸಿಸಲ್ಪಟ್ಟ ಮದ್ರರಾಜನು ಆ ಬಾಣಗಳ ಏಟುಗಳನ್ನು ತಡೆದುಕೊಳ್ಳಲಾರದೆ ತಾನು ಕುಳಿತಿದ್ದ ರಥದಿಂದ ಕೆಳಕ್ಕೆ ಧುಮುಕಿ ವಸುಷೇಣನ ರಥವನ್ನೇರಿ ಹತ್ತಿ ಕುಳಿತುಕೊಂಡನು.

೧೨೧. ಅಂಶುಮಂತನು ಬಹು ವೇಗದಿಂದ ಆ ವಸುಷೇಣನ ರಥದ ಮೇಲಕ್ಕೆ ಹತ್ತಿದಕೂಡಲೇ, ಒಂದು ಗದೆಯಿಂದ ಆ ವಸುಷೇಣನ ತಲೆಗೆ ಪ್ರಯೋಗಿಸಿ ಅವನ ಅವತಾರವನ್ನು ಮುಗಿಸಿಬಿಟ್ಟನು.

೧೨೨. ಇಂತು ವಸುಷೇಣನನ್ನು ಆಹುತಿ ತೆಗೆದುಕೊಂಡ ಬಳಿಕ ಆ ಮದ್ರರಾಜನು ಅವನ ರಥದಿಂದ ಕೆಳಕ್ಕೆ ಧುಮುಕಿ ತನ್ನ ಕೈಯಲ್ಲಿದ್ದ ಭೀಮವೇಗವುಳ್ಳ ಗದೆಯಿಂದ ಗಜಾಕರನೆಂಬ ಗಂಧರ್ವನ ರಥಕ್ಕೆ ಕಟ್ಟಿದ್ದ ಕುದುರೆಗಳನ್ನೂ, ಅವನ ಸಾರಥಿಯನ್ನೂ ಹೊಡೆದು ಬೀಳಿಸಿಬಿಟ್ಟನು.

೧೨೩. ತನ್ನ ಸಾರಥಿಯನ್ನೂ ಕುದುರೆಗಳನ್ನೂ ಕಳೆದುಕೊಂಡು ಗಜಾಕರನು ವಿಹ್ವಲನಾಗಿ ಕೆಳಗೆ ನಿಂತುಕೊಂಡಿರಲು ಅಂಶುಮಂತನು ವೇಗವಾಗಿ ಹೋಗಿ ಆ ಗಜಾಕರನ ರಥವನ್ನೇರಿ ಕುಳಿತನು.

ಚಕಾರ ಯುದ್ಧೇ ನಿರ್ಜೀವಂ ಗಾಂಧರ್ವಂ ತಂ ಗಜಾಕರಂ ।
ಉತ್ಪ್ಲುತ್ಯ ತುರಗಾತ್ತಸ್ಮಾನ್ಮಹಾನಾದರಥಂ ಗತಃ ॥ ೧೨೪ ॥

ಗದಯಾ ಪ್ರೋಥಯಾಮಾಸ ಮಹಾನಾದಂ ತದಾ ರಣೇ ।
ರೋಷದೀಪ್ತೋಂಕುಶಂ ಕೃತ್ವಾ ಕುಂಜರಂ ಭರತಾಜ್ಞಯಾ ॥ ೧೨೫ ॥

ಆರುಹ್ಯ ನಿಜಘಾನಾಥ ಗಂಧರ್ವಾನ್ಶತಶೋ ರಣೇ ।
ದಾರ್ವಃ ಶ್ರುತಂಜಯಃ ಶ್ರೀಮಾನಾಭಿಸಾರಃ ಕೃತಂಜಯಃ ॥ ೧೨೬ ॥

ಯುದ್ಧಂ ತೌ ಚಕ್ರತುರ್ವೀರೌ ಸಹಿತೌ ಚಂದ್ರವರ್ಮಣಾ ।
ಚಂದ್ರವರ್ಮಾ ಮಹಾತೇಜಾಃ ಶ್ರುತಂಜಯರಥಾತ್ ಧ್ವಜಂ ॥ ೧೨೭ ॥

---

೧೨೪ ಇಂತು ಆ ರಥವನ್ನೇರಿ ಪರಮವೀರನಾದ ಅಂಶುಮಂತನು ಗಜಾಕರನ ಮೇಲೆ ಪುನಃ ಬಾಣಗಳನ್ನು ಪ್ರಯೋಗಿಸಿ, ಆ ಗಂಧರ್ವನ ತಲೆಯನ್ನು ಕೆಳಕ್ಕೆ ಕೆಡವಿ ಬಿಟ್ಟನು. ಹೀಗೆ ಗಜಾಕರನು ಮಡಿದೊಡನೆಯೇ, ಆ ಧೈರ್ಯಶಾಲಿಯಾದ ಅಂಶುಮಂತನು ಬಲು ವೇಗದಿಂದ ಮಹಾನಾದನ ರಥಕ್ಕೆ ಹಾರಿ ಕುಳಿತನು.

೧೨೫. ಅಲ್ಲಿ ಕುಳಿತು ಪಮ್ಮೆಕೊಚ್ಚುತ್ತಿದ್ದ ಆ ಮಹಾನಾದನನ್ನು ಗದೆಯಿಂದ ಹೊಡೆದು, ಆ ಬಳಿಕಲಾ ಅಂಶುಮಂತನು ಭರತನ ಆಜ್ಞಾನುಸಾರವಾಗಿ, ರೋಷದಿಂದ ಕೂಡಿದ್ದ ಒಂದು ಮದ್ದಾನೆಯ ಮೇಲೆ ಅಂಕುಶಧಾರಿಯಾಗಿ ಕುಳಿತುಕೊಂಡನು.

೧೨೬. ಈರೀತಿ ಅಂಶುಮಂತನು ಆ ಮದಿಸಿದ್ದ ಆನೆಯಮೇಲೆ ಕುಳಿತು ನೂರಾರು ಸಾವಿರಾರು ಬಾಣಗಳನ್ನನುಸಂಧಾನಮಾಡಿ ಗಂಧರ್ವರ ಮೇಲೆ ಬಿಟ್ಟನು. ವೀರಾಗ್ರಗಣ್ಯನಾದ ಮದ್ರರಾಜನಿಂದ ಬಿಡಲ್ಪಟ್ಟಬಾಣಗಳಿಂದ ಗಂಧರ್ವವೀರರನೇಕರು ಮಡಿದು ಭೂಮಿಯ ಮಡಿಲಲ್ಲಿ ಮುದುರಿಕೊಂಡರು.

೧೨೭. ಈರೀತಿ ಅಂಶುಮಂತನು ಭಯಂಕರಾಕಾರವಾದ ಯುದ್ಧವನ್ನು ಹೂಡಿರಲು, ಅದೇ ಕಾಲದಲ್ಲಿ ಮತ್ತೊಂದು ಕಡೆ, ದಾರ್ವ, ಶ್ರುತಂಜಯ, ಅಭಿಸಾರ, ಕೃತಂಜಯರೆಂಬ ಗಂಧರ್ವವೀರರು ಚಂದ್ರವರ್ಮರಾಜನ ಮೇಲೆ ಯುದ್ಧಕ್ಕೆ ನಿಂತರು ಆಗಲಾ ಚಂದ್ರವರ್ಮರಾಜನು ಒಂದು ಬಾಣವನ್ನಾಕರ್ಣಾಂತವಾಗಿ ಸೆಳೆದು ಶ್ರುತಂಜಯನ ರಥದ ಮೇಲೆ ಪ್ರಕಾಶಿಸುತ್ತಲಿದ್ದ ಧ್ವಜಪಟದ ಮೇಲೆ ಬಿಟ್ಟನು.

**ಶರೇಣ ಪಾತಯಾಮಾಸ ವಟವೃಕ್ಷಮಿವೋಚ್ಛ್ರಿತಂ ।**
**ಶ್ರುತಂಜಯೋಽಪಿ ಸಂಕ್ರುದ್ಧಶ್ಚಂದ್ರವರ್ಮಕರಸ್ಥಿತಂ ॥ ೧೨೮ ॥**

**ದ್ವಿಧಾ ಚಕಾರ ತೀಕ್ಷ್ಣೇನ ಸಾಯಕೇನ ಮಹದ್ಧನುಃ ।**
**ತಂ ಛಿನ್ನಧನುಷಂ ವೀರಂ ಶರೈಃ ಸನ್ನತಪರ್ವಭಿಃ ॥ ೧೨೯ ॥**

**ಛಾದಯಾಮಾಸ ಸಮರೇ ಪಾರ್ವತೀಯಃ ಕೃತಂಜಯಃ ।**
**ಚಂದ್ರವರ್ಮಾ ಸಮಾದಾಯ ತತಃ ಶಕ್ತಿಂ ಸುದಾರುಣಾಂ ॥ ೧೩೦ ॥**

**ಬಿಭೇದ ಸಮರೇ ರಾಜನ್ರಾಜಾನಂ ತಂ ಕೃತಂಜಯಂ ।**
**ಸವಿಭಿನ್ನಸ್ತಯಾ ಶಕ್ತ್ಯಾ ರಥೋಪಸ್ಥ ಉಪಾವಿಶತ್ ॥ ೧೩೧ ॥**

---

೧೨೮. ಆ ಬಾಣದೇಟಿಗೆ ತಗಲಿದ ಆ ಬಾವುಟವು, ಎತ್ತರವಾಗಿ ಬೆಳೆದಿದ್ದ ಆಲದಮರವು ಬುಡಮಟ್ಟವಾಗಿ ಉರುಳಿಕೊಂಡಂತೆ ನೆಲಕ್ಕುರಳಿ ಬಿದ್ದುಹೋಯಿತು. ಈರೀತಿ ತನ್ನ ಬಾವುಟವು ಬಿದ್ದುದನ್ನು ನೋಡಿ ಶ್ರುತಂಜಯನು ಭೀಕರಕ್ರೋಧದಿಂದೊಡಗೂಡಿದವನಾಗಿ, ಚಂದ್ರವರ್ಮನ ಕೈಯಲ್ಲಿ ಹಿಡಿದಿದ್ದ ಧನುಸ್ಸಿಗೆ ಗುರಿಯಿಟ್ಟು ಒಂದು ಬಾಣವನ್ನು ಪ್ರಯೋಗಿಸಿ ಆ ಧನುಸ್ಸನ್ನು ಎರಡು ತುಂಡುಮಾಡಿಬಿಟ್ಟನು.

೧೨೯-೧೩೦. ಈರೀತಿ ಅವನ ಬಿಲ್ಲನ್ನು ಕತ್ತರಿಸಿದೊಡನೆಯೇ ಬರಿಗೈಯಲ್ಲಿದ್ದ ಅವನ ಮೇಲೆ ಎಡೆಬಿಡದೆ ಬಾಣದ ಮಳೆಯನ್ನೇ ಕರೆದುಬಿಟ್ಟನು. ಈ ರೀತಿ ಪಾರ್ವತೀಯ (ಪರ್ವತರಾಜ) ನಾದ ಕೃತಂಜಯನು ಬಾಣಪರಂಪರೆಗಳಿಂದ ಮುಚ್ಚಲ್ಪಟ್ಟನಾದಾಗ್ಯೂ ಅದನ್ನೆಲ್ಲಾ ಸಹಿಸಿಕೊಂಡವನಾಗಿ ರಥದಮೇಲೆ ಹಾಗೆಯೇ ಕುಳಿತಿದ್ದನು.

೧೩೧. ಆಗ ಚಂದ್ರವರ್ಮನು ಬಹಳ ದಾರುಣವಾದೊಂದು ಶಕ್ತ್ಯಾಯುಧವನ್ನು ಕೈಗೆ ತೆಗೆದುಕೊಂಡು ಆ ಕೃತಂಜಯನ ಮೇಲೆ ವೇಗದಿಂದೆಸೆದನು. ಈ ಏಟಿಗೆ ತಡೆಯಲಾರದೆ ಕೃತಂಜಯನು ಮೈಯಲ್ಲಿ ರಕ್ತವನ್ನು ಸುರಿಸುತ್ತಾ ಆ ರಥದಲ್ಲಿ ನಿಸ್ಸಂಜ್ಞನಾಗಿ ಕುಳಿತುಬಿಟ್ಟನು.

ತಂ ವಿಸಂಜ್ಞಮುಪೋವಾಹ ಸಂಗ್ರಾಮಾದಥ ಸಾರಥಿಃ ।
ಕೃತಂಜಯಂ ಮಹಾರಾಜ ರಣೇ ದೃಷ್ಟ್ವಾ ವಿಚೇತಸಂ ॥ ೧೩೨ ॥

ಸಕುಂಡಲಂ ಸಮುಕುಟಂ ಚಾರುಚಂದ್ರಸಮಪ್ರಭಂ ।
ಶಿರಶ್ಚಿಚ್ಛೇದ ತೀಕ್ಷ್ಣೇನ ಸಾಯಕೇನ ಮಹಾತ್ಮನಾ ॥ ೧೩೩ ॥

ಸಮರೇ ಯತಮಾನಸ್ಯ ಸುಭೃಶಂ ಚಂದ್ರವರ್ಮಣಾ ।
ಕಾಶ್ಮೀರಕಃ ಸುಬಾಹುಶ್ಚ ಗಂಧರ್ವೇಣ ಸುಬಾಹುನಾ ॥ ೧೩೪ ॥

ಚಕಾರ ತುಮುಲಂ ಯುದ್ಧಂ ಭೀರೂಣಾಂ ಭಯವರ್ಧನಂ ।
ಉಭೌ ತೌ ತರುಣೌ ವೀರಾವುಭೌ ಸಮರದುರ್ಮದೌ ॥ ೧೩೫ ॥

ದರ್ಶನೀಯಾವುಭೌ ವೀರಾವುಭೌ ಬಾಣಧನುರ್ಧರೌ ।
ತಾವುಭೌ ಸದೃಶೌ ವೀರ್ಯೇ ಶಂಬರಾಸುರರಾಜಯೋಃ ॥ ೧೩೬ ॥

---

೧೩೨. ಯಾವಾಗ ಕೃತಂಜಯನು ನಿಶ್ಚೇಷ್ಟಿತನಾಗಿ ರಥವಮೇಲೆ ಆಯಾಸದಿಂದ ಬಿದ್ದುಹೋದನೋ, ಆ ಕೂಡಲೇ ಆತನ ಸಾರಥಿಯು ಆತನು ಕುಳಿತಿದ್ದ ರಥವನ್ನು ಹಿಂತಿರುಗಿಸಿ ಶಿಬಿರದ ಪ್ರಾಂತ್ಯಕ್ಕೆಹೊರಟು ಹೋದನು.

೧೩೩. ಹೀಗೆ ಕೃತಂಜಯನು ಸಮರಭೂಮಿಯಿಂದ ಸರಿದೊಡನೆಯೇ, ಚಂದ್ರವರ್ಮನು ಕೃತಂಜಯನ ತಲೆಯನ್ನು ಬಾಣಪ್ರಯೋಗದಿಂದ ಕತ್ತರಿಸಿದನು. ಆ ಬಾಣದೇಟಿಗೆ ಸಿಕ್ಕಿ ಆ ಕೃತಂಜಯನ ತಲೆಯು ಕಿರೀಟಕುಂಡಲಾದಿಗಳಿಂದ ಸಹಿತವಾಗಿಯೇ ನೆಲಕ್ಕೆ ಬಿದ್ದುಹೋಯಿತು.

೧೩೪. ಆಮೇಲೆ ಪುನಃ ಯುದ್ಧರಂಗದಲ್ಲೇ ಅತ್ಯಾಸಕ್ತನಾಗಿ ನಿಂತಿದ್ದ ಆ ಚಂದ್ರವರ್ಮನ ಜತೆಗೆ ಸುಬಾಹುವೆಂಬ ಗಂಧರ್ವನು ಬಂದು ಸೇರಿಕೊಂಡು, ಅವರಿಬ್ಬರೂಕೂಡಿ ಕಾಶ್ಮೀರಕ ಸುಬಾಹುಗಳೆಂಬ ಅರಸರ ಮೇಲೆ ಕೈಮಾಡಿದರು.

೧೩೫. ಆಗ ಅವರಲ್ಲಿ ತುಮುಲಯುದ್ಧಕ್ಕೆ ಆರಂಭವಾಯಿತು. ಈ ಎರಡು ಜೋಡಿಯೂ ಸಮಸಮನಾಗಿದ್ದುವು. ಇಬ್ಬರೂ ಪ್ರಾಯದ ಕಟ್ಟಾಳುಗಳಾಗಿದ್ದರು. ಒಬ್ಬರಿಗೊಬ್ಬರು ಸೋಲತಕ್ಕವರಲ್ಲ.

೧೩೬. ಇಬ್ಬರೂ ನೋಡಲಿಕ್ಕೆ ಬಲು ಸುಂದರರಾಗಿದ್ದರು ಇಬ್ಬಿಬ್ಬರ ಕೈಗಳಲ್ಲೂ ಬಾಣಗಳೂ ಧನುಸ್ಸೂ ಸಹ ಶೋಭಿಸುತ್ತಿದ್ದುವು. ಆ ಜೋಡಿಗಳೆರಡೂ

ಉಭೌ ಪ್ರಕಾಶೈಶ್ಚಲಿತೌ ತಥೋಭೌ ಧೃಢವಿಕ್ರಮೌ ।
ಚಿಚ್ಛಿದುಸ್ತೇ ತಥಾನ್ಯೋನ್ಯಂ ಧ್ವಜಚ್ಛತ್ರೇ ನರಾಧಿಪ ॥ ೧೩೭ ॥

ಅನ್ಯೋನ್ಯಸ್ಯ ಹಯಾನ್ಹತ್ವಾ ತಥೋಭೌ ಪಾರ್ಷ್ಣಿಸಾರಥೀ ।
ಅನ್ಯೋನ್ಯಂ ಧನುಷೀ ಛಿತ್ವಾ ಸುವೃಢೇ ಸಮರಪ್ರಿಯೇ ॥ ೧೩೮ ॥

ಕೃತೇ ಪ್ರತಿಕೃತಂ ಚೈವ ಕುರ್ವಾಣೌ ಭೀಮವಿಕ್ರಮೌ ।
ವಿರಥಾವಸಿಯುದ್ಧಾಯ ಚಕ್ರತುರ್ಯತ್ನಮುತ್ತಮಂ ॥ ೧೩೯ ॥

ಅಸಿಯುದ್ಧಂ ಚಿರಂ ಕೃತ್ವಾ ಖಡ್ಗನಾವಿಧ್ಯ ಸತ್ವರಃ ।
ಪಾತಯಾಮಾಸ ಮೂರ್ಧಾನಂ ಗಂಧರ್ವಸ್ಯ ನರಾಧಿಪ ॥ ೧೪೦ ॥

---

ಮಾಡುತ್ತಿದ್ದ ಯುದ್ಧವನ್ನು ನೋಡಿದವರು, ಈ ಸಮರವು ಶಂಬರಾಸುರನಿಗೂ ಇಂದ್ರನಿಗೂ ನಡೆದ ಯುದ್ಧಕ್ಕೆ ಸಮನಾದುದೆಂದು ಹೇಳಿಕೊಳ್ಳುತ್ತಿದ್ದರು.

೧೩೭. ಇಬ್ಬರೂ ವರಸೆವರಸೆಯಾಗಿ ದುಂಡಾಗಿ ಸುತ್ತುತ್ತಿದ್ದರು. ಇಬ್ಬರೂ ವೃಢಪರಾಕ್ರಮಿಗಳು. ಹೀಗೆ ಇವರಿಬ್ಬರೂ ಯುದ್ಧಕ್ಕಾರಂಭಿಸಿ ಪರಸ್ಪರರ ರಥಗಳ ಲ್ಲಿದ್ದ ಧ್ವಜವನ್ನೂ ಶ್ವೇತಚ್ಛತ್ರವನ್ನೂ ಭೇದಿಸಿಬಿಟ್ಟರು.

೧೩೮. ಮತ್ತು ಪರಸ್ಪರವಾಗಿ ಉಭಯಪಕ್ಷದ ರಥಗಳಿಗೆ ಕಟ್ಟಿದ್ದ ಕುದುರೆ ಗಳನ್ನು ಸಂಹರಿಸಿಬಿಟ್ಟರು. ಉಭಯಪಕ್ಷದವರೂ ಪರಸ್ಪರ ತಮ್ಮ ತಮ್ಮ ಸಾರಥಿ ಗಳನ್ನು ನಾಶಗೊಳಿಸಿಕೊಂಡವರಾದರು. ಅನ್ಯೋನ್ಯರ ಕೈಗಳಲ್ಲಿದ್ದ ಧನುಸ್ಸನ್ನೂ ಸಹ ಪರಸ್ಪರವಾಗಿ ಕತ್ತರಿಸಿಬಿಟ್ಟರು.

೧೩೯. ಒಬ್ಬನು ಮಾಡಿದುದಕ್ಕನುಸಾರವಾಗಿ ಮತ್ತೊಬ್ಬನು ಪ್ರತಿಕ್ರಿಯೆ ಯನ್ನೇ ಮಾಡುತ್ತಾ ಬಂದನು. ಇಬ್ಬರೂ ಭಯಂಕರ ಪರಾಕ್ರಮಿಗಳಾಗಿ ಸರಿಸಮ ನಾಗಿದ್ದ ಮೇಲೆ ಹೇಳುವುದೇನು ? ಕೇಳುವುದೇನು ? ಒಬ್ಬರಿಗೊಬ್ಬರು ಜಗ್ಗುವಂತಿಲ್ಲ. ಕಡೆಗೆ ಉಭಯರೂ ಸಹ ತಮ್ಮ ಸರ್ವಸ್ವವನ್ನೂ ಕಳೆದುಕೊಂಡವರಾಗಿ, ಅತ್ಯುತ್ತಮ ವಾದ ಖಡ್ಗಾಖಡ್ಗಿ (ಕತ್ತಿಯ ಯುದ್ಧ) ಗೆ ಆರಂಭಿಸಿ ಅದರಲ್ಲೂ ಒಬ್ಬರಿಗೊಬ್ಬರು ಸೋಲದೆ ಸಮಸಮನಾಗಿಯೇ ನಿಂತರು.

೧೪೦. ಕತ್ತಿಯ ಯುದ್ಧವು ಬಹಳ ಹೊತ್ತು ನಡೆಯಿತು. ಕಡೆಗೆ ಮನುಷ್ಯ ರಾಜನ ಕತ್ತಿಯ ಏಟಿಗೆ ಗಂಧರ್ವರಾಜನು ಸಿಕ್ಕಿ ಸತ್ತುಹೋದನು.

ಆರುರೋಹ ರಥಂ ಚಾನ್ಯಂ ಸುಶೀಘ್ರಂ ಭರತಾಜ್ಞಯಾ ।
ತತ್ರಾರೂಢಸ್ಸ ಗಂಧರ್ವಾನ್ ಜಘಾನ ಶತಶೋ ರಣೇ ॥ ೧೪೧ ॥

ಏತಸ್ಮಿನ್ನಂತರೇ ಕ್ರುದ್ಧಃ ಶೈಲೂಷಃ ಸ ಸಹಾಯವಾನ್ ।
ಚಕಾರ ಯುಧಿ ನಿರ್ಜೀವಾನ್ನರನಾಗತುರಂಗಮಾನ್ ॥ ೧೪೨ ॥

ಬಭೂವ ಭಾರತೀ ಸೇನಾ ಶೈಲೂಷೇಣೋಪಮರ್ದಿತಾ ।
ನಿದಾಘೇ ಪುಷ್ಪಶಬಲದ್ವಿರದೇನೇವ ಪದ್ಮಿನೀ ॥ ೧೪೩ ॥

ಏತಸ್ಮಿನ್ಭಾರತೇ ಸೈನ್ಯೇ ಕಶ್ಚಿದಾಸೀನ್ಮಹಾರಥಃ ।
ಪ್ರತ್ಯುದ್ಯಯೌ ಯಃ ಸಮರೇ ಶೈಲೂಷಂ ರಣಕರ್ಕಶಂ ॥ ೧೪೪ ॥

---

೧೪೧. ಆ ಕೂಡಲೇ ಆ ಮಾನಸರಾಜನು ಬೇರೆಯೊಂದು ರಥವ ಮೇಲೆ ಹತ್ತಿ ಕುಳಿತನು. ಆ ಪ್ರಕಾರವಾಗಿ ರಥದಮೇಲೆ ಕುಳಿತಾ ನರಪತಿಯು ಗಂಧರ್ವ ಸೈನ್ಯದ ಮೇಲೆ ಪುಂಖಾನುಪುಂಖವಾದ ಬಾಣಗಳನ್ನು ಮಳೆಯಂತೆ ಸುರಿಸಿಬಿಟ್ಟನು.

೧೪೨. ಗಂಧರ್ವರಿಗಿಂತೊದಗಿದ ವಿಪನ್ನಾವಸ್ಥೆಯನ್ನು ನೋಡಿ ಶೈಲೂಷನು ಸಹಿಸಲಾರದೆ ಪ್ರಳಯಕೋಪವಂ ತಾಳಿ, ಅನೇಕ ವೀರರೊಡನೆ ಕಾಳಗಮಧ್ಯದಲ್ಲಿ ನುಗ್ಗಿ ಕುದುರೆಗಳನ್ನೂ, ಆನೆಗಳನ್ನೂ, ಅನೇಕ ಸೈನಿಕರನ್ನೂ ಕೊಂದು ಬಿಸುಡುತ್ತ ಬಂದನು.

೧೪೩. ಈ ಪ್ರಕಾರವಾಗಿ ಭರತನ ಸೈನ್ಯವು ಶೈಲೂಷನಿಂದ ಹತವಾಗುತ್ತಿರುವುದನ್ನು ನೋಡಿದರೆ, ಬಿಸಿಲಿನ ಝಳಕ್ಕೆ ಬಾಡಿಹೋದ ಕೋಮಲವಾದ ಪುಷ್ಪಗಳಂತೆಯೂ, ಆನೆಗಳಿಂದ ನಾಶಗೊಳಿಸಲ್ಪಟ್ಟ ತಾವರೇದಂಟಿನಂತೆಯೂ ತೋರುತ್ತಿತ್ತು.

೧೪೪. ಇಷ್ಟೆಲ್ಲಾ ಸಂಕಟಗಳೊದಗಿದಾಗ್ಯೂ ಆ ಶೈಲೂಷನಿಗೆ ಹೆದರಿ, ಒಬ್ಬನಾದರೂ ಭರತನ ಕಡೆಯ ಸೈನಿಕನು ಯುದ್ಧರಂಗದಿಂದ ಹಿಂತಿರುಗಲಿಲ್ಲ. ಓ! ವೀರರಾದ ಭಾರತೀಯ ಸೈನಿಕರೇ! ನಿಮಗೆ ಜಯಜಯಕಾರವಿರಲಿ!

ಶೈಲೂಷಶರಸಂಪಾತರುದ್ಧಗೋಮಂಡಲೇ ರವೌ ।
ನ ಪ್ರಾಜ್ಞಾಯತ ರಾಜೇಂದ್ರ ತದಾ ಕಿಂಚಿದ್ರಣಾಜಿರೇ ॥ ೧೪೫ ॥

ಅಶ್ರೂಯತ ಮಹಾಂಚ್ಛಬ್ದಸ್ತಾಲಾನಾಂ ಪತತಾಮಿವ ।
ನರನಾಗಾಶ್ವಕಾಯೇಭ್ಯೋ ವಿಸಸ್ರುಃ ಶೋಣಿತಾಪಗಾಃ ॥ ೧೪೬ ॥

ಏವಂ ತು ಭಾರತಂ ಸೈನ್ಯಂ ಕಾಲ್ಯಮಾನಸಮಿತಸ್ತತಃ ।
ಶೈಲೂಷೇಣ ಮಹಾರಾಜ ಭರತಂ ಶರಣಂ ಯಯೌ ॥ ೧೪೭ ॥

ಭರತೋಽಪಿ ಮಹಾತೇಜಾ ದೃಷ್ಟ್ವಾ ಶೈಲೂಷಮಾಗತಂ ।
ಪ್ರತ್ಯುದ್ಯಯೌ ರಥೇನಾಜೌ ಕಿಂಕಿಣೀಜಾಲಮಾಲಿನಾ ॥ ೧೪೮ ॥

---

೧೪೫. ಒಳ್ಳೇ ಮಟಮಟ ಮಧ್ಯಾಹ್ನದ ಹೊತ್ತಿನಲ್ಲಿ ಆ ಶೈಲೂಷನ ಬಾಣಗಳಿಂದ ಭೂಮಂಡಲಾದ್ಯಂತವೂ ಮುಚ್ಚಿಹೋಗಿರಲಾಗಿ ಆ ರಣಭೂಮಿಯಲ್ಲಿ ಆ ಬಾಣಗಳಲ್ಲದೆ ಇನ್ನಾವ ವಸ್ತುವೂ ಕಾಣಿಸುತ್ತಲೇ ಇರಲಿಲ್ಲ.

೧೪೬. ಆಗ ಇದ್ದಕ್ಕಿದ್ದಂತೆಯೇ ಒಂದಾನೊಂದು ಮಹಾಧ್ವನಿಯು ಕೇಳಿಬಂದಿತು. ಆ ಧ್ವನಿಯು ತಾಳೇಮರದಿಂದ ತಟತಟನೆ ಉದುರುತ್ತಿರುವ ಹಣ್ಣುಗಳಂತೆ ಧ್ವನಿಕೊಟ್ಟಿತು. ಅದೇನೆಂದು ಆಶ್ಚರ್ಯದಿಂದ ಕಣ್ಣುಬಿಟ್ಟು ಸಮರಾಂಗಣದ ಕಡೆ ನೋಡಿದಾಗ ಯುದ್ಧರಂಗದಲ್ಲಿ ಬಿದ್ದಿದ್ದ ಮನುಷ್ಯರ ಮತ್ತು ಆನೆ ಕುದುರೆಗಳ ದೇಹಗಳಿಂದ ಚಿಮ್ಮಿ ಮೇಲಕ್ಕೆ ಸರ್ರನೆ ಹಾರಿ ಕೆಳಕ್ಕೆ ಬಿದ್ದು ಹೊಳೆಯಂತೆ ಹರಿದು ಹೋಗುತ್ತಿದ್ದ ರಕ್ತದ ನದಿಗಳೆಂದು ಗೊತ್ತಾಯಿತು.

೧೪೭. ಪೂರ್ವೋಕ್ತ ಪ್ರಕಾರವಾಗಿ ಶೈಲೂಷನು ಭರತನ ಸೈನ್ಯವನ್ನು ಇಲ್ಲಿಂದಲ್ಲಿಗೆ ಅಲ್ಲೋಲಕಲ್ಲೋಲ ಮಾಡುತ್ತಾ ಕ್ರಮೇಣ ಅವನು ಭರತನ ಸಮೀಪಕ್ಕೂ ಬಂದನು.

೧೪೮. ಈರೀತಿ ತನ್ನ ಬಳಿಗೆ ಬಂದ ಶೈಲೂಷನನ್ನು ಮಹಾಪರಾಕ್ರಮಶಾಲಿಯಾದ ಭರತನು ನೋಡಿ, ಅನೇಕ ಕಿರುಗಂಟೆಗಳ ಸರಗಳಿಂದ ವ್ಯಾಪ್ತವಾದ ತನ್ನ ರಥದ ಮೇಲೆ ಕುಳಿತು ಯುದ್ಧರಂಗದಲ್ಲಿ ಉಪಸ್ಥಿತನಾದನು.

ತತಸ್ತೌ ಚಕ್ರತುರ್ಯುದ್ಧಂ ಘೋರರೂಪಂ ಭಯಾನಕಂ ।
ತ್ರೈಲೋಕ್ಯವಿಜಯಾಸಕ್ತೌ ಯಥೋಭೌ ಬಲಿವಾಸವೌ ॥ ೧೪೯ ॥

ಗಂಧರ್ವರಾಟ್ ತತಃ ಕ್ರುದ್ಧಃ ಸಿಂಹವದ್ವಿನದನ್ಮುಹುಃ ।
ಭರತಸ್ಯ ರಥಂ ತೂರ್ಣಂ ಶರವರ್ಷೈರವಾಕಿರತ್ ॥ ೧೫೦ ॥

ಕ್ರಮೇಣ ಸರಥಸ್ತಸ್ಯ ಸಹಯಃ ಸಹ ಸಾರಥಿಃ ।
ಶರವರ್ಷೇಣ ಮಹತಾ ಸಂಛನ್ನೋ ನ ಪ್ರಕಾಶಿತಃ ॥ ೧೫೧ ॥

ಯುಧಾಜಿತ್ಸ್ವಲ್ಪಸಂಭ್ರಾಂತೋ ಧೈರ್ಯಮಾಸಾದ್ಯ ವೀರ್ಯವಾನ್ ।
ಚೋದಯಾಮಾಸ ತಾನಶ್ವಾನ್ವಿಭಗ್ನಾನ್ರಿಪುಸಾಯಕೈಃ ॥ ೧೫೨ ॥

೧೪೯. ಶೈಲೂಷನೂ, ಭರತನೂ ಪರಸ್ಪರ ಜಯಾಭಿಲಾಷಿಗಳಾಗಿ ಪೂರ್ವದಲ್ಲಿ ಬಲಿಯೂ, ಇಂದ್ರನೂ ತ್ರಿಲೋಕಾಧಿಪತ್ಯ ಸಂಪಾದನೆಗಾಗಿ ಎಂತು ಹೊಡೆದಾಡಿದರೋ, ಅದೇ ಪ್ರಕಾರವಾಗಿ ಭಯಂಕರವಾದ ಘೋರಾಕಾರವಾದ ಯುದ್ಧವನ್ನಾರಂಭಿಸಿದರು. ಕೇಳೈ ! ವಜ್ರಭೂಪಾಲಕ !

೧೫೦. ಮಹಾಕೋಪದಿಂದಾಕ್ರಾಂತನಾದ ಶೈಲೂಷನು ಸಿಂಹದಂತೆ ಭಯಂಕರವಾಗಿ ಪದೇ ಪದೇ ಗರ್ಜಿಸುತ್ತಾ, ಭರತನು ಕುಳಿತಿದ್ದ ರಥವನ್ನು ಬಾಣಧಾರೆಗಳಿಂದ ಮುಚ್ಚಿಬಿಟ್ಟನು.

೧೫೧. ಮೊದಮೊದಲು ಭರತನ ರಥವೂ, ಅದಕ್ಕೆ ಕಟ್ಟಿದ್ದ ಕುದುರೆಗಳೂ, ಮೇಲೆ ಕುಳಿತಿದ್ದ ಸಾರಥಿಯಾದ ಯುಧಾಜಿತನೂ ಸಹ ಕಣ್ಣಿಗೆ ಕಾಣಿಸುತ್ತಿದ್ದರು. ಬರುಬರುತ್ತಾ ಬಾಣಗಳ ಮಳೆ ಹೆಚ್ಚಾಗಿ ಬೀಳಲಾರಂಭವಾದೊಡನೆ ಯಾವ ಪದಾರ್ಥವೂ ಕಣ್ಣಿಗೇ ಕಾಣಿಸದೆ ಬಾಣಗಳೇ ಎತ್ತೆತ್ತಲೂ ಕಾಣುತ್ತಿದ್ದವು.

೧೫೨. ಆಗ ತಾನೇ ಭರತನ ಸಾರಥ್ಯವನ್ನು ಮಾಡುತ್ತಲಿದ್ದ ಯುಧಾಜಿನ್ಮಹಾರಾಜನು ಸ್ವಲ್ಪವೂ ಅಳುಕದೆ ಬಹಳ ಧೈರ್ಯವನ್ನು ತಳೆದವನಾಗಿ, ಶತ್ರುಬಾಣಗಳಿಂದ ವ್ಯಾಪ್ತವಾಗಿದ್ದ ಕುದುರೆಗಳನ್ನು ಮುಂದಕ್ಕೆ ನುಗ್ಗಲು ಸನ್ನೆ ಮಾಡಿದನು.

ಭರತೋಽಥ ಧನುರ್ಗೃಹ್ಯ ದಿವ್ಯಂ ಜಲದನಿಃಸ್ವನಂ ।
ಶೈಲೂಷಸ್ಯ ದ್ವಿಧಾ ಚಕ್ರೇ ಕ್ಷುರಪ್ರೇಣ ಮಹದ್ಧನುಃ ॥ ೧೫೩ ॥

ಗಂಧರ್ವಶ್ಛಿನ್ನಧನ್ವಾ ಸಾ ಪುನರಸ್ಯನ್ಮಹದ್ಧನುಃ ।
ನಿಮೇಷಾಂತರಮಾತ್ರೇಣ ಸಜ್ಜಂ ಚಕ್ರೇ ಮಹಾಬಲಃ ॥ ೧೫೪ ॥

ವಿಚಕರ್ಷ ತತೋ ದೋರ್ಭ್ಯಾಂ ಚಿಕ್ಷೇಪ ಚ ತತಃ ಶರಾನ್ ।
ಅಥಾಸ್ಯ ತದಪಿ ಕ್ರುದ್ಧಶ್ಚಿಚ್ಛೇದ ಭರತೋ ಧನುಃ ॥ ೧೫೫ ॥

ತಸ್ಯ ತತ್ಪೂಜಯಾಮಾಸ ಲಾಘವಂ ತ್ರಿದಶಾಧಿಪಃ ।
ಶೈಲೂಷೋಽಪಿ ತತಃ ಕ್ರುದ್ಧಃ ಪ್ರಗೃಹ್ಯಾನ್ಯನ್ಮಹದ್ಧನುಃ ॥ ೧೫೬ ॥

---

೧೫೩. ಅಶ್ವಹೃದಯವನ್ನು ಬಲ್ಲ ಆ ಯುಧಾಜಿತನ ರಥಾಶ್ವಗಳು ಶತ್ರು ರಾಜನ ಮುಂದೆ ವೇಗದಿಂದೋಡಿ ಹೋಗಿ ನಿಂತೊಡನೆಯೇ ಭರತನು ಮೇಘನಂತೆ ಗುಡಿಗುಡಿಸುತ್ತಲಿದ್ದ ತನ್ನ ಧನುಸ್ಸನ್ನು ಕಿವಿಯತನಕ ಬಗ್ಗಿಸಿ ಶರವಂತೊಡಿಸಿ, ಆ ನಿಶಿತವಾದ ಬಾಣಗಳಿಂದ ಶೈಲೂಷನ ಕೈಯಲ್ಲಿದ್ದ ಬಿಲ್ಲಿಗೆ ಗುರಿಯಿಟ್ಟು ಹೊಡೆದು, ಆ ಧನುಸ್ಸನ್ನು ಎರಡು ಪಾಲಾಗಿ ಕತ್ತರಿಸಿಬಿಟ್ಟನು.

೧೫೪. ಭರತನು ತನ್ನ ಧನುಸ್ಸನ್ನು ತುಂಡು ತುಂಡುಮಾಡಿದೊಡನೆಯೇ ಆ ಶೈಲೂಷನು ಆ ತುಂಡನ್ನು ಬಿಸುಟು ಬೇರೊಂದು ಹೊಸ ಧನುಸ್ಸನ್ನು ಕೈಗೆ ತೆಗೆದುಕೊಂಡನು. ರೆಪ್ಪೆಮುಚ್ಚುವುದರೊಳಗಾಗಿ ಆ ಧನುಸ್ಸನ್ನು ಹದವಾಗಿ ಬಗ್ಗಿಸಿದನು.

೧೫೫. ಆಕರ್ಣಾಂತವಾಗೆಳೆದು ಬಗ್ಗಿಸಿದ ಆ ಧನುಸ್ಸಿಗೆ ಬಾಣಗಳನ್ನು ತೊಡಿಸಿ ಬಿಡುವುದರೊಳಗಾಗಿ, ಧನುರ್ವಿದ್ಯೆಯಲ್ಲಿ ಇವನಿಗೆ ಯಾವ ಭಾಗದಲ್ಲೂ ಕಡಿಮೆಯೆನಿಸದಿರುವ ಆ ಭರತನು, ಬಾಣವು ಧನುಸ್ಸಿನಿಂದ ಹೊರಡುವುದರೊಳಗಾಗಿ ಆ ಧನುರ್ಬಾಣಗಳನ್ನು ಒಟ್ಟಿಗೆ ತನ್ನ ಬಾಣಪ್ರಯೋಗದಿಂದ ತುಂಡುತುಂಡಾಗಿ ಮಾಡಿಬಿಟ್ಟನು.

೧೫೬. ಭರತನ ಈ ಚಮತ್ಕಾರವಾದ ಹಸ್ತಲಾಘವವನ್ನು ನೋಡಿ ತ್ರಿದಶೇಶ್ವರನಾದ ದೇವೇಂದ್ರನು ಬಹಳ ಸಂತೋಷಪೂರಿತನಾಗಿ ಅಲ್ಲಿಂದಲೇ ಭರತ

ವಿಮರ್ದೇ ಚ ಸಮರೇ ಬಾಣಾನ್ಬಾಣೈರಥಂ ಪ್ರತಿ ।
ಯುಧಾಜಿನ್ನಾಮತುಲಸ್ತಸ್ಯ ಸಹ ಯಾನೇನ ಲಾಘವಂ ॥ ೧೫೭ ॥

ದರ್ಶಯಾಮಾಸ ಸಮರೇ ಮೋಘಾನ್ಕುರ್ವನ್ಶರಾನ್ಬಹೂನ್ ।
ತುರಗಾಶ್ಚೋಪ್ಯಮಾನಾಸ್ತೇ ಮಂಡಲಾನೀವ ಬಭ್ರಮುಃ ॥ ೧೫೮ ॥

ಯಥಾಯಥಾ ಶರವ್ರಾತಾ ಮೋಘಾ ಯಾಂತಿ ಮಹೀತಲಂ ।
ಭರತೋಽಪಿ ಮಹಾತೇಜಾ ಮಂಡಲೀಕೃತಕಾರ್ಮುಕಃ ॥ ೧೫೯ ॥

ವೀರಕೇತುಂ ಶರವ್ರಾತೈರ್ವಿವ್ಯಾಧ ರಣಮೂರ್ಧನಿ ।
ತಾಡಿತಂ ಸಾರಥಿಂ ದೃಷ್ಟ್ವಾ ವೀರಕೇತುಂ ತಥಾ ಸುತಂ ॥ ೧೬೦ ॥

---

ನನ್ನು ಪುಷ್ಪವರ್ಷಗಳಿಂದ ಸಂಪೂಜಿಸಿದನು. ಎರಡು ಬಿಲ್ಲುಗಳೂ ಮುರಿಯಲ್ಪಟ್ಟು ದನ್ನು ನೋಡಿ ಶೈಲೂಷನಿಗೆ ಆಗಲೀಗ ಮಹತ್ತಾದ ಕೋಪವುಂಟಾಯಿತು.

೧೫೭. ಆ ಕೂಡಲೆ ಬೇರೊಂದು ಧನುಸ್ಸನ್ನು ಹಿಡಿದು ಭರತನ ರಥದ ಮೇಲೆ ಬಿಟ್ಟನು. ಈ ರೀತಿ ಶೈಲೂಷನಿಂದ ಬಾಣಪ್ರಯೋಗ ಮಾಡಲ್ಪಟ್ಟುದನ್ನು ಕಂಡು ಆ ರಥದ ಮೇಲೆ ಕುಳಿತಿದ್ದ ಭರತನ ಸೋದರಮಾವನೂ ಸಾರಥಿಯೂ ಆಗಿದ್ದ ಶೈಲೂಷನು ಆಗಲೀಗ ತನ್ನ ಕೈಚಳಕವನ್ನು ಎದುರಾಳಿಗೆ ತೋರಿಸಿದನು.

೧೫೮. ಆ ಚಳಕವೆಂತೆಂದೊಡೆ :—ಶೈಲೂಷನಿಂದ ಪ್ರಯೋಗಿಸಲ್ಪಟ್ಟ ಬಾಣ ಪರಂಪರೆಗಳೆಲ್ಲವನ್ನೂ ಯುಧಾಜಿತನು ತನ್ನ ಬಾಣಗಳಿಂದ ತುಂಡುತುಂಡುಮಾಡಿ ಪ್ರತಿಯೊಂದು ಬಾರಿಯೂ ಶೈಲೂಷನ ಬಾಣಗಳನ್ನು ವ್ಯರ್ಥಮಾಡುತ್ತ ಬಂದನು. ಮತ್ತು ರಥದ ತುರಗಗಳು ಅವನ ಬಾಣದ ಗುರಿಗೆ ಸಿಕ್ಕದಂತೆ ಆ ರಥವನ್ನು ಶತ್ರುವಿನ ಗುರಿತಪ್ಪಿಸಿ ಮಂಡಲಾಕಾರವಾಗಿ ಸುತ್ತಿಸುತ್ತಿದ್ದನು.

೧೫೯. ಶೈಲೂಷನ ಶರಗಳು ವ್ಯರ್ಥವಾದುವುಗಳಾಗಿ ಭೂಮಿಯಲ್ಲಿ ಬೀಳುತ್ತಿದ್ದ ಹಾಗೆಲ್ಲಾ ಭರತನು ತನ್ನ ಧನುಸ್ಸಿನಲ್ಲಿ ಶರಗಳನ್ನು ತೊಡಸಿ ಶತ್ರುವೀರನ ಮೇಲೆ ಬಿಡುತ್ತಿದ್ದನು.

೧೬೦. ಮತ್ತು ಆ ಭರತನು ಬೇರೆ ಕೆಲವು ಬಾಣಗಳನ್ನು ಬಿಲ್ಲಿನಲ್ಲಿ ಹೂಡಿ, ಆ ಬಾಣಗಳನ್ನು ಶೈಲೂಷನ ಸಾರಥಿಯ ಮೇಲೂ, ಶೈಲೂಷನ ಮಗನಾದ ವೀರಕೇತುವಿನ ಮೇಲೂ ಪ್ರಯೋಗಿಸಿ ಅವರನ್ನು ಚೆನ್ನಾಗಿ ತಾಡಿಸಿದನು.

**ಗಂಧರ್ವಸ್ತಾಡಯಾಮಾಸ ಸಾಯಕೈಸ್ತು ಯುಧಾಜಿತಂ ।**
**ಯುಧಾಜಿತಿ ಮಹಾಬಾಹೌ ಸಮರೇ ಭೃಶವಿಕ್ಷತೇ ॥ ೧೬೧ ॥**

**ಚಿಚ್ಛೇದ ಛತ್ರಂ ಬಾಣೇನ ಶೈಲೂಷಸ್ಯ ತು ರಾಘವಃ ।**
**ದ್ವಿತೀಯೇನ ತು ಬಾಣೇನ ಲಸಂತಂ ಧ್ವಜಮುಚ್ಛ್ರಿತಂ ॥ ೧೬೨ ॥**

**ತೃತೀಯೇನ ಧನುರ್ಮುಷ್ಟೌ ತಥಾ ಜಲದನಿಃಸ್ವನಂ ।**
**ಸ ಚ್ಛಿನ್ನಧನ್ವಾ ವೇಗೇನ ಶಕ್ತಿಮಾದಾಯ ಸತ್ವರಃ ॥ ೧೬೩ ॥**

**ವಿವ್ಯಾಧ ಭರತಂ ವೀರಂ ಭುಜೇ ವಾಮೇ ನರಾಧಿಪ ।**
**ಪ್ರಹಾರವರಭಿನ್ನಸ್ಯ ಭರತಸ್ಯ ಮಹಾತ್ಮನಃ ॥ ೧೬೪ ॥**

---

೧೬೧. ಈ ಪ್ರಕಾರವಾಗಿ ತನ್ನ ಮಗನನ್ನೂ, ತನ್ನ ಸಾರಥಿಯನ್ನೂ ಬಾಣಗಳಿಂದ ಹೊಡೆದು ಬಾಧಿಸಿದುದನ್ನು ನೋಡಿ ಶೈಲೂಷನು ಕೋಪಾಕ್ರಾಂತನಾಗಿ ಭರತನ ಸಾರಥಿಯಾದ ಯುಧಾಜಿತನ ಮೇಲೆ ಅನೇಕ ಬಾಣಗಳನ್ನು ಪ್ರಯೋಗಿಸಲು ಯುಧಾಜಿತನ ಅಂಗಾಂಗವೆಲ್ಲವೂ ಕ್ಷತವಿಕ್ಷತವಾಗಿ ಹೋಯಿತು.

೧೬೨. ಈರೀತಿ ತನ್ನ ಸೋದರಮಾವ (ಸಾರಥಿ) ಗೆ ಬಂದ ದುರವಸ್ಥೆಯನ್ನು ನೋಡಿ ಭರತನು ಕನಿಕರಗೊಂಡು ಒಂದು ಬಾಣವನ್ನು ಪ್ರಯೋಗಿಸಿ ಶೈಲೂಷನ ಛತ್ರಿಯನ್ನೂ, ಇನ್ನೊಂದು ಬಾಣಪ್ರಯೋಗದಿಂದ ಅತ್ಯುನ್ನತವಾಗಿ ರಥದ ಮೇಲೆ ಹಾರಾಡುತ್ತಿದ್ದ ಮಹಾಪ್ರಕಾಶಮಾನವಾದ ಧ್ವಜಪಟವನ್ನೂ ಕೆಡವಿಬಿಟ್ಟನು.

೧೬೩. ಮತ್ತು ಮೂರನೆಯ ಬಾಣವನ್ನು ಶೈಲೂಷನ ಕೈಯಲ್ಲಿದ್ದ ಧನುಸ್ಸಿಗೆ ಗುರಿಯಿಟ್ಟು ಹೊಡೆದು ಅದನ್ನು ತುಂಡುತುಂಡುಮಾಡಿದನು. ಯಾವಾಗ ಈಗಲೂ ತನ್ನ ಧನುಸ್ಸು ಕತ್ತರಿಸಿಹೋಯಿತೋ, ಆಗಲೀಗ ಶೈಲೂಷನಿಗೆ ಮಹತ್ತಾದ ಕೋಪವುಂಟಾಗಿ ಬಲುವೇಗದಿಂದ ತನ್ನ ಬಳಿಯಿದ್ದ ಒಂದು ಶಕ್ತಿಯನ್ನು ಕೈಯಲ್ಲಿ ಧರಿಸಿದನು.

೧೬೪. ಈರೀತಿಯಾಗಿ ಆ ಶಕ್ತಿಯನ್ನು ಹಿಡಿದುಕೊಂಡು ಆ ಶೈಲೂಷನು ಅದನ್ನು ಭರತನ ಎಡತೋಳಿಗೆ ಗುರಿಯಿಟ್ಟು ಎಸೆದನು. ಅದು ಗುಡುಗಿನಂತೆ ಸದ್ದು

**ಕರಾತ್ಪಪಾತ ವೇಗೇನ ಚಾಪಶ್ಚಾಪಧರಸ್ಯ ಚ ।**
**ಅಥಾನ್ಯದ್ಧನುರಾದಾಯ ಭರತೋ ರಘುನಂದನಃ ॥ ೧೬೪ ॥**

**ಶರೈರನೇಕಸಾಹಸ್ರೈರ್ಗಂಧರ್ವಂ ತಮವಾಕಿರತ್ ।**
**ಪಾತಯಾಮಾಸ ಚ ತಥಾ ಕವಚಂ ರತ್ನಭೂಷಿತಂ ॥ ೧೬೬ ॥**

**ಆಪದಂ ಪರಮಾಂ ಪ್ರಾಪ್ತಃ ಶೈಲೂಷೋಽಪ್ಯಥ ಸತ್ವರಃ ।**
**ಆಗ್ನೇಯಮಸ್ತ್ರಂ ಚಿಕ್ಷೇಪ ಭರತಂ ಪ್ರತಿ ವೀರ್ಯವಾನ್ ॥ ೧೬೭ ॥**

**ವಾರುಣೇನ ತದಸ್ತ್ರಂ ತು ಶಮಯಾಮಾಸ ರಾಘವಃ ।**
**ವಾಯುವ್ಯಮಸ್ತ್ರಂ ಶೈಲೂಷಸ್ತದಾ ಚಿಕ್ಷೇಪ ಪಾರ್ಥಿವ ॥ ೧೬೮ ॥**

---

ಮಾಡುತ್ತಾ ಹೋಗಿ ಭರತನ ಎಡಭುಜಕ್ಕೆ ತಾಕಿ ಅವನಿಗೆ ಬಹಳ ನೋವನ್ನುಂಟು ಮಾಡಿತು.

೧೬೪. ಆ ಏಟಿಗೆ ಭರತನ ಕೈಯಲ್ಲಿದ್ದ ಧನುಸ್ಸು ಕೆಳಕ್ಕೆ ಬಿದ್ದುಹೋಯಿತು. ಈರೀತಿ ನೆಲದ ಮೇಲೆ ಬಿದ್ದುಹೋದ ಆ ಧನುಸ್ಸನ್ನು ಬಿಟ್ಟು ಭರತನು ಬೇರೊಂದು ಧನುಸ್ಸನ್ನು ಕೈಗೆ ತೆಗೆದುಕೊಂಡನು.

೧೬೬. ಆ ಹೊಸ ಧನುಸ್ಸಿನಲ್ಲಿ ಅನೇಕ ಸಾವಿರ ಬಾಣಗಳನ್ನು ಹೂಡಿ ಶೈಲೂಷನ ಕವಚದ ಮೇಲೆ ಪ್ರಯೋಗಿಸಲಾಗಿ ಆ ಬಾಣಗಳು ರತ್ನಖಚಿತವಾದ ಶೈಲೂಷನ ಕವಚವನ್ನು ಭೇದಿಸಿಬಿಟ್ಟವು.

೧೬೭. ತನ್ನ ಕವಚವನ್ನು ಭೇದಿಸಿ ಆ ಬಾಣಗಳು ಯಾವಾಗ ತನ್ನನ್ನು ಹಿಂಸಿಸಿದುವೋ ಆಗಲಾ ಶೈಲೂಷನು ಮಹತ್ತಾದ ವಿಪತ್ತಿಗೆ ಸಿಕ್ಕಿದವನಾಗಿ ಆಗ್ನೇಯಾಸ್ತ್ರವನ್ನಭಿಮಂತ್ರಿಸಿ ಭರತನ ಮೇಲೆ ಬಿಟ್ಟನು.

೧೬೮. ಭರತನು ಆ ಆಗ್ನೇಯಾಸ್ತ್ರವನ್ನು ವಾರುಣಾಸ್ತ್ರದಿಂದ ಶಮನಗೊಳಿಸಿ, ಆ ಕೂಡಲೆ ವಾಯುವ್ಯಾಸ್ತ್ರವನ್ನಭಿಮಂತ್ರಿಸಿ ಆ ಶೈಲೂಷನ ಮೇಲೆ ವೇಗದಿಂದ ಪ್ರಯೋಗಿಸಿದನು.

ಶೈಲಾಸ್ತ್ರೇಣಾಥ ಭರತಃ ಶಮಯಾಮಾಸ ರಾಘವಃ ।
ಶೈಲಾಸ್ತ್ರಮಥ ಚಿಕ್ಷೇಪ ಗಂಧರ್ವನೃಪತಿಸ್ತಥಾ ॥ ೧೬೯ ॥

ವಜ್ರೇಣಾಸ್ತ್ರೇಣ ತತ್ಕ್ರುದ್ಧಃ ಶಮಯಾಮಾಸ ರಾಘವಃ ।
ಉತ್ಸಸರ್ಜ ತತೋ ರಾಜಾ ಬ್ರಹ್ಮಾಸ್ತ್ರಂ ಪ್ರಾಣಸಂಶಯೇ ॥ ೧೭೦ ॥

ಕಾಕುತ್ಸ್ಥಃ ಶಮಯಾಮಾಸ ಬ್ರಹ್ಮಾಸ್ತ್ರೇಣೈವ ತತ್ತದಾ ।
ಅಸ್ತ್ರಯುದ್ಧೇ ವ್ಯತಿಕ್ರಾಂತೇ ಕ್ರೋಧಾತ್ತಾರಕ್ತಲೋಚನಃ ॥ ೧೭೧ ॥

ಜಘಾನ ಚತುರೋ ವಾಹಾನ್ಭರತಸ್ಯ ಸ ಸಾಯಕೈಃ ।
ವೀರಕೇತೋಶ್ಚ ಚಿಚ್ಛೇದ ಶಿರೋ ಜ್ವಲಿತಕುಂಡಲಂ ॥ ೧೭೨ ॥

---

೧೬೯. ತನ್ನ ಮೇಲೆ ಪ್ರಯೋಗಿಸಲ್ಪಟ್ಟ ವಾಯುವ್ಯಾಸ್ತ್ರವನ್ನು ಶೈಲೂಷನು ಶೈಲಾಸ್ತ್ರದಿಂದ ತಡೆದನು. ಆ ಶೈಲಾಸ್ತ್ರವನ್ನೇ ಪುನಃ ಭರತನಮೇಲೆ ಪ್ರಯೋಗಿಸಿದನು.

೧೭೦. ಆಗ ಭರತನು ತೀವ್ರಕೋಪಭರಿತನಾಗಿ ವಜ್ರಾಸ್ತ್ರವನ್ನು ಪ್ರಯೋಗಿಸಿ ಆ ಶೈಲಾಸ್ತ್ರವನ್ನು ಕತ್ತರಿಸಿಬಿಟ್ಟನು. ಶೈಲೂಷನು ತನ್ನ ಶೈಲಾಸ್ತ್ರವೂ ಸಹ ಶಮನವಾದುದನ್ನು ನೋಡಿ ಭರತನ ಪ್ರಾಣಗಳನ್ನು ಹೀರಿಬಿಡಬೇಕೆಂದು ಅವನ ಮೇಲೆ ಬ್ರಹ್ಮಾಸ್ತ್ರವನ್ನು ಪ್ರಯೋಗಮಾಡಿದನು.

೧೭೧. ಆಗ ಭರತನು ತನ್ನ ಮೇಲೇರಿ ಬರುತ್ತಿದ್ದ ಬ್ರಹ್ಮಾಸ್ತ್ರವನ್ನು ನೋಡಿ, ತಾನೂ ಸಹ ಅದೇ ಬ್ರಹ್ಮಾಸ್ತ್ರವನ್ನೇ ತೊಟ್ಟು ಅದನ್ನು ಪ್ರಯೋಗಿಸಿ ಶೈಲೂಷನಿಂದ ಪ್ರಯುಕ್ತವಾದ ಬ್ರಹ್ಮಾಸ್ತ್ರವನ್ನು ಶಾಂತಮಾಡಿದನು.

೧೭೨. ತನ್ನ ಬ್ರಹ್ಮಾಸ್ತ್ರವೂ ಸಹ ನಾಶವಾದುದನ್ನು ನೋಡಿ ಶೈಲೂಷನು ಏನೂ ತೋರದೆ ತನ್ನ ಅಸ್ತ್ರಯುದ್ಧವು ಇಲ್ಲಿಗೆ ಮುಗಿಯಿತೆಂದು ಭಾವಿಸಿ ತೂಷ್ಣೀಂಭೂತನಾದನು. (ಸುಮ್ಮನಾದನು.) ಆದರೂ ಬಹಳ ಕ್ರೋಧಾವಿಷ್ಟನಾಗಿ ಕೆಲವು ಸಾಮಾನ್ಯ ಬಾಣಗಳನ್ನು ಪುನಃ ಧನುಸ್ಸಿನಲ್ಲಿ ಹೂಡಿ ಭರತನ ರಥಕ್ಕೆ ಕಟ್ಟಿದ್ದ ಕುದುರೆಗಳನ್ನು ಕೊಂದುಬಿಟ್ಟನು. ತನ್ನ ರಥಾಶ್ವಗಳು ಸಂಹೃತವಾದೊಡನೆಯೇ ಭರತನು ಮಿತಿಮೀರಿದ ಕೋಪವುಳ್ಳವನಾಗಿ ಶೈಲೂಷನ ಮಗನಾದ ವೀರಕೇತುವಿನ ಶಿರಸ್ಸನ್ನು ಕುಂಡಲ ಸಹಿತವಾಗಿ ಕತ್ತರಿಸಿ ಕೆಡವಿದನು.

ತಸ್ಯ ರಾಜ್ಞಶ್ಚ ಚಿಚ್ಛೇದ ಮುಕುಟಂ ರತ್ನಭೂಷಿತಂ ।
ಉವಾಚ ಭರತಶ್ರೇಷ್ಠಃ ಶೈಲೂಷಂ ಪ್ರಹಸಂಸ್ತದಾ ॥ ೧೭೩ ॥

ಕೃತಕರ್ಮಾ ರಣಶ್ರಾಂತೋ ಗಚ್ಛಾದ್ಯ ಸ್ವಂ ನಿವೇಶನಂ ।
ತತ್ರ ಗತ್ವಾ ತತೋ ಯಾತಃ ಪರ್ವತಂ ಗಂಧಮಾದನಂ ॥ ೧೭೪ ॥

ಅನ್ಯಥಾ ಶ್ವೋ ನ ಮೇ ಜೀವನ್ಗಂತಾಸಿ ರಣಮೂರ್ಧನಿ ।
ಅಸ್ತಂ ಚ ಸವಿತಾ ಯಾತಿ ಕೃತಕರ್ಮಾ ದಿನಕ್ಷಯೇ ॥ ೧೭೫ ॥

ವಯಂ ಚ ಶಿಬಿರಾಯೈವ ಗಮಿಷ್ಯಾಮೋ ಜನಾಧಿಪ ।
ಏತಾವದುಕ್ತ್ವಾ ಶೈಲೂಷಂ ಚೋತ್ಸೃಜ್ಯ ಭರತಸ್ತದಾ ।
ಕೃತ್ವಾವಹಾರಂ ಪ್ರಯಯೌ ಶಿಬಿರಾಯೈವ ರಾಘವ ॥ ೧೭೬ ॥

---

೧೭೩. ಮತ್ತೆ ಬೇರೆ ಬಾಣವನ್ನು ಗುರಿಯಿಟ್ಟು ಶೈಲೂಷನ ಕಿರೀಟಕ್ಕೆ ಹೊಡೆದು ರತ್ನಭೂಷಿತವಾದ ಆ ಕಿರೀಟವನ್ನು ಗಗನಾಂತರಾಳಕ್ಕೆ ಹಾರಿಸಿದನು. ಇಷ್ಟು ಕೆಲಸವನ್ನು ಮಾಡಿದ ಬಳಿಕ ಭರತನು ಶೈಲೂಷನನ್ನು ಹಾಸ್ಯಮಾಡಿಕೊಂಡು ನಗುತ್ತಾ ಈ ಮಾತನ್ನು ಹೇಳಿದನು.

೧೭೪. ಎಲೋ! ಶೈಲೂಷ! ನೀನು ಮಾಡಬೇಕಾಗಿದ್ದ ಕೆಲಸವೆಲ್ಲವೂ ಮುಗಿಯಿತಷ್ಟೇ? ಪಾಪ! ನೀನೆಷ್ಟು ದಣಿದಿರುವಿಯೋ? ಏನೋ? ಈಗಲಾದರೂ ಮನೆಗೆ ಹೋಗಪ್ಪ! ಮನೆಗೆ ಹೋಗಿ ಬುದ್ಧಿಯನ್ನುಪಯೋಗಿಸಿಕೊಂಡು ಯೋಚನೆ ಮಾಡು. ಏತಕ್ಕೆ ನನ್ನ ಸಂಗಡ ಸೆಣಸಿ ವ್ಯರ್ಥವಾಗಿ ಸತ್ತುಹೋಗುತ್ತೀಯಪ್ಪ! ಇತ್ತ ಕಡೆ ತಿರುಗದೆ ನಾಳೆಯದಿನ ಹಾಗಿಂದ ಹಾಗೆಯೇ ಗಂಧಮಾದನ ಪರ್ವತಕ್ಕೆ ಹೊರಟುಹೋಗು. ಆಗ ಸುಖವಾಗಿ ಬದುಕಿಕೊಳ್ಳುತ್ತೀ!

೧೭೫. ಹಾಗೇನಾದರೂ ನನ್ನ ಮಾತನ್ನು ಕೇಳದೆ ಪುನಃ ಯುದ್ಧವನ್ನಾರಂಭಿಸುವುದಾದರೆ ನೀನು ಬೇರೇ ಜೀವಸಹಿತವಾಗಿ ಹಿಂತಿರುಗುವ ಹಾಗಿಲ್ಲವಯ್ಯ! ಹೋಗು! ಹೋಗು! ಈ ದಿನ ನಮ್ಮ ಯುದ್ಧವು ಮುಗಿಯಿತು. ಸೂರ್ಯನು ಹಗಲುಹೊತ್ತು ಮಾಡಬೇಕಾಗಿದ್ದ ಕೆಲಸವೂ ಮುಗಿಯಿತು. ಅವನು ಅಸ್ತಪರ್ವತದಲ್ಲಿಳಿದು ವಿಶ್ರಾಂತಿಗೋಸ್ಕರ ಹೊರಟನು.

೧೭೬. ಸಾಯಂಕಾಲವಾಯಿತು. ನಾವೆಲ್ಲರೂ ಶಿಬಿರದ ಕಡೆಗೆ ಹೊರಡುತ್ತೇವೆ. ಎಲೈ ಗಂಧರ್ವರಾಜನೇ! ನೀನಿನ್ನು ನಿನ್ನ ಮನೆಗೆ ಹೊರಡಬಹುದೆಂದು ಹೇಳಿ ಅವನನ್ನು ಮನೆಗೆ ಕಳುಹಿಸಿ, ಭರತನು ತಾನೂ ಸಹ ಯುದ್ಧಕ್ರಿಯೆಯನ್ನು ಮುಗಿಸಿ ಶಿಬಿರದ ಕಡೆಗೆ ತೆರಳಿದನು.

ಗಂಧರ್ವರಾಜೋಽಥ ಗೃಹಂ ಪ್ರವಿಶ್ಯ
ನಿಶ್ಚಿತ್ಯಕಾರ್ಯಂ ಮರಣಾಯ ಬುದ್ಧಿಂ ।
ಕೃತ್ವಾ ರಣಾಯೈವ ಮನಶ್ಚಕಾರ
ರಾತ್ರಿಂ ತಥೋವಾಹ ಗೃಹೇ ನರೇಂದ್ರಃ ॥ ೧೭೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ದ್ವಂದ್ವಯುದ್ಧವರ್ಣನಂನಾಮೈಕ
ಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ.

---

೧೭೭. ಭರತನ ಮಾತನ್ನು ಕೇಳಿಕೊಂಡು ಶೈಲೂಷನು ಏನೂ ಮಾತನಾಡದೆ ಸುಮ್ಮನೆ ತನ್ನ ಮನೆಗೆ ಹೊರಟುಹೋದನು. ಆಗ ತನ್ನ ಮನೆಯಲ್ಲಿ ಕುಳಿತು ಆಲೋಚಿಸಿದವನಾಗಿ ತಾನಿನ್ನು ಬದುಕುವ ಹಾಗಿಲ್ಲವೆಂದು ನಿಶ್ಚಯಿಸಿ, ಭರತನ ಮಾತಿನಂತೆ ಪ್ರಾಣಗಳನ್ನುಳಿಸಿಕೊಂಡು ಗಂಧಮಾದನ ಪರ್ವತಕ್ಕೆ ಹೋಗಿ ಅಲ್ಲಿ ಜೀವಸಹಿತ ಸುಖವಾಗಿರುವುದೊಳ್ಳೆಯದೇ? ಅಥವಾ ರಣರಂಗದಲ್ಲಿ ನುಗ್ಗಿ ಪ್ರಾಣತ್ಯಾಗಮಾಡಿ ವೀರಜನೋಚಿತವಾದ ಸ್ವರ್ಗವನ್ನಡರುವುದೇ? ಎಂದು ಬಹಳ ಹೊತ್ತು ಯೋಚಿಸಿ, ಕಡೆಗೆ ವೀರಮರಣವೇ ಒಳ್ಳೆಯದೆಂದು ನಿರ್ಧರಿಸಿದವನಾಗಿ ಆ ರಾತ್ರಿಯನ್ನು ಅಂತೂ ಹೇಗೋ ಕಳೆದನು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ದ್ವಂದ್ವಯುದ್ಧವರ್ಣನೆಯೆಂಬ
ಹೆಸರಿನ ಇನ್ನೂರರವತ್ತೊಂದನೆಯ ಅಧ್ಯಾಯ
ಮುಗಿದುದು.

|| ಶ್ರೀಃ ||

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ ದ್ವಿಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ತತೋ ರಜನ್ಯಾಂ ವ್ಯುಷ್ಟಾಯಾಂ ಮರಣೇ ಕೃತನಿಶ್ಚಯಃ ।
ಸನ್ನಹ್ಯತ ವಿನಾ ವ್ಯೂಹಂ ಭರತಂ ಪ್ರತ್ಯುದೈಕ್ಷತ ॥ ೧ ॥

ಭರತೋಽಪಿ ಮಹಾತೇಜಾಃ ಕೃತಪೂರ್ವಾಹ್ಣಿಕಕ್ರಿಯಃ ।
ನಿರ್ಗಮ್ಯ ನಗರಾತ್ಸರ್ವಾನ್ಪಾರ್ಥಿವಾನಿದಮಬ್ರವೀತ್ ॥ ೨ ॥

---

## ಇನ್ನೂರರವತ್ತೆರಡನೆಯ ಅಧ್ಯಾಯವು.

೧. ಮಾರ್ಕಂಡೇಯನು ವಜ್ರಮಹಾರಾಜನೊಡನೆ ಹೇಳುತ್ತಾನೆ:—ಆ ರಾತ್ರಿ ಕಳೆದು ಬೆಳಗಾಗಲು ಶೈಲೂಷನು, ತಾನಿನ್ನು ಬದುಕುವುದಿಲ್ಲವೆಂದು ನಿಶ್ಚಯಿಸಿಕೊಂಡವನಾಗಿ ತನ್ನ ಸಕಲ ಸೈನ್ಯಗಳನ್ನೂ ಊರಿನಲ್ಲಿಯೇ ಬಿಟ್ಟು ತಾನೊಬ್ಬನೇ ಯುದ್ಧಮಾಡುವುದಕ್ಕಾಗಿ ರಣಭೂಮಿಗೆ ತೆರಳಿದನು.

೨. ಭರತನೂ ಸಹ ಆ ರಾತ್ರಿಯನ್ನು ಕಳೆದು ಬೆಳಗಾದೊಡನೆಯೇ ಮೇಲಕ್ಕೆದ್ದು ಸ್ನಾನಮಾಡಿ ಪ್ರಾತರಾಹ್ನಿಕಗಳನ್ನು ನೆರವೇರಿಸಿದವನಾಗಿ ಶಿಬಿರವನ್ನು ಬಿಟ್ಟು ಯುದ್ಧರಂಗಕ್ಕೆ ಹೊರಡುವುದಕ್ಕಿಂತ ಮುಂಚಿತವಾಗಿ, ಉಳಿದ ರಾಜರನ್ನು ಕುರಿತಿಂತೆಂದನು:—

ಗಂಧರ್ವೈರ್ಭವತಾಂ ಯುದ್ಧಂ ಮಮ ಬುದ್ಧ್ಯಾ ನ ರೋಚತೇ ।
ಏಕ ಏವ ಸಮರ್ಥೋಽಹಂ ಯುಷ್ಮಾಕಂ ತೇಜಸಾ ನೃಪಾಃ ॥ ೩ ॥

ಹಂತುಂ ಗಂಧರ್ವಸೈನ್ಯಂ ತತ್ಭವದ್ಭಿಃ ಪರಿಪೀಡಿತಂ ।
ಯುಧ್ಯಮಾನಾ ಭವಂತಶ್ಚ ರಕ್ಷಿತವ್ಯಾ ಮಯಾ ರಣೇ ॥ ೪ ॥

ಸಕಳತ್ರಾಂಸ್ತತೋ ಭೂಪಾನೇತಾನ್ಯಕ್ಷ್ಯೇಮಿ ಘಾತಿತುಂ ।
ಭವತಾಮಾರ್ಜವಂ ಯುದ್ಧೇ ಗಂಧರ್ವಾಃ ಕೂಟಯೋಧಿನಃ ॥ ೫ ॥

ಅದ್ಯ ತಾನ್ನ್ಯಾಯಯುಕ್ತೈಃ ಸರ್ವಾನ್ದಿವ್ಯಾಸ್ತ್ರಪ್ರತಿಮಂತ್ರಿತೈಃ ।
ಘಾತಯಿಷ್ಯಾಮಿ ಭೂಪಾಲಾಂಸ್ತದನುಜ್ಞಾತುಮರ್ಹಥ ॥ ೬ ॥

---

೩. ಎಲೈ ಸಾಮಂತನರಪತಿಗಳಿರಾ! ನೀವು ಈದಿನ ಗಂಧರ್ವರೊಡನೆ ಕೂಡಿ ಯುದ್ಧಮಾಡುವ ವಿಷಯದಲ್ಲಿ ನನಗೆ ಸುತರಾಂ ಅಭಿಪ್ರಾಯವಿಲ್ಲ. ನಿಮ್ಮೆಲ್ಲರ ತೇಜಸ್ಸಿನಿಂದೊಡಗೂಡಿ ನಾನೊಬ್ಬನೇ ಆ ಗಂಧರ್ವರ ಸಂಗಡ ಯುದ್ಧಮಾಡಿ ಜಯಿಸಿ ಬರುತ್ತೇನೆ.

೪. ನಾನು ಈಗ ಆ ಗಂಧರ್ವರ ಸೈನ್ಯವನ್ನು ಸಂಹರಿಸಲು ನನಗೆ ಏನೂ ಸ್ವಲ್ಪವೂ ಆಯಾಸವಾಗುವುದಿಲ್ಲ. ಏಕೆಂದರೆ ಅವರೆಲ್ಲರನ್ನೂ ನೀವು ಸಿನ್ನೆಯೇ ಹೊಡೆದು ಅರ್ಧಾಯುಷ್ಕರನ್ನಾಗಿಮಾಡಿರುತ್ತೀರಿ. ಆದ್ದರಿಂದ ನೀವು ಈಗ ನನ್ನಿಂದ ಸಂರಕ್ಷಿಸಲ್ಪಡಲು ಅರ್ಹರಾಗಿರುತ್ತೀರಿ.

೫. ಸಕಳತ್ರ ಸಪರಿವಾರರಾದ ಗಂಧರ್ವಶ್ರೇಷ್ಠರನ್ನು ನಾನೊಬ್ಬನೇ ಸಂಹರಿಸಲು ಶಕ್ತನಾಗಿದ್ದೇನೆ. ನೀವು ನ್ಯಾಯವಾಗಿ ಧರ್ಮಯುದ್ಧವನ್ನು ಮಾಡುವುದರಲ್ಲಿ ಶಕ್ತರಾಗಿರುವಿರಾದರೆ, ಆ ಗಂಧರ್ವರು ಕೂಟಯುದ್ಧ (ಮೋಸ) ವನ್ನು ಮಾಡಿ ಮರೆಯಲ್ಲಿ ಕತ್ತುಕತ್ತರಿಸುವ ಮಹಾಪಾಪಿಗಳಾಗಿರುತ್ತಾರೆ.

೬. ಇಂತಹ ಯುದ್ಧವಂಚಕರನ್ನು ನಾನು ಅಭಿಮಂತ್ರಿತವಾದ ದಿವ್ಯಾಸ್ತ್ರಗಳ ಪ್ರಯೋಗದಿಂದ ಸಂಹರಿಸಿ ಬರುತ್ತೇನೆ. ಈ ನನ್ನ ಪ್ರಯತ್ನಕ್ಕೆ ತಾವೆಲ್ಲರೂ ಅಭಿಮತ ಕೊಡಬೇಕು.

ಭರತೇನೈವ ಮುಕ್ತಾಸ್ತು ರಾಜಾನೋ ವಾಕ್ಯಮಬ್ರುವನ್ ।
ತ್ವಯಾ ಕಲತ್ರಮಸ್ಮಾಕಂ ರಕ್ಷ್ಯಂ ಸ್ವಾಮಿನ್ಪ್ರಯತ್ನತಃ ॥ ೭ ॥

ಭವತೋ ರಕ್ಷಣಂ ಕಾರ್ಯಂ ಸಮಸ್ತೈರ್ವಸುಧಾಧಿಪೈಃ ।
ಪತ್ರಚ್ಛೇದೇ ಫಲಚ್ಛೇದೇ ವೃಕ್ಷಃ ಶಾಖಾವಕರ್ತನೇ ॥ ೮ ॥

ಭೂಯೋ ವೃದ್ಧಿಮವಾಪ್ನೋತಿ ಮೂಲಚ್ಛೇದೇ ವಿನಶ್ಯತಿ ।
ತೇ ವಯಂ ಭವತಾಂ ವೀರ್ಯಂ ಜಾನಂತೋಽಪಿ ರಘೂದ್ವಹ ॥ ೯ ॥

ನೈಕಂ ಸಂತ್ಯಕ್ತುಮಿಚ್ಛಾಮೋ ಭವಂತಂ ರಣಮೂರ್ಧನಿ ।
ಏಕೈಕಸ್ಯ ತಥಾಽಸ್ಮಾಕಂ ಗಂಧರ್ವಾಣಾಂ ಮಹದ್ಬಲಂ ॥ ೧೦ ॥

೭. ಭರತನಿಂದ ಹೇಳಲ್ಪಟ್ಟ ಈ ಮಾತುಗಳನ್ನು ಕೇಳಿದೊಡನೆಯೇ ಆತನ ಸಾಮಂತರಾಜರು ಹೇಳಿದುದೇನೆಂದರೆ:—ಸ್ವಾಮಿ! ನೀವು ನಮ್ಮ ನಮ್ಮ ಹೆಂಡತಿಯರನ್ನೂ ಮಕ್ಕಳನ್ನೂ ಕಾಪಾಡಿಕೊಂಡಿರೋಣವಾಗಲಿ.

೮. ನಾವೆಲ್ಲರೂ ಒಟ್ಟುಗೂಡಿ ಗಂಧರ್ವರೊಡನೆ ಯುದ್ಧಮಾಡಿ ಅವರನ್ನು ಸಂಹಾರಮಾಡಿ ಬರುತ್ತೇವೆ. ನೀವು ಖಂಡಿತವಾಗಿ ಯುದ್ಧಕ್ಕೆ ಒಬ್ಬರೇ ಹೋಗಕೂಡದು. ಒಂದು ಮರದಲ್ಲಿ ಬಿಟ್ಟಿರುವ ಎಲೆಯನ್ನಾಗಲಿ, ಹಣ್ಣನ್ನಾಗಲಿ, ಹೂವನ್ನಾಗಲಿ, ಕೊಂಬೆಯನ್ನಾಗಲಿ ಕತ್ತರಿಸಿದರೆ ಆ ಮರವು ಪುನಃ ಪುನಃ ಚಿಗುರುತ್ತಾ ಬರುವುದೇ ಹೊರತು, ದೊಡ್ಡಮರವು ಮಾತ್ರ ಯಾವಾಗಲೂ ನಾಶವಾಗುವುದಿಲ್ಲ.

೯. ಅದು ಪುನಃ ಪುನಃ ಕಸಿಮಾಡಿದಂತೆ ಹೆಚ್ಚು ಹೆಚ್ಚಾಗಿ ಸೊಂಪಾಗಿಯೇ ವೃದ್ಧಿಹೊಂದುತ್ತ ಬರುತ್ತದೆ. ಆದರೆ ಆ ಮರದ ಬುಡವನ್ನೇ ಕಡಿದುಬಿಟ್ಟರೆ ಆಗಲೀಗ ಅದು ಸಹಮೂಲವಾಗಿ ನಾಶಹೊಂದುತ್ತದೆ. ನೀನು ಅದರಂತೆಯೇ ಶತ್ರುವನ್ನು ನಿರ್ಮೂಲಮಾಡಿ ಬರುವ ಶಕ್ತಿಯನ್ನು ಹೊಂದಿರುತ್ತೀಯೆಂಬ ವಿಷಯವನ್ನು ನಾವು ಚೆನ್ನಾಗಿ ಬಲ್ಲೆನಾದರೂ:—

೧೦. ನಿನ್ನನ್ನೊಬ್ಬನನ್ನೇ ರಣಮುಖದಲ್ಲಿ ಬಿಟ್ಟುಬರಲು ನಮಗೆ ಸುತರಾಂ ಇಷ್ಟವಿಲ್ಲ. ಶೂರರಾದ ನಮ್ಮಲ್ಲಿ ಒಬ್ಬೊಬ್ಬರೂ ಆ ಗಂಧರ್ವವಂಶವನ್ನೇ ನಿರ್ಮೂಲಮಾಡಬಲ್ಲ ಶಕ್ತಿಯನ್ನು ಹೊಂದಿರುತ್ತೇವೆಂಬುದನ್ನು ನೀನೂ ಸಹ ತಿಳಿದೇ ಇರುತ್ತೀಯೆ!

**ವಯಂ ರಣೇ ಹಿ ಪರ್ಯ್ಯಾಪ್ತಾಃ ಕಿಂ ಪುನಸ್ತವ ಪಾರ್ಥಿವ ।**
**ಕಿಂತು ಭೃತ್ಯೇಷು ತಿಷ್ಠತ್ಸು ಸ್ವಾಮಿನೋ ಗರ್ಹಿತಂ ರಣಂ ॥ ೧೧ ॥**

**ತೇ ವಯಂ ಘಾತಯಿಷ್ಯಾಮೋ ಗಂಧರ್ವಾನದ್ಯ ಸತ್ವರಂ ।**
**ಏವಮುಕ್ತೋ ಮಹಾತೇಜಾ ಭರತೋ ನೃಪಸತ್ತಮೈಃ ॥ ೧೨ ॥**

**ವಾರಯಾಮಾಸ ಸಾಂತ್ವೇನ ತತಸ್ತು ವಸುಧಾಧಿಪಾನ್ ।**
**ಶಾಪಿತಾಃ ಸ್ಥ ಮಮ ಪ್ರಾಣೈಃ ರಾಜ್ಞೋ ರಾಮಸ್ಯ ಚಾಪ್ಯಥ ॥ ೧೩ ॥**

**ಅದ್ಯೈವ ವಿನಿವರ್ತಧ್ವಂ ಸಂಗ್ರಾಮಾತ್ಪೃಥಿವೀಕ್ಷಿತಃ ।**
**ಸಂಯತೈಶ್ಚ ಮಹದ್ಯುದ್ಧಂ ಪಶ್ಯದ್ಭಿರ್ಮಮ ಪಾರ್ಥಿವೈಃ ॥ ೧೪ ॥**

---

೧೧. ಈರೀತಿ ಶತ್ರುನಿಗ್ರಹಮಾಡಲು ಶಕ್ತರಾದ ನಾವೆಲ್ಲರೂ ಇರುವಲ್ಲಿ ನೀನೇಕೆ ಕಷ್ಟಪಡಬೇಕು ? ಭೃತ್ಯರಾದ ನಾವಿಷ್ಟು ಜನರೂ ನಿನಗೋಸ್ಕರ ಯುದ್ಧಮಾಡಲು ಕಾದಿರುವಾಗ ನೀನು ಯುದ್ಧಕ್ಕೆ ಹೋಗುವುದೆಂಬುದು ನಮಗೆ ಅವಮಾನಕರವಾದ ಸಂಗತಿಯಾಗಿದೆ.

೧೨. ಆದ್ದರಿಂದ ನೀನಿಲ್ಲಿಯೇ ನಿಲ್ಲು, ನಾವೆಲ್ಲರೂ ಹೋಗಿ ಆ ಗಂಧರ್ವರನ್ನು ಸಂಹರಿಸಿ ಬರುತ್ತೇವೆ. ಈರೀತಿಯಾಗಿ ಆ ಸಮಸ್ತರಾಜರೂ ಏಕಕಂಠದಿಂದ ಭರತನನ್ನು ಕುರಿತು ವಿಜ್ಞಾಪಿಸಿಕೊಳ್ಳಲು ;

೧೩. ಆಗ ಆ ಭರತನು ಅವರನ್ನು ಸಾಂತ್ವವಾಕ್ಯಗಳಿಂದ ಅಲ್ಲಿಯೇ ತಡೆದು ನಿಲ್ಲಿಸಿ ಅದಕ್ಕೆ ಅವರು ಒಪ್ಪದಿರಲು, ಭರತನು ಒಂದು ಕ್ರೂರವಾದ ಪ್ರತಿಜ್ಞೆಯನ್ನು ಅವರ ಮುಂದೆ ಮಾಡಿಬಿಟ್ಟನು. ನೀವೇನಾದರೂ ನನ್ನ ಮಾತನ್ನು ಮೀರಿ ಯುದ್ಧಕ್ಕೆ ಹೋಗುವುದಾದರೆ ನನ್ನ ಮೇಲೆ ಆಣೆ. ರಾಮನ ಪಾದದ ಆಣೆ.

೧೪. ನೀವು ನನ್ನ ಮಾತಿಗೆ ಪ್ರತಿಯಾಡದೆ ಈ ರಣರಂಗದ ಎಲ್ಲೆಯನ್ನು ಬಿಟ್ಟು ಹಿಂದಕ್ಕೆ ಹೊರಟುಹೋಗಿರೆಂದು ಭರತನು ಆಣೆಯಿಟ್ಟುಕೊಂಡನು. ನೀವು ದೂರದಲ್ಲಿ ಬೇಕಾದರೆ ನಿಂತು ನಾನು ಗಂಧರ್ವರೊಡನೆ ಮಾಡುವ ಯುದ್ಧವನ್ನು ನೋಡುತ್ತಲಿರಬೇಕೇ ಹೊರತು ನೀವಿನ್ನೇನೂ ಮಾಡಬೇಕಾಗಿಲ್ಲ.

ಇತ್ಯೇವಮುಕ್ತಾಃ ಕೃಚ್ಛ್ರೇಣ ರಣಂ ಮುಕ್ತ್ವಾ ನರಾಧಿಪಾಃ ।
ಏಕಾಂತಸ್ಥಾಃ ಸುಸನ್ನದ್ಧಾ ದದೃಶುಸ್ತನ್ಮಹದ್ರಣಂ ॥ ೧೫ ॥

ಏಕಸ್ಯ ಚ ಬಹೂನಾಂ ಚ ಯಮರಾಷ್ಟ್ರವಿವರ್ಧನಂ ।
ರಥೇನ ಕಾಂಚನಾಂಗೇನ ಕಿಂಕಿಣೀಜಾಲಮಾಲಿನಾ ॥ ೧೬ ॥

ಯುಧಾಜಿತಾ ಗೃಹೀತೇನ ಸತೋಯಾಂಬುದಚಾರಿಣಾ ।
ಚಂಚದ್ಬಹುಪತಾಕೇನ ಕೋವಿದಾರಧ್ವಜೇನ ಚ ॥ ೧೭ ॥

ಆಸಸಾದ ರಣೇ ಯಕ್ಷಾನ್ಗಂಧರ್ವಾನ್ರಣಕರ್ಕಶಾನ್ ।
ಶರೈಃ ಸಂಛಾದಯಾಮಾಸ ಗಭಸ್ತಿಭಿರಿವಾಂಶುಮಾನ್ ॥ ೧೮ ॥

ಏತಸ್ಮಿನ್ನೇವ ಕಾಲೇ ಚ ಸಹಸಾ ಗಗನಚ್ಯುತಾ ।
ಉಲ್ಕಾ ಪಪಾತ ಮಧ್ಯೇನ ಭಿತ್ವಾ ಸೂರ್ಯಸ್ಯ ಮಂಡಲಂ ॥ ೧೯ ॥

---

೧೫. ಈರೀತಿ ಕಠಿನವಾಗಿ ಹೇಳಿದ ಭರತನ ಮಾತನ್ನು ಕೇಳಿ ಆ ರಾಜರೆಲ್ಲರೂ ಹಿಂತಿರುಗಿ ಹೋಗಲು ಸುತರಾಂ ಇಷ್ಟವಿಲ್ಲದೆ ಇದ್ದಾಗ್ಯೂ, ಬಹಳ ಕಷ್ಟದಿಂದ ಆ ರಣರಂಗವನ್ನು ಬಿಟ್ಟು ಹೊರಟುಹೋಗಿ ದೂರದಲ್ಲಿ ಗುಟ್ಟಾಗಿ ನಿಂತು, ತಾವೂ ಸಹ ಯುದ್ಧಸನ್ನದ್ಧರಾಗಿ, ಭರತಶೈಲೂಷರಿಗೆ ನಡೆಯುವ ಮಹದ್ಯುದ್ಧವನ್ನು ನೋಡುತ್ತಾ ನಿಂತುಕೊಂಡರು.

೧೬-೧೮. ಕೂಡಲೆ ಭರತನೊಬ್ಬನೇ ರಣರಂಗಕ್ಕೆ ಹೊರಟು ಬಹುಮಂದಿ ಗಂಧರ್ವರನ್ನು ಯಮಸದನಕ್ಕೆ ಕಳುಹಿಸುವುದಕ್ಕಾಗಿ ಯುದ್ಧವನ್ನು ಹೂಡಿದನು. ಆ ಯುದ್ಧಕಾಲದಲ್ಲಿ ಭರತನು ಸುವರ್ಣಮಯವಾಗಿಯೂ ಕಿರುಗಂಟೆಗಳ ಗುಂಪಿನಿಂದ ವ್ಯಾಪ್ತವಾಗಿಯೂ ಇದ್ದ ರಥದಲ್ಲಿ ಕುಳಿತಿದ್ದನು. ಯುಧಾಜಿತನು ರಥದ ಮುಂಭಾಗದಲ್ಲಿ ಕೋವಿದಾರ ಧ್ವಜವನ್ನು ಹಿಡಿದು ಕುಳಿತಿದ್ದನು. ಸೂರ್ಯನು ತನ್ನ ಸರ್ವತೋಮುಖವಾದ ಕಿರಣಗಳಿಂದ ಪ್ರಪಂಚವನ್ನೆಲ್ಲಾ ಪ್ರಸರಿಸುವ ರೀತಿಯಾಗಿ ಭರತನು ಅನೇಕ ಶರಗಳನ್ನು ಒಂದೇ ಬಾರಿ ಪ್ರಯೋಗಿಸಿ, ಆ ಯುದ್ಧರಂಗದಲ್ಲಿ ನಿಂತಿದ್ದ ಯಕ್ಷಗಂಧರ್ವಗಣಗಳನ್ನು ಆ ಬಾಣಗಳಿಗಾಹುತಿ ಕೊಟ್ಟನು.

೧೯. ಈ ಸಮಯದಲ್ಲಿ ಸೂರ್ಯಮಂಡಲ ಮಧ್ಯಭಾಗವನ್ನು ಭೇದಿಸಿಕೊಂಡು ಇದ್ದಕ್ಕಿದ್ದಹಾಗೆಯೇ ಆಕಾಶದಿಂದ ಒಂದು ದೊಡ್ಡ ಕೊಳ್ಳಿಯು ನೆಲದ ಮೇಲೆ ಬಂದುಬಿದ್ದಿತು.

ಆಸೀದ್ಘೋರೋ ಮಹೀಕಂಪಃ ಶೈಲೂಷಾಂಗವಿದಾರಣಃ ।
ಆದಿತ್ಯಮಂಡಲೇ ರಾಜನ್ಕಬಂಧಶ್ಚಾಪ್ಯದೃಶ್ಯತ ॥ ೨೦ ॥

ವವರ್ಷ ಚ ತದಾ ದೇವೋ ಗಂಧರ್ವಾನ್ರಕ್ತವೃಷ್ಟಿಭಿಃ ।
ಗಂಧರ್ವಾಣಾಂ ಚ ದೀಪ್ತಾಯಾಂ ದಿಶ್ಯವಾಶಂತ ಪಕ್ಷಿಣಃ ॥ ೨೧ ॥

ಮೃಗಾಶ್ಚ ಘೋರಾ ರಾಜೇಂದ್ರ ಶಿವಾಶ್ಚಾಶಿವನಿಃಸ್ವನಾಃ ।
ಪ್ರತಿಲೋಮಸ್ತಥೈವಾಸೀದ್ವಾಯುಸ್ತೇಷಾಂ ಸುಶಂಕಕೃತ್ ॥ ೨೨ ॥

ನ್ಯಲೀಯತ ತಥಾ ಗೃಧ್ರಃ ಶೈಲೂಷಸ್ಯ ಧ್ವಜಾಗ್ರತಃ ।
ಸಮೇ ಪಥಿ ನಿರಾಬಾಧೇ ಪ್ರಸ್ಖಲಂತಸ್ತುರಂಗಮಾಃ ॥ ೨೩ ॥

ಶತಪತ್ರಾಶ್ಚ ಚಾಷಾಶ್ಚ ಹಂಸಾಶ್ಚೈವ ಪ್ರದಕ್ಷಿಣಂ ।
ಭರತಸ್ಯ ತದಾ ಚಕ್ರುಃ ಸರ್ವೋ ಚಾಷುರಥಾಸ್ಫುರರ್ ॥ ೨೪ ॥

---

೨೦. ಆ ಕೊಳ್ಳಿಯು ಬಿದ್ದೊಡನೆಯೇ ಭೂಮಿಯು ಇದ್ದಕ್ಕಿದ್ದಹಾಗೆಯೇ ನಡುಗಿತು. ಆ ಮಹೀಕಂಪನದಿಂದ ಶೈಲೂಷನ ಅಂಗವು ಜಜ್ಜಿಹೋಯಿತು. ಅದೇ ವೇಳೆಯಲ್ಲಿ ಸೂರ್ಯಮಂಡಲ ಮಧ್ಯದಲ್ಲಿ ಒಂದು ಕಬಂಧ (ತಲೆಯಿಲ್ಲದ ಮುಂಡ) ವು ಕಾಣಿಸಿಕೊಂಡಿತು.

೨೧. ಆಗ ದೇವತೆಗಳು ಗಂಧರ್ವರ ಮೇಲೆ ರಕ್ತದ ಮಳೆಯನ್ನು ಸುರಿಸಿದರು. ಮತ್ತು ಗಂಧರ್ವಗಣದ ಸುತ್ತಲೂ ಪಕ್ಷಿಗಳು ಅಪ್ರದಕ್ಷಿಣವಾಗಿ ಬಳಸಿ ಬಂದವು.

೨೨. ಘೋರವಾದ ಮೃಗಗಳೂ, ನರಿಗಳೂ ಅಪಸ್ವರದಿಂದ ಅರಚಿಕೊಂಡವು. ಗಂಧರ್ವರ ಮರಣವನ್ನು ಕೋರುತ್ತಿವೆಯೋ ಎಂಬಂತೆ, ಆ ಗಂಧರ್ವರ ಮೇಲೆ ಏನೋ ಒಂದು ಬಗೆಯ ಕೆಟ್ಟಗಾಳಿಯು ಬೀಸಲಾರಂಭವಾಯಿತು.

೨೩. ಇಷ್ಟರಲ್ಲಿಯೇ ಶೈಲೂಷನು ಕುಳಿತಿದ್ದ ರಥಧ್ವಜದ ಮೇಲುಗಡೆಯಲ್ಲಿ ಒಂದು ಹದ್ದು ಬಂದು ಕುಳಿತುಕೊಂಡಿತು. ಭೂಮಿಯು ಹಳ್ಳಕೊಳ್ಳಗಳಿಲ್ಲದೆ ಸಮನಾಗಿದ್ದಾಗ್ಯೂ ಆ ಸಮಭೂಪ್ರದೇಶದಲ್ಲಿ ಕುದುರೆಗಳು ಮುಗ್ಗರಿಸಿಬಿದ್ದುವು.

೨೪. ಶೈಲೂಷನ ಸೈನ್ಯಕ್ಕೆ ಇಂತು ದುರ್ನಿಮಿತ್ತಗಳು ತಲೆಹಾಕಿರಲು, ಶೈಲೂಷನ ಪ್ರತಿಕಕ್ಷಿಯಾದ ಭರತನ ಸುತ್ತಲೂ ವಿವಿಧಪಕ್ಷಿಗಳೂ, ಗುಬ್ಬಚ್ಚಿಗಳೂ,

**ದೃಷ್ಟ್ವಾ ನಿಮಿತ್ತಾಂಸ್ತು ಶುಭಾನ್ಯುಧಾಜಿತ್ಸುಮಹಾಯಶಾಃ ।**
**ಚೋದಯಾಮಾಸ ತುರಗಾನ್ಗಂಧರ್ವಾಣಾಂ ಚಮೂಂ ಪ್ರತಿ ॥ ೨೫ ॥**

**ಭರತೋಽಪಿ ಶರವ್ರಾತೈರ್ಘಾತಯಾಮಾಸ ವಾಹಿನೀಂ ।**
**ಗಂಧರ್ವಾಣಾಮುದೀರ್ಣಾನಾಂ ಘೋರೈಃ ಶತಸಹಸ್ರಶಃ ॥ ೨೬ ॥**

**ವಧ್ಯಮಾನಾಸ್ತು ಗಂಧರ್ವಾ ಭರತೇನ ಮಹಾತ್ಮನಾ ।**
**ತಮೇವಾಭಿಮುಖಾ ಜಗ್ಮುಃ ಶಲಭಾಃ ಪಾವಕಂ ಯಥಾ ॥ ೨೭ ॥**

**ತೇಷಾಮಾಪತತಾಮೇವ ಶರೈಃ ಸನ್ನತಪರ್ವಭಿಃ ।**
**ಪಾತಯಾಮಾಸ ಶೀರ್ಷಾಣಿ ಭರತೋ ವಾಹಿನೀಪತಿಃ ॥ ೨೮ ॥**

---

ಹಂಸಗಳೂ ಪ್ರದಕ್ಷಿಣೆಯಾಗಿ ಬಂದುವು. ಅದೇ ವೇಳೆಯಲ್ಲಿಯೇ ಭರತನ ಬಲ ಭುಜವು ಅದುರಿತು.

೨೫. ಹೀಗೆ ತಮ್ಮ ಕಡೆ ಒಳ್ಳೇ ಶಕುನಗಳಾಗುತ್ತಿರುವುದನ್ನು ನೋಡಿ, ಯುಧಾಜಿತನು ಭರತನು ಕುಳಿತಿದ್ದ ರಥಕ್ಕೆ ಕಟ್ಟಿದ್ದ ತನ್ನ ಕುದುರೆಗಳನ್ನು ಗಂಧರ್ವರ ಸೈನ್ಯದ ಕಡೆಗೆ ಬಲವಾಗಿ ಓಡಿಸಿ ನುಗ್ಗಿಸಿದನು.

೨೬. ರಥದಮೇಲೆ ನಿಂತ ಭರತನು ಗಂಧರ್ವರ ಸೈನ್ಯದ ಮೇಲೆ, ಅನೇಕ ಬಾಣಗಳನ್ನು ಬಿಡುವಿಲ್ಲದೆ ಬಿಡಲಾರಂಭಿಸಿದನು. ಈ ರೀತಿ ಘೋರಾತುರದಿಂದ ಬಂದು ಮೇಲೆ ಬೀಳುತ್ತಲಿದ್ದ ಬಾಣಗಳಿಂದ ಒಂದೊಂದೇಟಿಗೇ ನೂರಾರು ಸಾವಿರಾರು ಮಂದಿ ಗಂಧರ್ವರು ಹೊಡೆಯಲ್ಪಟ್ಟವರಾದರು.

೨೭. ಆರೀತಿ ಬಾಣಗಳ ಏಟಿನಿಂದ ನೊಂದ ಗಂಧರ್ವರು ಭರತನ ಮೇಲೆಯೇ ಬಂದು ಬೀಳುತ್ತಿದ್ದುದನ್ನು ನೋಡಿದರೆ, ಪತಂಗದ ಹುಳುಗಳು ಬೆಂಕಿಗೆ ಬಂದು ಬಿದ್ದು ಸಾಯುತ್ತಿರುವಂತೆ ಕಾಣುತ್ತಿದ್ದಿತು.

೨೮. ಹೀಗೆ ತನ್ನ ಮೇಲೆಯೇ ಬಂದು ಬೀಳಲಾರಂಭಿಸಿದ ಗಂಧರ್ವರ ತಲೆಗಳನ್ನು ಭರತನು ತೀಕ್ಷ್ಣವಾದ ಮೊನೆಗಳುಳ್ಳ ಬಾಣಗಳಿಂದ ಕತ್ತರಿಸಿ ನೆಲದಮೇಲೆ ಕೆಡವುತ್ತ ಬಂದನು.

**ಭರತಂ ಕೋಷ್ಠಕೀಕೃತ್ವಾ ಗಂಧರ್ವಾಃ ಸುಮಹಾರಥಾಃ ।**
**ವವರ್ಷುರಾಯುಧೈಸ್ತೀಕ್ಷ್ಣೈರ್ಮೇಘಾ ವೃಷ್ಟ್ಯೇವ ಪರ್ವತಂ ॥ ೨೯ ॥**

**ತಾನ್ಯಾಯುಧಾನಿ ಮುಖ್ಯಾನಿ ಗಂಧರ್ವೈರ್ಭರತಸ್ತಥಾ ।**
**ಚಿಚ್ಛೇದ ರಾಜನ್ನಾರಾಚೈರ್ಗಂಧರ್ವಾಂಶ್ಚಾನಧೀದ್ಬಲೀ ॥ ೩೦ ॥**

**ಮಸ್ತಕಾನ್ಸಶಿರಸ್ತ್ರಾಣಾನ್ಬಾಹೂನಪಿ ಚ ಸಾಂಗದಾನ್ ।**
**ಹಸ್ತಿಹಸ್ತೋಪಮಾನೂರೂಂಶ್ಚಿಚ್ಛೇದ ಭರತೋ ರಣೇ ॥ ೩೧ ॥**

**ನಾವಧಾನಂ ನ ಸಂಧಾನಂ ನ ಮುಂಚಂತಂ ಚ ಸಾಯಕಾನ್ ।**
**ದದರ್ಶ ಭರತಂ ಕಶ್ಚಿಲ್ಲಾಘವಾದ್ರಣಮೂರ್ಧನಿ ॥ ೩೨ ॥**

**ಕೇವಲಂ ದೃಶ್ಯತೇ ಯುದ್ಧೇ ಗಂಧರ್ವಾಣಾಂ ಮಹಾಚಮೂಃ ।**
**ದಹ್ಯಮಾನಾ ಶರವ್ರಾತೈರ್ಯುಗಾಂತಾಗ್ನಿರಿವ ಜ್ವಲನ್ ॥ ೩೩ ॥**

---

೨೯. ಆಗ ಅನೇಕ ಗಂಧರ್ವವೀರರು ಓಡಿ ಬಂದು ಭರತನ ಸುತ್ತಲೂ ಮುತ್ತಿಕೊಂಡು ಬೆಟ್ಟದಮೇಲೆ ಬಹಳ ಭಯಂಕರವಾದ ಮೋಡಗಳು ಗುಂಪು ಕೂಡಿ ಮಳೆಯನ್ನು ಸುರಿಸುತ್ತಿರುವಂತೆ, ಬಾಣವರ್ಷಗಳಿಂದಲೂ ಇನ್ನೂ ಅನೇಕ ಆಯುಧಗಳಿಂದಲೂ ಭರತನನ್ನು ಮುಚ್ಚಿಬಿಟ್ಟರು.

೩೦. ಹೀಗೆ ತನ್ನ ಮೇಲೆ ಪ್ರಯೋಗಿಸಿದ ಅಗಣಿತವಾದ ಬಾಣಗಳನ್ನೂ ವಿವಿಧಾಯುಧಗಳನ್ನೂ ಭರತನು ತನ್ನ ಬಾಣಗಳಿಂದ ಕತ್ತರಿಸಿ ಕತ್ತರಿಸಿ ಕೆಡುವುತ್ತಾ ವಿಚ್ಛಿತ್ತಿಯಿಲ್ಲದೆ ಪುನಃ ಪುನಃ ಬಾಣಗಳನ್ನು ಬಿಟ್ಟು, ಗಂಧರ್ವರ ತಲೆಗಳನ್ನು ಲೆಖ್ಖವಿಲ್ಲದಂತೆ ಕೆಡವುತ್ತ ಬಂದನು.

೩೧. ಗಂಧರ್ವರ ಕಿರೀಟ ಸಹಿತವಾದ ಮತ್ತು ಶಿರಸ್ತ್ರಾಣ ಸಹಿತವಾದ ಶಿರಸ್ಸುಗಳನ್ನೂ, ಅಂಗದ ಸಹಿತವಾದ ಬಾಹುಗಳನ್ನೂ, ಆನೆಯ ಸೊಂಡಿಲಿಗೆ ಸಮಾನವಾದ ತೊಡೆಗಳನ್ನೂ ಭರತನು ಅಗಣಿತವಾಗಿ ಕತ್ತರಿಸಿಬಿಟ್ಟನು.

೩೨. ಭರತನು ಬಾಣಗಳನ್ನು ಬಿಡುತ್ತಿರುವಾಗ ಕೊಂಚವೂ ಬಿಡುವಿದ್ದಂತೆ ಕಾಣಬರಲಿಲ್ಲ. ಬಾಣಗಳನ್ನು ತೊಡುವುದು, ಬಿಡುವುದು ಈ ವಿಧವಾದ ಭರತನ ಕೈಚಳಕವನ್ನು ಅಲ್ಲಿ ರಣಮುಖದಲ್ಲಿದ್ದವನೊಬ್ಬನು ನೋಡಿದನು.

೩೩. ಆ ಯುದ್ಧದಲ್ಲಿ ಮುಖ್ಯವಾಗಿ ಕಾಣಿಸುತ್ತಿದ್ದುದೇನೆಂದರೆ :— ಭಯಂಕರವಾಗಿ ನಿಂತಿದ್ದ ಗಂಧರ್ವಸೇನಾಸಮೂಹ, ಕಾಡುಗಿಚ್ಚಿನಂತೆ ಹಬ್ಬಿದ್ದ ಭರತನ ಪ್ರಳಯಕಾಲದಂತಹ ಬಾಣಾಗ್ನಿಜ್ವಾಲೆಗಳಿಂದ ಹತ್ತಿ ಉರಿಯುತ್ತಿದ್ದ ಸೇನಾಸಮೂಹ.

ಬಾಣಗೋಚರಮಾಯಾತಾನ್ಭರತಸ್ಯ ವಿನಿಘ್ನತಃ ।
ಶಾತ್ರವಾನ್ಸಾಯಕೈಸ್ತೀಕ್ಷ್ಣೈರ್ಜಗಾಮಾಸ್ತಂ ದಿವಾಕರಃ ॥ ೩೪ ॥

ರಣೇ ಜಯಂ ಪ್ರಾಪ್ಯ ತತೋ ನಿವೃತ್ತಃ
ಸಮಾಗತಶ್ಚಾಪಿ ನರೇಂದ್ರಮುಖ್ಯೈಃ ।
ಪ್ರಾಯಾನ್ಮಹಾತ್ಮಾ ಶಿಬಿರಾಯ ರಾಜನ್
ಸಂಸ್ತೂಯಮಾನಸ್ತ್ರಿದಶದ್ವಿಜೇಂದ್ರೈಃ ॥ ೩೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ತೃತೀಯಯುದ್ಧದಿವಸವರ್ಣನಂನಾಮ
ದ್ವಿಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ.



---

೩೪. ಬಾಣಡೆದುರಿಗೆ ಅವನೇಟಿಗೆ ಸಿಕ್ಕಿದ್ದ ಗಂಧರ್ವನೊಬ್ಬನೂಉಳಿಯುತ್ತಲೇ ಇರಲಿಲ್ಲ. ಈ ರೀತಿಯಾಗಿ ಭರತನು ಶತ್ರುಸೈನ್ಯವನ್ನು ತನ್ನ ಬಾಣಗಳಿಂದ ಸಂಹರಿಸುತ್ತಾ ಇರುವುದನ್ನು ನೋಡುತ್ತನೋಡುತ್ತಲೇ ಸೂರ್ಯನು ಅಸ್ತಾಚಲವನ್ನು ಪ್ರವೇಶಿಸಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಮೂರನೆಯ ದಿವಸದ ಯುದ್ಧವರ್ಣನೆ
ಎಂಬ ಹೆಸರಿನ ಇನ್ನೂರರವತ್ತೆರಡನೆಯ ಅಧ್ಯಾಯವು
ಮುಗಿದುದು.



ಶ್ರೀಃ

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ತ್ರಿಷಷ್ಟ್ಯುತ್ತರ ದ್ವಿಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

**ಚತುರ್ಥೇಽಹನಿ ಸಂಪ್ರಾಪ್ತೇ ಕೃತಪೂರ್ವಾಹ್ನಿಕಕ್ರಿಯಃ ।**
**ಶೈಲೂಷಸ್ತು ವಿನಿಷ್ಕ್ರಮ್ಯ ಗಂಧರ್ವಾನಿದಮಬ್ರವೀತ್ ॥ ೧ ॥**

**ಯೋಧಯಧ್ವಂ ರಣೇ ಸರ್ವೇ ಭರತಂ ರಿಪುಮಾಗತಂ ।**
**ಅಹಂ ಮಧ್ಯೇ ಪ್ರವೇಕ್ಷ್ಯಾಮಿ ಭರತಸ್ಯ ಬಲಾರ್ಣವಂ ॥ ೨ ॥**

---

### ಇನ್ನೂರರವತ್ತಮೂರನೆಯ ಅಧ್ಯಾಯವು.

೧. ಮಾರ್ಕಂಡೇಯನು ವಜ್ರಮಹಾರಾಜನನ್ನು ಕುರಿತು ಮಾನುಷಗಂಧರ್ವರ ಯುದ್ಧಪ್ರಸಂಗವನ್ನು ಮುಂಬರಿಸಿ ಹೇಳಿದ ಬಗೆಯೇನೆಂದರೆ :—ಕೇಳಯ್ಯಾ ! ವಜ್ರರಾಜ ! ನಾಲ್ಕನೆಯ ದಿವಸ ನಡೆದ ಯುದ್ಧವೃತ್ತಾಂತವನ್ನೀಗ ನಿನ್ನೊಡನೆ ತಿಳಿಸುತ್ತೇನೆ. ನಾಲ್ಕನೆಯ ದಿವಸ ಭರತನು ಬೆಳಗಾಗುವುದರೊಳಗಾಗಿಯೇ ಹಾಸಿಗೆಯಿಂದ ಮೇಲಕ್ಕೆದ್ದು ಪೂರ್ವಾಹ್ನಿಕ ಕ್ರಿಯೆಗಳನ್ನು ನೆರವೇರಿಸಿದವನಾಗಿ ರಣರಂಗದ ಕಡೆಗೆ ತೆರಳಿದನು. ಶೈಲೂಷನೂ ಕೂಡ ಅದೇವೇಳೆ ಸೇನಾಸಹಿತನಾಗಿ ರಣರಂಗಕ್ಕೆ ಪ್ರವೇಶಿಸಿ ತನ್ನ ಕಡೆಯ ಗಂಧರ್ವರನ್ನು ಕುರಿತಿಂತೆಂದನು ;—

೨. ಎಲೈ ಗಂಧರ್ವವೀರರೇ ! ಕೇಳಿರಿ ! ನೀವೆಲ್ಲರೂ ಒಟ್ಟಾಗಿ ಸೇರಿ ಭರತನು ಯುದ್ಧಕ್ಕಾರಂಭಮಾಡಿದೊಡನೆಯೇ ಅವನ ಮೇಲೆ ಬಿದ್ದು ಯುದ್ಧ ಮಾಡಿರಿ. ಯುದ್ಧಮಾಡುತ್ತಿರುವಾಗಲೇ ಆ ಸೈನ್ಯಮಧ್ಯಕ್ಕೆ ನಾನೂ ಬಂದು ಸೇರಿಕೊಳ್ಳುತ್ತೇನೆ.

ತತ್ರ ತಾನ್ಘಾತಯಿಷ್ಯಾಮಿ ಭರತಸ್ಯಾನುಯಾಯಿನಃ ।
ಏತದುಕ್ತೇ ತಥೇತ್ಯುಕ್ತ್ವಾ ಸಂಪ್ರತೀಕ್ಷಂತ ರಾಘವಂ ॥ ೩ ॥

ಭರತೋಽಪಿ ಮಹಾತೇಜಾ ರಥೇನೈಕೇನ ದೃಶ್ಯತೇ ।
ಭರತಸ್ಯಾನುಸೈನ್ಯಂ ಚ ಭೂಭುಜಾಂ ಸಮುಪದ್ಯತ ॥ ೪ ॥

ತತ್ಸೈನ್ಯಂ ಪ್ರಾವಿಶದ್ಘೋರಂ ಶೈಲೂಷೋ ರಣದರ್ಪಿತಃ ।
ಚಕಾರ ಕದನಂ ತತ್ರ ನರವಾರಣವಾಜಿನಾಂ ॥ ೫ ॥

ಗಂಧರ್ವಸೈನ್ಯೇ ಚ ತಥಾ ಭರತೋಽಪಿ ಶರೋತ್ಕರೈಃ ।
ಚಕಾರ ಕದನಂ ಘೋರಂ ವೈಶ್ವಾನರಸಮುಪ್ರಭೈಃ ॥ ೬ ॥

೩. ಸೈನ್ಯಮಧ್ಯವನ್ನು ಪ್ರವೇಶಿಸಿ ಭರತನ ಸೈನ್ಯವನ್ನೆಲ್ಲಾ ಹೊಡೆದುರುಳಿಸಿಬಿಡುತ್ತೇನೆ. ಈ ಪ್ರಕಾರವಾಗಿ ಹೇಳಿದ ಶೈಲೂಷನ ಮಾತನ್ನು ಕೇಳಿ ಸಕಲ ಗಂಧರ್ವವೀರರೂ ಹಾಗೆಯೇ ಆಗಲೆಂದೊಪ್ಪಿಕೊಂಡು ಭರತನ ಆಗಮನವನ್ನು ನಿರೀಕ್ಷಿಸಿಕೊಂಡಿದ್ದರು.

೪. ಆ ಸಮಯದಲ್ಲಿ ಮಹಾತೇಜಸ್ವಿಯಾದ ಭರತನು ಕುಳಿತಿದ್ದ ರಥವೊಂದೇ ಎಲ್ಲರ ಕಣ್ಣಿಗೂ ಕಾಣಿಸಿತು. ನೋಡು ನೋಡುತ್ತಿರುವಷ್ಟರಲ್ಲಿಯೇ ಭರತನ ರಥದ ಸಮೀಪಕ್ಕೆ ಅನೇಕ ಮಂದಿ ವೀರರು ಬಂದು ಸೇರಿದರು.

೫. ಇಂತು ಸಮ್ಮಿಳಿತವಾದ ಭಯಂಕರವಾದ ಭರತನ ಸೈನ್ಯಮಧ್ಯಕ್ಕೆ ಶೈಲೂಷನು ಪ್ರವೇಶಿಸಿಯೇ ಬಿಟ್ಟನು. ಇಂತು ರಣಮಧ್ಯವಂ ಪ್ರವೇಶಗೈದಾ ಗಂಧರ್ವರಾಜನು ಮನುಷ್ಯರ ಮೇಲೂ, ಆನೆ, ಕುದುರೆ, ಕಾಲಾಳುಗಳ ಮೇಲೂ ಯುದ್ಧಮಾಡಲಾರಂಭಿಸಿದನು.

೬. ಅದೇ ಮೇರೆ ಭರತನೂ ಸಹ ಗಂಧರ್ವಸೈನ್ಯದೊಳಹೊಕ್ಕು ಬೆಂಕಿಯನ್ನು ಕಾರುತ್ತಿರುವಂತೆ ತೋರುತ್ತಿದ್ದ ಬಾಣಪರಂಪರೆಗಳಿಂದ ಗಂಧರ್ವಸೈನ್ಯವನ್ನು ಮುಚ್ಚಿ ಯುದ್ಧವನ್ನಾರಂಭಿಸಿದನು.

**ರಾಜಾನಂ ಕೋಷ್ಠಕೇ ಕೃತ್ವಾ ಶೈಲೂಷಂ ವಿವಿಧೈಃ ಶರೈಃ ।**
**ಛಾದಯಾಮಾಸುರವ್ಯಗ್ರಾ ಮೇಘಾ ಇವ ಮಹೀಧರಂ ॥ ೭ ॥**

**ಗೋವಾಸನಸ್ತು ಸಪ್ತತ್ಯಾ ಬಿಭೇದ ಸಮರೇ ಶರೈಃ ।**
**ದ್ವಿಜಿಹ್ವಶ್ಚ ತ್ರಿಸಪ್ತತ್ಯಾ ರಾಜಾ ದಾಶೇರಕಸ್ತು ಯಃ ॥ ೮ ॥**

**ಸುಬಾಹುಸ್ತಂ ಚತುಷ್ಷಷ್ಟ್ಯಾ ದಶಭಿಸ್ತಂ ಸುಯೋಧನಃ ।**
**ಕುಮಾರಃ ಸಪ್ತಸಪ್ತತ್ಯಾ ಶ್ರೇಣಿಮಾನ್ದಶಭಿಸ್ತ್ರಿಭಿಃ ॥ ೯ ॥**

**ಶೂರಃ ಷಷ್ಟ್ಯಾ ಚ ನಿರ್ಭಿದ್ಯ ಬಲಬಂಧುಃ ಶತೇನ ಚ ।**
**ದ್ವಾವಿಂಶತ್ಯಾ ತತಸ್ತಕ್ಷಃ ಪುಷ್ಕರೋ ನವಭಿಃ ಶರೈಃ ॥ ೧೦ ॥**

---

೭. ಗಂಧರ್ವರಾಜನನ್ನು ಸೇನಾಮಧ್ಯದಲ್ಲಿ ಸಿಕ್ಕಿಸಿಕೊಂಡು ಭರತನೂ, ಅವನ ಸೈನಿಕರೂ ಸಹ ಮೇಘಗಳು ಸೆಲದ ಮೇಲೆ ಮಳೆಗರೆಯುವಂದದಿ, ಬಾಣಗಳೆಂಬ ಮಳೆಗಳಿಂದ ಅವನನ್ನು ಚೆನ್ನಾಗಿ ಮುಸುಕಿಬಿಟ್ಟರು

೮. ಗೋವಾಸನನು ಆ ಸಮರರಂಗದಲ್ಲಿ ಆ ಶೈಲೂಷನನ್ನು, ಎಪ್ಪತ್ತು ಬಾಣಗಳನ್ನು ಧನುಸ್ಸಿನಲ್ಲನುಸಂಧಾನಮಾಡಿ ಆ ಬಾಣಗಳಿಂದ ಹೊಡೆದನು ದ್ವಿಜಿಹ್ವನಾದರೋ ಇನ್ನೂರಹತ್ತು ಬಾಣಗಳಿಂದ ಶೈಲೂಷನನ್ನು ಹೊಡೆದನು.

೯. ಸುಬಾಹುವು ಅವನನ್ನು ಇನ್ನೂರನಲವತ್ತು ಬಾಣಗಳಿಂದ ಹೊಡೆದನು. ಆ ಶೈಲೂಷನನ್ನು ಸುಯೋಧನನು ಹತ್ತು ಬಾಣಗಳಿಂದ ಹೊಡೆದನು. ಆ ಬಳಿಕ ಅವನನ್ನು ಕುಮಾರನು ನಾಲ್ಕುನೂರತೊಂಭತ್ತು ಬಾಣಗಳಿಂದ ಹೊಡೆದನು. ಆ ಗಂಧರ್ವರಾಜನನ್ನು ಶ್ರೇಣಿಮಂತನು ಮೂವತ್ತು ಬಾಣಗಳಿಂದ ಪ್ರಹರಿಸಿದನು.

೧೦. ಶೂರನು ಅರವತ್ತು ಬಾಣಗಳಿಂದ ಶೈಲೂಷಗಂಧರ್ವನನ್ನು ಪ್ರಹರಿಸಿದನು. ಬಲಬಂಧುವು ನೂರು ಬಾಣಗಳನ್ನು ತೊಟ್ಟು ಆ ಶೈಲೂಷನ ಮೇಲೆ ಪ್ರಯೋಗಿಸಿದನು. ಆಗ ಭರತನ ಮಗನಾದ ತಕ್ಷನು ಇಪ್ಪತ್ತೆರಡು ಬಾಣಗಳಿಂದಲೂ ಅವನ ತಮ್ಮ ಪುಷ್ಕರನು ಒಂಭತ್ತು ಬಾಣಗಳಿಂದಲೂ ಶೈಲೂಷನನ್ನು ಹೊಡೆದರು.

ಶತೇನ ವಿಜಯಶ್ಚೈನಂ ಜಯೋ ಜಿತ್ವಾ ತ್ರಿಭಿಃ ಶರೈಃ ।
ಪ್ರತ್ಯವಿಧ್ಯತ ತಾನ್ಸರ್ವಾನ್ಶೈಲೂಷೋ ದಶಭಿಃ ಶರೈಃ ॥ ೧೧ ॥

ನೃತ್ಯನ್ನಿವ ರಥೋಪಸ್ಥೇ ಮಹಾಬಲಪರಾಕ್ರಮಃ ।
ಧನುಶ್ಚಿಚ್ಛೇದ ಭಲ್ಲೇನ ಸುಬಾಹೋಃ ಸುಮಹಾತ್ಮನಃ ॥ ೧೨ ॥

ಹಯಾಂಶ್ಚಕಾರ ನಿರ್ಜೀವಾಂಸ್ತಥೈವಾಂಶುಮತೋ ನೃಪ ।
ಪದ್ಮಂ ರಥಸ್ಥಂ ಚಿಚ್ಛೇದ ಚಿಹ್ನಂ ಗೋವಾಸನಸ್ಯ ತು ॥ ೧೩ ॥

ಸುಯೋಧನರಥಾತ್ಕ್ಷಿಪ್ರಂ ಪಾತಯಾಮಾಸ ಸಾರಥಿಂ ।
ಬಲಬಂಧೋಸ್ತಥಾ ಛತ್ರಂ ಪಾತಯಾಮಾಸ ಯಾದವ ॥ ೧೪ ॥

---

೧೧. ವಿಜಯನು ಶೈಲೂಷನ ಮೇಲೆ ನೂರು ಬಾಣಗಳನ್ನೂ, ಜಯನು ಮೂರು ಬಾಣಗಳನ್ನೂ ಪ್ರಯೋಗಿಸಿದರು. ಈ ಪ್ರಕಾರವಾಗಿ ತನ್ನನ್ನು ಭರತನ ಕಡೆಯ ರಾಜರುಗಳು ಸರ್ವತೋಮುಖವಾಗಿ ಪ್ರಹರಿಸುತ್ತಿರುವುದನ್ನು ನೋಡಿ, ಆ ಶೈಲೂಷನು ಸುತರಾಂ ಹೆದರದೆ ಹತ್ತು ಬಾಣಗಳನ್ನು ಬಿಲ್ಲಿನಲ್ಲಿ ಹೂಡಿ ಅಷ್ಟೊಂದು ಜನರೂ ಬಿಟ್ಟ ಬಾಣಗಳ ಏಟುಗಳನ್ನು ತಡೆದುಕೊಂಡನು.

೧೨. ಮಹಾಬಲಪರಾಕ್ರಮಶಾಲಿಯಾದ ಆ ಶೈಲೂಷನು ಇಷ್ಟು ಗುಂಪಿನ ಜನರೊಡನೆ ಯುದ್ಧಮಾಡುತ್ತಿರುವಾಗ ರಥದ ಮೇಲೆ ನಿಂತು ಬಾಣಪ್ರಹಾರವನ್ನು ಮಾಡುತ್ತಾ, ಕುಣಿಕುಣಿಯುವಂತೆ ಕಾಣುತ್ತಿದ್ದನು. ಈರೀತಿ ಬಹು ಚಮತ್ಕಾರವಾಗಿ ಯುದ್ಧಮಾಡುತ್ತಿದ್ದಾಗ, ಗಂಧರ್ವವೀರನು ಒಂದು ಭಲ್ಲಿಯಿಂದ ಸುಬಾಹುವಿನ ಧನುಸ್ಸಿಗೆ ಹೊಡೆದು ಅದನ್ನು ನಾಶಮಾಡಿದನು.

೧೩. ಮತ್ತು ಮದ್ರರಾಜನಾದ ಅಂಶುಮಂತನ ರಥಕ್ಕೆ ಕಟ್ಟಿದ್ದ ಹಯಗಳನ್ನು ಹೊಡೆದು, ಆ ತುರಗಗಳ ಪ್ರಾಣಗಳನ್ನು ಹರಣಮಾಡಿಬಿಟ್ಟನು. ಗೋವಾಸನನ ರಥದ ಚಿಹ್ನೆಯಾದ ಪದ್ಮಲಾಂಛನವನ್ನು ಕತ್ತರಿಸಿಬಿಟ್ಟನು.

೧೪. ಸುಯೋಧನನ ರಥದ ಮೇಲೆ ಕುಳಿತಿದ್ದ ಸಾರಥಿಯನ್ನು ಹೊಡೆದು ಕೆಳಕ್ಕುರುಳಿಸಿಬಿಟ್ಟನು. ಬಲಬಂಧುವಿನ ಛತ್ರಿಯನ್ನು ಬಾಣದಿಂದ ಹೊಡೆದು ಕೆಳಕ್ಕೆ ಬೀಳಿಸಿಬಿಟ್ಟನು.

ತಥಾನ್ಯಾನ್ವಿಮುಖಾಂಶ್ಚಕ್ರೇ ಶರೈಃ ಸನ್ನತಪರ್ವಭಿಃ ।
ತತಸ್ತಸ್ಯ ಕ್ಷುರಪ್ರೇಣ ಧನುಶ್ಚಿಚ್ಛೇದ ಪುಷ್ಕರಃ ೧೫ ॥

ಅಥಾನ್ಯಂ ಚಾಪಮಾದಾಯ ಪುಷ್ಕರಸ್ಯ ರಣೇ ರುಷಾ ।
ಚಕಾರ ತುರಗಾನ್ಸರ್ವಾನ್ನಿರ್ಜೀವಾನ್ಸಮರಪ್ರಿಯಃ ॥ ೧೬ ॥

ಪುಷ್ಕರಶ್ಚ ಸಮಾರುಹ್ಯ ತಕ್ಷಸ್ಯ ರಥಮುತ್ತಮಂ ।
ವವರ್ಷ ಶರವರ್ಷೇಣ ಶೈಲೂಷಂ ರಣಮೂರ್ಧನಿ ॥ ೧೭ ॥

ಶೈಲೂಷೋಽಪಿ ಜಘಾನಾಶ್ವಾನ್ರಥಾತ್ತಕ್ಷಸ್ಯ ಯಾದವ ।
ವಿರಥೌ ತೌ ಗದಾಪಾಣೀ ಭ್ರಾತರೌ ಯುದ್ಧದುರ್ಮದೌ ॥ ೧೮ ॥

ಶೈಲೂಷೇಣ ಸಮಾರೂಢೌ ಗದಾಹಸ್ತೌ ತರಸ್ವಿನೌ ।
ಅಭ್ಯಾಶೇ ಭ್ರಾತರೌ ದೃಷ್ಟ್ವಾ ಜಗಾಮಾದರ್ಶನಂ ತತಃ ॥ ೧೯ ॥

---

೧೫ ಇದೇ ರೀತಿ ಇತರರಾದ ಭರತನ ಕಡೆಯ ವೀರರನ್ನೂ ಸಹ ತೀಕ್ಷ್ಣವಾದ ಬಾಣಗಳಿಂದ ಹೊಡೆದು ಶೈಲೂಷನು ಅವರನ್ನು ವಿಮುಖರನ್ನಾಗಿಮಾಡಿದನು. ಹೀಗೆಲ್ಲಾ ವಿಪರೀತವಾಗಿ ಕದನಕೋಲಾಹಲವನ್ನು ಮಾಡುತ್ತಿದ್ದ ಶೈಲೂಷನನ್ನು ನೋಡಿ ಭರತನ ಮಗ ಪುಷ್ಕರನು ಮಹಾಕೋಪಾಕ್ರಾಂತನಾಗಿ ಒಂದು ತೀಕ್ಷ್ಣವಾದ ಬಾಣವನ್ನು ಪ್ರಯೋಗಿಸಿ ಅವನ ಕೈಯಲ್ಲಿದ್ದ ಧನುಸ್ಸನ್ನೆರಡು ಪಾಲು ಮಾಡಿಬಿಟ್ಟನು.

೧೬. ಆಗ ಶೈಲೂಷನು ಬೇರೊಂದು ಧನುಸ್ಸನ್ನು ಕೈಗೆ ತೆಗೆದುಕೊಂಡು, ಸಮರಪ್ರಿಯನಾದ ಆ ಗಂಧರ್ವರಾಜನು ಪುಷ್ಕರನ ರಥಕ್ಕೆ ಕಟ್ಟಿದ್ದ ಕುದುರೆಗಳನ್ನೆಲ್ಲಾ ಬಾಣಪ್ರಯೋಗದಿಂದ ಸಂಹರಿಸಿಬಿಟ್ಟನು.

೧೭. ತನ್ನ ರಥಾಶ್ವಗಳು ಮೃತವಾದುದನ್ನು ನೋಡಿ ಪುಷ್ಕರನು ಆ ರಥದಿಂದಿಳಿದು ತನ್ನ ಸಹೋದರನಾದ ತಕ್ಷನ ರಥದ ಮೇಲೆ ಹತ್ತಿ ಕುಳಿತವನಾಗಿ ಶೈಲೂಷನ ಮೇಲೆ ಬಾಣಗಳ ಮಳೆಯನ್ನೇ ಕರೆದುಬಿಟ್ಟನು.

೧೮. ಆಗ ಶೈಲೂಷನು ಹಿಂದಿನಂತೆಯೇ ಬಾಣಪ್ರಯೋಗಮಾಡಿ ತಕ್ಷನ ರಥದ ಕುದುರೆಗಳನ್ನೂ ಸಹ ನಿರ್ನಾಮಮಾಡಿಬಿಟ್ಟನು. ಆಗ ಆ ಭ್ರಾತೃಗಳೀರ್ವರೂ ಯುದ್ಧ ದುರ್ಮದರಾಗಿ ಗದೆಗಳನ್ನು ಧರಿಸಿ ಯುದ್ಧಕ್ಕೆ ಅಣಿಯಾದರು.

೧೯. ಈ ಪ್ರಕಾರವಾಗಿ ಮಹಾಕ್ರೋಧಾವಿಷ್ಟರಾದ ತಕ್ಷಪುಷ್ಕರರೀರ್ವರೂ ಗದಾಪಾಣಿಗಳಾಗಿ ಯಾವಾಗ ತನ್ನ ಮೇಲೆರಗಿ ಬಂದರೋ, ಆ ಕೂಡಲೆ ಆ ಶೈಲೂಷನು

ಮಾಯಾವೀ ಸ ತು ಗಂಧರ್ವೋ ರಥಮುತ್ಸೃಜ್ಯ ಯಾದವ ।
ಶೂನ್ಯಂ ದೃಷ್ಟ್ವಾ ರಥೋಪಸ್ಥಂ ವಿಲಕ್ಷೌ ಭ್ರಾತರೌ ತದಾ ॥ ೨೦ ॥
ಆದಿತ್ಯೇಽಸ್ತಮನುಪ್ರಾಪ್ತೇ ವಿನಿವೃತ್ತೌ ರಣಾಜಿರಾತ್ ।
ಭರತೋಽಪಿ ತಥಾ ಕೃತ್ವಾ ಗಂಧರ್ವಾಣಾಂ ಮಹಾಹವಂ ।
ನ್ಯವರ್ತತ ಮಹಾರಾಜ ಸಂಧ್ಯಾಕಾಲೇ ರಣಾಜಿರಾತ್ ॥ ೨೧ ॥

ಗತ್ವೈವ ರಾಜನ್ಸ ಚ ರಾಜವೇಶ್ಮ
ತತ್ರೋಷ್ಯ ರಾತ್ರಿಂ ರಘುವಂಶನಾಥಃ ।
ನಿಶಾವಸಾನೇ ಪುನರೇವ ಬುದ್ಧಃ
ಚಕಾರ ಯುದ್ಧಂ ಸಹಿತೌ ನೃವೀರೈಃ ॥ ೨೨ ॥

ಇತಿ ತ್ರಿಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

---

ತನ್ನ ಹತ್ತಿರಕ್ಕೆ ಬಂದು ಮೇಲೆ ಬೀಳತೊಡಗಿದ ಆ ಭ್ರಾತೃಗಳನ್ನು ನೋಡಿ ಮಾಯೆ ಯಿಂದ ಅದೃಶ್ಯನಾದನು. (ಕಣ್ಣಿಗೆ ಕಾಣದೆ ತಪ್ಪಿಸಿಕೊಂಡುಬಿಟ್ಟನು)

೨೦. ಗಂಧರ್ವರಾಜನು ಗಾಬರಿಯಿಂದ ಹೆದರಿ ತನ್ನ ರಥದ ಮೇಲಿನಿಂದ ಹಾರಿ ತಪ್ಪಿಸಿಕೊಂಡು ಯಾವಾಗ ಕಣ್ಣಿಗೆ ಕಾಣದೆ ಮರೆಯಾದನೋ, ಆಗ ಅವನ ಬರೀರಥವನ್ನು ನೋಡಿ ತಕ್ಷಪುಷ್ಕರರೀರ್ವರೂ ತಮ್ಮ ಗದಾಪ್ರಹಾರದ ಗುರಿಯನ್ನ ವನು ತಪ್ಪಿಸಿಕೊಂಡು ಮರೆಯಾದನೆಂದು ತಿಳಿದುಕೊಂಡರು.

೨೧. ಅಷ್ಟು ಹೊತ್ತಿಗೆ ಸೂರ್ಯಾಸ್ತಮಾನಕಾಲವಾಗಿ ಸೂರ್ಯನು ಅಸ್ತಾ ಚಲದಲ್ಲಿ ಮುಳುಗಿದನು. ತಕ್ಷಪುಷ್ಕರರಿಬ್ಬರೂ ಸಹ ಆ ಕೂಡಲೆ ರಣರಂಗದಿಂದ ಹಿಂತಿರುಗಿದರು. ಗಂಧರ್ವರೊಡನೆ ಯುದ್ಧಗೈಯುತ್ತಿದ್ದ ಭರತನೂ ಸಹ ಸಮರ ಕ್ರಿಯೆಯನ್ನು ಸಾಕುಮಾಡಿ ಆ ಸಂಧ್ಯಾಸಮಯದಲ್ಲಿ ರಣರಂಗವನ್ನು ಬಿಟ್ಟು ಶಿಬಿ ರಕ್ಕೆ ತೆರಳಿದನು.

೨೨. ರಾಜಾರ್ಹವಾದ ತನ್ನ ಶಿಬಿರವನ್ನು ತಲುಪಿದ ಕೂಡಲೇ, ರಘುವಂಶ ನಾಥನಾದ ಭಗವಾನ್ ಭರತನು ಸಾಯಂಸಂಧ್ಯಾದಿಕ್ರಿಯೆಗಳನ್ನು ನೆರವೇರಿಸಿ, ಆ ರಾತ್ರಿ ನಿಶ್ಚಿಂತನಾಗಿ ಮಲಗಿ ಸುಖವಾಗಿ ನಿದ್ದೆಮಾಡಿ ರಾತ್ರಿ ಕಳೆದು ಬೆಳಗಾದೊಡನೆಯೇ ಮೇಲಕ್ಕೆದ್ದು, ತನ್ನ ಕಡೆಯ ವೀರರೊಡನೆ ಗುಂಪುಕೂಡಿ ಯುದ್ಧಕ್ಕೆ ಪುನಃ ಹೊರಟನು.

ಇಲ್ಲಿಗೆ ನಾಲ್ಕನೆಯ ದಿವಸದ ಯುದ್ಧವೆಂಬ ಇನ್ನೂರರವತ್ತಮೂರನೆಯ
ಅಧ್ಯಾಯವು ಮುಗಿದುದು

॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಚತುಷ್ಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ತತೋಽಹ್ನಿ ಪಂಚಮೇ ಪ್ರಾಪ್ತೇ ಭರತೋ ಯುದ್ಧದುರ್ಮದಃ ।
ಕಲ್ಯಮುತ್ಥಾಯ ರಾಜೇಂದ್ರ ಕೃತಪೂರ್ವಾಹ್ಣಿಕಕ್ರಿಯಃ ॥ ೧ ॥

ಜಗಾಮ ಹಂತುಂ ಗಂಧರ್ವಾನ್ಬಲಮುತ್ಸೃಜ್ಯ ಪೃಷ್ಠತಃ ।
ಶೈಲೂಷೋಽಪಿ ರಣಂ ತ್ಯಕ್ತ್ವಾ ನರೇಂದ್ರನಿಧನೇಪ್ಸಯಾ ॥ ೨ ॥

---

### ಇನ್ನೂರಅರವತ್ತನಾಲ್ಕನೆಯ ಅಧ್ಯಾಯವು.

೧. ಮಾರ್ಕಂಡೇಯ ಮಹರ್ಷಿಯು ವಜ್ರಮಹಾರಾಜನನ್ನು ಕುರಿತು ಯುದ್ಧದ ಮುಂದಿನ ವೃತ್ತಾಂತವನ್ನು ಹೇಳುತ್ತಾನೆ:—ಕೇಳೈ, ವಜ್ರಮಹಾರಾಜ! ಯುದ್ಧವು ಆರಂಭವಾದ ಐದನೆಯ ದಿವಸ (ಯುದ್ಧದುರ್ಮದನಾದ) ಭರತನು ಮೇಲಕ್ಕೆದ್ದೊಡನೆಯೇ ಸ್ನಾನಮಾಡಿ ಪೂರ್ವಾಹ್ಣಿಕ ಕರ್ಮಗಳನ್ನೆಲ್ಲಾ ಯಥಾವಕಾಶವಾಗಿ ನೆರವೇರಿಸಿದನು.

೨. ಆಹ್ನಿಕಾನಂತರದೋಳ್, ಭರತನು ಸಕಲ ಗಂಧರ್ವರ ಸೈನ್ಯವನ್ನೂ ಸಂಹರಿಸಬೇಕೆಂದು ನಿಶ್ಚಯಿಸಿದವನಾಗಿ ತನ್ನ ಸೈನ್ಯವನ್ನು ತನ್ನ ಹಿಂದೆಯೇ ಬಿಟ್ಟು ಕೊಂಡು ಯುದ್ಧಭೂಮಿಯನ್ನು ಪ್ರವೇಶಿಸಿದನು. ಶೈಲೂಷನೂ ಸಹ ಅದೇ ರೀತಿಯಾಗಿ ಭರತನನ್ನು ಸಂಹರಿಸಿಬಿಡಬೇಕೆಂಬ ಸಂಕಲ್ಪದಿಂದ ತಾನೂ ಸಹ ಯುದ್ಧರಂಗಕ್ಕೆ ಅಡಿಯಿಟ್ಟನು.

ಜಗಾಮೈಕರಥೇನೈವ ರಣಕರ್ಮವಿಶಾರದಃ ।
ತಯೋರಾಸೀನ್ಮಹಾಘೋರಃ ಸಂಪ್ರಹಾರಃ ಸುದಾರುಣಃ ॥ ೩ ॥

ದೇವಾಸುರರಣಪ್ರಖ್ಯಃ ಸೂರ್ಯಸ್ಯೋದಯನಂ ಪ್ರತಿ ।
ತಯೋಸ್ತು ಯುಧ್ಯತೋ ರಾಜನ್ಗಂಧರ್ವಾಣಾಂ ಬಲಾರ್ಣವಂ ॥ ೪ ॥

ಛಾದಯಾಮಾಸ ಭರತಃ ಶರೈಃ ಸನ್ನತಪರ್ವಭಿಃ ।
ತಚ್ಚ ರಾಜನ್ಮಹೋದೀರ್ಣಾನಾಂ ಬಲಂ ಸಾಗರಸನ್ನಿಭಂ ॥ ೫ ॥

ಛಾದಯಾಮಾಸ ಗಂಧರ್ವಃ ಶರೈರಾಶೀವಿಷೋಪಮೈಃ ।
ಬಲಯೋರ್ಭೇ ವಿನಿರ್ಯಾತೇ ಶರವೃಷ್ಟಿಸುದಾರುಣೇ ॥ ೬ ॥

---

೩. ರಣಕರ್ಮವಿಶಾರದನಾದ ಗಂಧರ್ವರಾಜನು ಒಂದು ರಥದಮೇಲೆ ಕುಳಿತು ಯುದ್ಧಕ್ಕೆ ಬಂದಿದ್ದನು. ಆಗ ಅವರಿಬ್ಬರಿಗೂ ಬಹಳ ಭಯಂಕರವಾದ ಸಸಂಪ್ರಹಾರವಾದ, ಸುದಾರುಣವಾದ ಯುದ್ಧವು ಪ್ರಾರಂಭವಾಯಿತು.

೪. ಸೂರ್ಯೋದಯದಿಂದ ಆರಂಭವಾದ ಅವರೀರ್ವರ ಯುದ್ಧವನ್ನು ನೋಡಿದುದೇ ಆದರೆ ದೇವಾಸುರರ ಯುದ್ಧದಂತೆ ತೋರುತ್ತಿತ್ತು. ಈ ಪ್ರಕಾರವಾಗಿ ಅವರಿಬ್ಬರಿಗೂ ಯುದ್ಧವು ಉಪಕ್ರಮವಾದೊಡನೆಯೇ ಭರತನೇ ಮೊದಲು ಬಾಣವನ್ನು ತೊಟ್ಟನು.

೫. ಆರೀತಿ ತೊಟ್ಟ ಬಾಣಪ್ರತತಿಗಳಿಂದ ಗಂಧರ್ವರ ಸೈನ್ಯವೆಂಬ ಸಮುದ್ರವನ್ನು ಬಹಳವಾಗಿ ಕದಡಿಬಿಟ್ಟನು. ಆ ಬಾಣಪರಂಪರೆಗಳಿಂದ ಆಚ್ಛಾದಿತವಾದ ಸಾಗರೋಪಮವಾದ ಗಂಧರ್ವಸೈನ್ಯವು ಕ್ಷೋಭೆಹೊಂದಿತು.

೬ ಶೈಲೂಷನೇನೂ ಸುಮ್ಮನಿರಲಿಲ್ಲ. ಸರ್ಪಗಳಂತೆ ಕ್ರೂರವಾದ ಬಾಣಗಳನ್ನು ಮಾನವಸೈನ್ಯದ ಮೇಲೆ ಬಲವಾಗಿ ಪ್ರಯೋಗಿಸಿದನು. ಆ ದಾರುಣವಾದ ಶರವರ್ಷವನ್ನು ತಡೆದುಕೊಳ್ಳಲಾರದೆ ಉಭಯಪಕ್ಷಗಳಲ್ಲಿದ್ದ ಸೈನ್ಯವೂ ಸಹ ಹಿಂತಿರುಗಿ ಓಡಿಹೋಯಿತು.

ಧಾರಯೇತಾಂ ಮಹಾರಾಜ ಶೈಲೂಷಭರತಾವೃಭೌ ।
ಅಂತರಿಕ್ಷೇ ಶರವ್ರಾತಾಂಶ್ಛಿಚ್ಛಿದತುರರಿಂದಮೌ ॥ ೭ ॥

ಸೈನ್ಯಯೋಶ್ಚ ತಥಾ ಚಕ್ರೇ ಕದನಂ ಘೋರದರ್ಶನಂ ।
ತಯೋಶ್ಚಾಪಚ್ಯುತೈರ್ಬಾಣೈರ್ನಿಪಾತಿತಹಯದ್ವಿಪೈಃ ॥ ೮ ॥

ರಣೇ ವಿಸಸ್ರುಭೂರ್ಪಾಲ ಪ್ರವಂತ್ಯೋ ರಕ್ತನಿಮ್ನಗಾಃ ।
ವಹಂತ್ಯೋ ನರದೇಹಾನಿ ಯಕ್ಷರಾಕ್ಷಸ ಸೇವಿತಾಃ ॥ ೯ ॥

ತಾಭ್ಯಾಂ ಮುಕ್ತೈಃ ಶರವ್ರಾತೈರ್ಗಗನೇ ಸೂರ್ಯರಶ್ಮಯಃ ।
ನ ಪ್ರಕಾಶಂತ ರಾಜೇಂದ್ರ ವಿಕೀರ್ಣಾಂತೋ ನಭಸ್ತಲೇ ।
ಸೈನಿಕಾನ್ಪಾತಯಂತೌ ತೌ ರಕ್ಷಮಾಣೌ ಚ ಸಾರಥೀ ॥ ೧೦ ॥

---

೭. ಆಗ ರಣಮುಖದಲ್ಲಿ ಉಳಿದಿದ್ದ ಶೈಲೂಷ ಭರತರಿಬ್ಬರೇ ಆ ಬಾಣ ಪರಂಪರೆಗಳನ್ನು ಆಕಾಶಮಾರ್ಗದಲ್ಲಿಯೇ ಪರಸ್ಪರವಾಗಿ ಕತ್ತರಿಸಿಬಿಟ್ಟರು.

೮. ಅಷ್ಟರೊತ್ತಿಗೆ ಓಡಿಹೋಗಿದ್ದ ಉಭಯಪಕ್ಷದ ಸೈನ್ಯಗಳೂ ರಣರಂಗ ದಲ್ಲಿ ಪರಸ್ಪರ ಅಭಿಮುಖವಾಗಿ ನಿಂತುಕೊಂಡವು. ಆರೀತಿ ಸಿದ್ಧವಾದ ಉಭಯ ಸೈನ್ಯಗಳಿಗೂ ಪುನಃ ಘೋರಕದನಕ್ಕಾರಂಭವಾಯಿತು. ಪರಸ್ಪರರ ಧನುಸ್ಸುಗಳಿಂದ ಪ್ರಯೋಗಿಸಲ್ಪಟ್ಟ ಬಾಣಗಳಿಂದ ಎರಡು ಕಡೆಯ ಸೈನ್ಯಗಲ್ಲಿಯೂ ಇದ್ದ ಆನೆಗಳೂ ಕುದುರೆಗಳೂ ಅನೇಕವಾಗಿ ನೆಲಕ್ಕೆ ಬಿದ್ದು ಸತ್ತುಹೋದುವು.

೯. ಹೀಗೆ ಸತ್ತುಬಿದ್ದ ಆ ಪ್ರಾಣಿಗಳ ದೇಹದಿಂದ ಹೊರಟ ರಕ್ತಧಾರೆಯು ಪ್ರವಾಹರೂಪವಾಗಿ ಹರಿಯಲಾರಂಭವಾಯಿತು. ಆ ನದಿಯಲ್ಲಿ ಸತ್ತುಬಿದ್ದಿದ್ದ ಮನುಷ್ಯರ ಮತ್ತು ಗಂಧರ್ವರ ದೇಹಗಳು ತೇಲುತ್ತಾ ಬಂದುವು. ಆ ಹೆಣಗಳನ್ನು ಯಕ್ಷರೂ ರಾಕ್ಷಸರೂ ಮುತ್ತಿ ಕಿತ್ತುತಿನ್ನಲಾರಂಭಿಸಿದರು.

೧೦. ಶೈಲೂಷ ಭರತರೀರ್ವರೂ ಬಿಟ್ಟ ಬಾಣಪರಂಪರೆಗಳು ಆಕಾಶಮಾರ್ಗ ದಲ್ಲಿ ಹಾರಾಡುತ್ತಾ ಸೂರ್ಯಮಂಡಲವನ್ನು ಮುಚ್ಚಿಬಿಡಲು, ಆಕಾಶದಲ್ಲಿ ಏನೇನೂ ಬೆಳಕೇ ಇಲ್ಲದೆ ಕತ್ತಲೆಕವಿದಂತಾಯಿತು. ಆ ವೀರರೀರ್ವರೂ ಈ ಪ್ರಕಾರವಾಗಿ ಪರಸ್ಪರವಾಗಿ ಬಾಣವರ್ಷಗಳನ್ನು ಸುರಿಸುತ್ತಾ ತಮ್ಮ ತಮ್ಮ ರಥದ ಮೇಲೆ ಕುಳಿತು ಸಾರಥಿಗಳನ್ನು ಜಾಗರೂಕತೆಯಿಂದ ಕಾಪಾಡಿಕೊಳ್ಳುತ್ತಿದ್ದರು.

ಛಿಂದಮಾನೌ ರಣೇ ವೀರೌ ಶರಮುಕ್ತಾಂಸ್ತಥಾಽಯುಧಾನ್
ಜನಯಾಮಾಸತು ವೀರೌ ಸುರಾಣಾಮಪಿ ವಿಸ್ಮಯಂ ॥ ೧೧ ॥

ತದ್ಯುದ್ಧಂ ಪೂಜಯಾಮಾಸ ಪುಷ್ಪವರ್ಷೇಣ ವಾಸವಃ ।
ತೌ ಪ್ರಬುದ್ಧೌ ದಿನಂ ಸರ್ವಂ ವರಬಾಣಧನುರ್ಧರೌ ॥ ೧೨ ॥

ನಾಸೀದೇಕತರಸ್ಯಾಪಿ ರಣೇ ತಸ್ಮಿನ್ಪರಾಜಯಃ ।
ತತೋಽಸ್ತಂ ಭಗವತ್ಯರ್ಕೇ ಪ್ರಯಾತೇ ಪೃಥಿವೀಪತೇ ।
ಪರಸ್ಪರಸ್ಯಾನುಮತೇ ಶಿಬಿರಾಣ್ಯೇವ ಜಗ್ಮತುಃ ॥ ೧೩ ॥

ಅಥೋಷ್ಯರಾತ್ರಿಂ ಗೃಹಯೋಃ ಪ್ರವಿಷ್ಟೌ
ರಾತ್ರ್ಯಂತಮಾಸಾದ್ಯ ತದಾ ರಣಾಯ ।

---

೧೧. ಒಬ್ಬರಮೇಲೊಬ್ಬರು ಬಿಡುತ್ತಿದ್ದ ಬಾಣಗಳನ್ನೂ, ವಿವಿಧವಾದ ಆಯುಧಗಳನ್ನೂ ರಣವೀರರಾದಾ ಜಾಣರೀರ್ವರೂ ಪರಸ್ಪರವಾಗಿ ಕತ್ತರಿಸಿ ಕೆಡುವುತ್ತಾ, ಆಕಾಶದಲ್ಲಿದ್ದ ದೇವತೆಗಳಿಗೂ ಸಹ ಆಶ್ಚರ್ಯವನ್ನುಂಟುಮಾಡುತ್ತಿದ್ದರು.

೧೨. ತ್ರಿಲೋಕಾಧಿಪತಿಯಾದ ದೇವೇಂದ್ರನು ಅಂತರಿಕ್ಷದಲ್ಲಿಯೇ ನಿಂತುಕೊಂಡು ಆ ವೀರರ ಮೇಲೆ ಪುಷ್ಪವರ್ಷವನ್ನು ಸುರಿಸಿ ಪೂಜೆಮಾಡಿದನು. ಈರೀತಿ ಆ ದಿವಸವೆಲ್ಲಾ ಆ ವೀರರೀರ್ವರೂ ಧನುರ್ಬಾಣಗಳನ್ನು ಧರಿಸಿದವರಾಗಿ ಸಂಜೆಯುತನಕ ಯುದ್ಧವನ್ನು ನಡೆಸಿದರು.

೧೩. ಆದಿನ ನಡೆದ ಯುದ್ಧದಲ್ಲಿ ಪರಸ್ಪರವಾಗಿ ಯಾರೂ ಸೋಲಲೇ ಇಲ್ಲ. ಅಷ್ಟರೊಳಗಾಗಿ ಸಾಯಂಕಾಲವಾಗಿಯೇ ಹೋಯಿತು. ದಣಿದಿದ್ದ ಅವರಿಬ್ಬರೂ ಯುದ್ಧವನ್ನು ಅಂದಿಗೆ ಮುಕ್ತಾಯಮಾಡಿದರು. ಒಬ್ಬರಿಗೊಬ್ಬರು ಮಾತನಾಡಿಕೊಂಡು ಪರಸ್ಪರ ಆಜ್ಞಾನುಸಾರವಾಗಿ ತಮ್ಮ ತಮ್ಮ ಶಿಬಿರಗಳಿಗೆ ಹಿಂತಿರುಗಿ ಹೋದರು.

೧೪. ತಮ್ಮ ತಮ್ಮ ಬಿಡಾರಗಳಿಗೆ ತೆರಳಿದ ಆ ವೀರರೀರ್ವರೂ ಆ ರಾತ್ರಿಯನ್ನು ಸುಖವಾಗಿ ಕಳೆದು, ಆ ರಾತ್ರಿ ಕಳೆದು ಬೆಳಗಾದೊಡನೆಯೇ ಪುನಃ ಯುದ್ಧ

ಭೂಯೋ ಮಹೇಂದ್ರೋಪಮ ಸಂಪ್ರಯಾತೌ
ಪ್ರಹರ್ಷಯಂತೌ ಸ್ವಬಲಾನಿ ವೀರೌ ॥ ೧೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಭರತಶೈಲೂಷಯುದ್ಧೇ ಪಂಚಮ
ದಿವಸಯುದ್ಧವರ್ಣನಂನಾಮ ಚತುಷ್ಷಷ್ಟ್ಯುತ್ತರ
ದ್ವಿಶತತಮೋಽಧ್ಯಾಯಃ.

ರಂಗಕ್ಕೆ ಹೊರಡಲನುವಾದರು. ಎಲೈ ಮಹೇಂದ್ರನಿಗೆ ಸಮಾನವೀರ್ಯನಾದ ವಜ್ರ ಮಹಾರಾಜನೇ! ಕೇಳು. ಆ ವೀರಶ್ರೇಷ್ಠರೂ ತಮ್ಮ ತಮ್ಮ ಸೈನ್ಯದ ಜನರನ್ನು ಪ್ರೋತ್ಸಾಹಿಸಿ ಅವರನ್ನು ಯುದ್ಧೋನ್ಮುಖರಾಗಲು ಹುರಿದುಂಬಿಸುತ್ತಾ ರಣರಂಗ ದಲ್ಲಿದ್ದರು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಐದನೆಯ ದಿವಸದ ಯುದ್ಧವರ್ಣನೆ
ಎಂಬ ಹೆಸರಿನ ಇನ್ನೂರಅರವತ್ತನಾಲ್ಕನೆಯ ಅಧ್ಯಾಯವು
ಮುಗಿದುದು.

ಶ್ರೀ

# ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
# ಪಂಚಷಷ್ಟ್ಯುತ್ತರದ್ವಿಶತತಮೋಽಧ್ಯಾಯ

॥ ಮಾರ್ಕಂಡೇಯ ಉವಾಚ ॥

ತತಸ್ತು ಷಷ್ಠೇ ಸಂಪ್ರಾಪ್ತೇ ದಿವಸೇ ಭೂರಿದಕ್ಷಿಣೇ ।
ಚಕ್ರತುಃ ಸಮರಂ ವೀರೌ ಶೈಲೂಷಭರತಾವುಭೌ ॥ ೧ ॥

ಸಸೈನ್ಯೌ ಪೃಥಿವೀಪಾಲ ಶರೈರಾಶೀವಿಷೋಪಮೈಃ ।
ಶೈಲೂಷೇಣ ಸಮಾಸಕ್ತೋ ಭರತೋ ವಾಹಿನೀಪತಿಃ ॥ ೨ ॥

ಸೂರ್ಯರಶ್ಮೇಶ್ಶರೇಣಾಜೌ ಶಿರಶ್ಚಿಚ್ಛೇದ ಶತ್ರುಹಾ ।
ಸೂರ್ಯರಶ್ಮಿಂ ರಣೇ ಹತ್ವಾ ಏಕಲವ್ಯಂ ಮಹಾರಥಂ ॥ ೩ ॥

---

## ಇನ್ನೂರಅರವತ್ತೈದನೆಯ ಅಧ್ಯಾಯವು.

೧. ಮಾರ್ಕಂಡೇಯನು ಹೇಳುತ್ತಾನೆ :—ಆರನೆಯ ದಿನ ಆರಂಭವಾಯಿತು. ಆ ದಿನವೂ ಸಹ ಯಥಾಪ್ರಕಾರವಾಗಿ ಭರತಶೈಲೂಷರಿಬ್ಬರೂ ಪ್ರಾತಃಕಾಲದಲ್ಲಿದ್ದು ಯುದ್ಧಮಾಡಲುಜ್ಜುಗಿಸಿದರು.

೨. ಎಲೈ, ವಜ್ರಮಹಾರಾಜನೇ! ಕೇಳು. ಸೈನ್ಯಾಧಿಪತಿಯೊಡನೆ ಕೂಡಿ ಭರತನು ಶೈಲೂಷನೊಡನೆ ಯುದ್ಧಮಾಡಲಾರಂಭಿಸಿ ಸರ್ಪಗಳಿಗೆ ಸಮಾನವಾದ ತನ್ನ ಬಾಣಗಳಿಂದ ಶೈಲೂಷನ ಮಗ ಸೂರ್ಯರಶ್ಮಿಯನ್ನು ಪ್ರಹರಿಸಿದನು.

೩. ಆ ಬಾಣಪ್ರಹಾರದಿಂದ ಸೂರ್ಯರಶ್ಮಿಯ ತಲೆಯನ್ನು ಕತ್ತರಿಸಿ, ಅವನು ಹತನಾದೊಡನೆಯೇ ಮಹಾರಥನಾದ ಶೈಲೂಷನ ಇನ್ನೊಬ್ಬ ಮಗ ಏಕಲವ್ಯನನ್ನು ರಥದಮೇಲೆ ಕುಳಿತಿದ್ದಂತೆಯೇ ಬಾಣವನ್ನು ಹೊಡೆದುರುಳಿದನು.

ಶರೇಣ ಪಾತಯಾಮಾಸ ರಥೋಪಸ್ಥಾದರಿಂದಮಂ ।
ಗಂಧರ್ವನೃಪತಿರ್ದೃಷ್ಟ್ವಾ ಪ್ರಧಾನೌ ತೌ ಸುತೌ ಹತೌ ॥ ೪ ॥

ಶಕ್ತ್ಯಾ ಬಿಭೇದ ವಿಜಯಂ ತಥಾ ಚಕ್ರೇಣ ಪುಷ್ಕರಂ ।
ತೋಮರೇಣ ತಥಾ ತಕ್ಷಂ ಗದಯಾ ಚ ಸುಯೋಧನಂ ॥ ೫ ॥

ವಿವಿಶುಸ್ತೇ ರಥೋಪಸ್ಥಂ ವಿಸಂಜ್ಞಾಃ ಸರ್ವ ಏವ ತು ।
ನಿಯಂತೃಭಿಶ್ಚ ಸಮರಾತ್ಸರ್ವ ಏವಾಪವಾಹಿತಾಃ ॥ ೬ ॥

ತತಸ್ತು ಭರತಃ ಕ್ರುದ್ಧಶ್ಚತುರ್ಭಿಸ್ತಸ್ಯ ಸಾಯಕೈಃ ।
ಚಕಾರ ಯುಧಿ ನಿರ್ಜೀವಾಂಸ್ತುರಂಗಾಂಶ್ಚೈವ ಯಾದವ ॥ ೭ ॥

---

೪-೫ ಗಂಧರ್ವಪ್ರಭುವಾದ ಶೈಲೂಷನು ಮೊದಲೊದಲಾಗಿ ತನ್ನಿಬ್ಬರು ಪ್ರಧಾನರಾದ ಮಕ್ಕಳು ಸಂಹೃತರಾದುದನ್ನು ನೋಡಿ ಕ್ರೋಧಪರವಶನಾಗಿ, ಭರತನ ಕಡೆಯ ಸೈನ್ಯಾಧಿಪತಿಯಾದ ವಿಜಯನನ್ನು ಒಂದು ಶಕ್ತ್ಯಾಯುಧದಿಂದಲೂ, ಭರತನ ಮಗನಾದ ಪುಷ್ಕರನನ್ನು ಚಕ್ರಾಯುಧದಿಂದಲೂ, ಮತ್ತೊಬ್ಬ ತಕ್ಷನನ್ನು ತೋಮರದಿಂದಲೂ, ಸುಯೋಧನನನ್ನು ಗದಾಯುಧದಿಂದಲೂ ಒಂದೇ ಕಾಲ ದಲ್ಲಿ ಪ್ರಹರಿಸಿದನು.

೬. ಈರೀತಿ ಪ್ರಹರಿಸಲ್ಪಟ್ಟವರಾದ ಅವರೆಲ್ಲರೂ ಸಂಜ್ಞಾರಹಿತರಾಗಿ ರಥಗಳ ಮೇಲೆ ತಾವು ಕೂತಿದ್ದಲ್ಲಿಯೇ ಉರುಳಿಕೊಂಡು ಬಿದ್ದುಬಿಟ್ಟರು. ಅದನ್ನು ನೋಡಿ ಭರತನ ಕಡೆ ನಿಯಂತೃ (ಆಜ್ಞಾಧಾರಿ)ಗಳು ಅವರೆಲ್ಲರನ್ನೂ ರಣರಂಗದಿಂದ ಹಿಂತಿರು ಗಿಸಿ ಶಿಬಿರಗಳಿಗೆ ಕರೆದುಕೊಂಡು ಹೋಗಿ ಔಷಧೋಪಚಾರಮಾಡಲುದ್ಯುಕ್ತರಾದರು.

೭. ತನ್ನ ಮಕ್ಕಳೂ, ಪ್ರಮುಖರಾದ ವೀರರೂ ಸಹ ಈರೀತಿಯಾಗಿ ಏಟು ತಿಂದು ಸಂಕಟಪಡುತ್ತಾ ರಣರಂಗದಿಂದ ಅಪವಾಹಿತರಾದುದನ್ನು ನೋಡಿ ಭರತನು ತಡೆಯಲಾರದೆ ಕೋಪದಿಂದ ಕೂಡಿದವನಾಗಿ ಮೊನೆಯಾದ ನಾಲ್ಕು ಬಾಣಗಳನ್ನು ತೆಗೆದುಕೊಂಡು ಬಿಲ್ಲಿನಲ್ಲಿ ಬಲವಾಗಿ ಜಗ್ಗಿಸಿ ಶೈಲೂಷನ ರಥಕ್ಕೆ ಕಟ್ಟಿದ್ದ ಕುದುರೆಗಳ ಮೇಲೆ ಪ್ರಯೋಗಿಸಿ ಅವುಗಳನ್ನು ನಿರ್ಜೀವಿಗಳನ್ನಾಗಿಮಾಡಿದನು.

ಚಕಾರ ಚ ಶರವ್ರಾತ್ಯೈರ್ವಿಮುಖೀಕೃತವಿಕ್ರಮಂ ।
ತತೋ ಧೈರ್ಯೇಣ ಸಂಧಾರ್ಯ ಶರವೇಗಂ ಮಹಾತ್ಮನಃ ॥ ೮ ॥

ಆರುರೋಹ ರಥಂ ಶೀಘ್ರಂ ಸುಸನ್ನದ್ಧೋ ಮಹಾಬಲಃ ।
ರಥಮಾರುಹ್ಯ ವಿವ್ಯಾಧ ಶರೇಣಾನತಪರ್ವಣಾ ॥ ೯ ॥

ಭರತೋ ಹೃದಯೇ ಗಾಢಂ ಮುಮೋಹ ಸ ಚ ತಾಡಿತಃ ।
ಏತಸ್ಮಿನ್ನಂತರೇ ಮುಕ್ತೋ ಹಾಹಾಕಾರಃ ಸುರಾಸುರೈಃ ॥ ೧೦ ॥

ಅಪಹೃಷ್ಟೈಃ ಪ್ರಹೃಷ್ಟೈಶ್ಚ ವಿಮೂಢೇ ರಘುನಂದನೇ ।
ಹಾಹಾಕಾರೇಣ ಮಹತಾ ಲಬ್ಧಸಂಜ್ಞಃ ಸ ರಾಘವಃ ॥ ೧೧ ॥

---

೮. ಮತ್ತು ಅನೇಕ ಬಾಣಗಳನ್ನು ತೊಟ್ಟು ಗಂಧರ್ವರಾಜನಮೇಲೆ ಪ್ರಯೋಗಿಸಿ, ಅವನು ಕಂಗೆಟ್ಟು ಯುದ್ಧದಿಂದ ಹಿಂತಿರುಗುವಷ್ಟರಮಟ್ಟಿಗೆ ಮಾಡಿಬಿಟ್ಟನು. ಇಷ್ಟೇಟುಗಳನ್ನು ತಿಂದು ವಿಮುಖೀಕೃತವಿಕ್ರಮನಾದಾಗ್ಯೂ, ಶೈಲೂಷನು ಬಹು ಕಷ್ಟದಿಂದ ಭರತನ ಬಾಣದಿಂದ ಕಂಗೆಟ್ಟಿದ್ದಾಗ್ಯೂ ಧೈರ್ಯವನ್ನು ತಂದುಕೊಂಡವನಾಗಿ, ನೋವನ್ನು ಲಕ್ಷಿಸದೆ ರಥದ ಮೇಲೆ ಕುಳಿತುಕೊಂಡನು.

೯. ಈ ಪ್ರಕಾರವಾಗಿ ವೀರನಾದ ಶೈಲೂಷನು ರಥಾಂತರವನ್ನಾರೋಹಿಸಿ ಬಿಲ್ಲನ್ನು ಕಿವಿಯವರೆಗೆ ಎಳೆದು ಬಾಣಗಳನ್ನದಕ್ಕೆ ಜೋಡಿಸಿ ಭರತನ ಎದೆಗೆ ಗುರಿಯಿಟ್ಟು ಹೊಡೆದನು.

೧೦. ಆ ಬಾಣದೇಟುಗಳು ಭರತನ ಎದೆಗೆ ತಾಕಿ ಅವನ್ನು ಸಹಿಸಲಾರದೆ ಭರತನು ಆ ಕೂಡಲೆ ಮೂರ್ಛಿತನಾಗಿ ಬಿದ್ದುಬಿಟ್ಟನು. ಯಾವಾಗ ಭರತನು ಬಿದ್ದು ಮೂರ್ಛಿತನಾದನೋ ಆ ಕ್ಷಣವೇ ಆಕಾಶದಲ್ಲಿ ಯುದ್ಧವನ್ನು ನೋಡುತ್ತಾ ನಿಂತಿದ್ದ ದೇವತೆಗಳೆಲ್ಲರೂ ಹಾಹಾಕಾರಮಾಡತೊಡಗಿದರು.

೧೧. ಭರತನು ಬಿದ್ದುದಕ್ಕೆ ಅನೇಕರು ಸಂತೋಷಪಟ್ಟರು. ಮತ್ತನೇಕರು ತಡೆಯಲಾರದ ದುಃಖದಲ್ಲಿ ಬಿದ್ದು ಹಾಹಾಕಾರಮಾಡುತ್ತಿರಲು, ಈರೀತಿ ಜನರು ಹಾಹಾ ಎನ್ನುವುದರೊಳಗಾಗಿ ಭರತನು ಮೂರ್ಛೆ ತಿಳಿದೆದ್ದನು.

ಆಕೃಷ್ಯ ಬಲವಚ್ಚಾಪಂ ಶೈಲೂಷಸ್ಯ ಮಹದ್ಧನುಃ ।
ದ್ವಿಧಾ ಚಕಾರ ರಾಜೇಂದ್ರ ಶೈಲೂಷಂ ಚಾಹನದ್ಭೃಶಂ ॥ ೧೨ ॥

ಸ ಚ್ಛಿನ್ನಧನ್ವಾ ವೇಗೇನ ಗದಾಮಾದಾಯ ಸತ್ವರಃ ।
ಪ್ರೇಷಯಾಮಾಸ ಧರ್ಮಜ್ಞ ಭರತಸ್ಯ ಮಹಾತ್ಮನಃ ॥ ೧೩ ॥

ಆಪತಂತೀಂ ಗದಾಂ ದೃಷ್ಟ್ವಾ ಭರತೋ ರಣಮೂರ್ಧನಿ ।
ದ್ವಿಧಾ ಚಕಾರ ಚಕ್ರೇಣ ಸರ್ವಸೈನ್ಯಸ್ಯ ಪಶ್ಯತಃ ॥ ೧೪ ॥

ತತಃ ಸ ಪರಿಘಂ ಶೀಘ್ರಂ ಚಿಕ್ಷೇಪ ಭರತಂ ಪ್ರತಿ ।
ತಮಾಪತಂತಂ ಚಿಚ್ಛೇದ ಚತುರ್ಭಿಃ ಸಾಯಕೈರ್ದೃಢಂ ॥ ೧೫ ॥

---

೧೨. ಲಬ್ಧಸಂಜ್ಞನಾದ ಭರತನು ಆ ಕೂಡಲೆ ಧನುಸ್ಸನ್ನು ಬಲವಾಗಿ ಬಗ್ಗಿಸಿ, ಆದಕ್ಕೆ ಬಾಣಗಳನ್ನು ತೊಡಿಸಿ, ಶೈಲೂಷನ ಕೈಯಲ್ಲಿ ಹಿಡಿದಿದ್ದ ಧನುಸ್ಸಿಗೆ ಗುರಿಯಿಟ್ಟು ಹೊಡೆದು ಆ ಧನುಸ್ಸನ್ನು ಎರಡು ತುಂಡುಮಾಡಿ, ಬರಿಗೈಯಲ್ಲಿದ್ದ ಶೈಲೂಷನನ್ನು ಬೇರೆ ಬಾಣಗಳಿಂದ ಬಲವಾಗಿ ಹೊಡೆದನು.

೧೩. ತನ್ನ ಕೈಯಲ್ಲಿದ್ದ ಧನುಸ್ಸು ಕತ್ತರಿಸಿಹೋದುದನ್ನು ನೋಡಿ ಶೈಲೂಷನು ತನ್ನ ಬಳಿಯಲ್ಲಿದ್ದ ಗದೆಯೊಂದನ್ನು ತನ್ನ ಕೈಗೆ ತೆಗೆದುಕೊಂಡು, ಅದನ್ನು ಬಹು ವೇಗವಾಗಿ ತಿರುಗಿಸಿ ಮಹಾತ್ಮನಾದ ಭರತನ ಮೇಲೆ ಎಸೆದನು.

೧೪. ರಣರಂಗದಲ್ಲಿ ರಣವೇಗದಿಂದೋಡಿ ಬಂದು ತನ್ನ ಮೇಲೆ ಬೀಳಲು ಬರುತ್ತಿದ್ದ ಶೈಲೂಷನ ಗದೆಯನ್ನು ನೋಡಿ, ಭರತನು ಸಕಲ ಸೈನ್ಯವೂ ನೋಡುತ್ತಿದ್ದ ಹಾಗೆಯೇ ಆ ಗದೆಯನ್ನು ಚಕ್ರಾಯುಧದಿಂದ ಎರಡುಪಾಲು ಮಾಡಿ ಕೆಡವಿದನು.

೧೫ ಗದೆಯೂ ಸಹ ತುಂಡಾದುದನ್ನು ನೋಡಿ ಭರತನ ಮೇಲೆ ಶೈಲೂಷನು ಒಂದು ಪರಿಘವನ್ನು ಪ್ರಯೋಗಿಸಿದನು. ತನ್ನ ಮೇಲೆ ಬೀಳುವುದಕ್ಕಾಗಿ ಬರುತ್ತಿದ್ದ ಆ ಪರಿಘಾಯುಧವನ್ನು ಭರತನು ದೃಢವಾದ ನಾಲ್ಕು ಬಾಣಗಳಿಂದ ದಾರಿಯಲ್ಲಿಯೇ ಛೇದಿಸಿಬಿಟ್ಟನು.

ತತೋಽನ್ಯದ್ಧನುರಾದಾಯ ಸಾಯಕಾನೇಕವಿಂಶತಿಂ ।
ಚಿಕ್ಷೇಪ ಸ ಮಹಾರಾಜ ಭರತಸ್ಯ ರಥಂ ಪ್ರತಿ ॥ ೧೬ ॥

ಛಿತ್ತ್ವಾ ತಾನ್ಭರತಃ ಸರ್ವಾನವಧೀತ್ತಸ್ಯ ಸಾರಥಿಂ ।
ತಥಾ ಚ ಚತುರೋ ವಾಹಾನನಯದ್ಯಮಸಾದನಂ ॥ ೧೭ ॥

ಶೈಲೂಷಂ ವಿರಥಂ ದೃಷ್ಟ್ವಾ ಗಂಧರ್ವಾಣಾಂ ಮಹಾಚಮೂಃ ।
ವವರ್ಷಾಯುಧವರ್ಷೇಣ ಮೇಘೋ ವೃಷ್ಟ್ಯೇವ ಪರ್ವತಂ ॥ ೧೮ ॥

ಸ ಮೋಹಯಿತ್ವಾ ಭರತಂ ಮೋಕ್ಷಯಾಮಾಸ ಪಾರ್ಥಿವ ।
ಮೋಕ್ಷಯಿತ್ವಾ ಚ ರಾಜಾನಂ ಗತೇಽಸ್ತಂ ರವಿಮಂಡಲೇ ॥ ೧೯ ॥

---

೧೬. ಶೈಲೂಷನು ಬೇರೊಂದು ಬಿಲ್ಲನ್ನು ಕೈಗೆ ತೆಗೆದುಕೊಂಡು ಆ ಬಿಲ್ಲಿನಲ್ಲಿ ಇಪ್ಪತ್ತೊಂದು ಬಾಣಗಳನ್ನು ಒಟ್ಟಿಗೆ ಹೂಡಿ ಆ ಬಾಣಗಳನ್ನು ಭರತನ ರಥದಮೇಲೆ ಪ್ರಯೋಗಿಸಿದನು.

೧೭. ಈ ರೀತಿ ತನ್ನಮೇಲೆ ಪ್ರಯೋಗಿಸಲ್ಪಟ್ಟ ಆ ಬಾಣಗಳೆಲ್ಲವನ್ನೂ ಭರತನು ತುಂಡುತುಂಡುಮಾಡಿ, ತಾನು ಬೇರೆ ಬಾಣಗಳನ್ನು ಪ್ರಯೋಗಿಸಿ ಶೈಲೂಷನ ಸಾರಥಿಯ ತಲೆಗೆ ಹೊಡೆದು ಉರುಳಿಸಿಬಿಟ್ಟನು ಮತ್ತೂ ಬಿಡದೆ ಕೆಲವು ಬಾಣಗಳಿಂದ ರಥಕ್ಕೆ ಬಿಗಿದಿದ್ದ ನಾಲ್ಕು ಕುದುರೆಗಳನ್ನೂ ಸಹ ಯಮಪುರಿಗೆ ಕಳುಹಿಸಿದನು.

೧೮. ಶೈಲೂಷನ ರಥದ ಕುದುರೆಗಳೂ, ಸಾರಥಿಯೂ ಸತ್ತೊರಗಿದುದನ್ನೂ ವಿರಥನಾದ ಅವನ ವಿಪನ್ನಾವಸ್ಥೆಯನ್ನೂ ನೋಡಿ ವೀರಗಂಧರ್ವರೆಲ್ಲರೂ ಮಮ್ಮಲ ಮರುಗಿ ತಮ್ಮ ಸೈನ್ಯದಲ್ಲಿ ಇದ್ದ ಬದ್ದ ಎಲ್ಲಾ ವಿಧವಾದ ಬಾಣಗಳನ್ನೂ, ಆಯುಧಗಳನ್ನೂ ಒಟ್ಟಿಗೆ ತೆಗೆದುಕೊಂಡು ಬಂದು, ಬೆಟ್ಟದ ಮೇಲೆ ಮಳೆಸುರಿದಂತೆ ಭರತನ ಮೇಲೆ ಸುಮ್ಮನೆ ಸುರಿದುಬಿಟ್ಟರು,

೧೯. ಈರೀತಿ ಸುರಿದ ಬಾಣಾಯುಧಪರಂಪರಾಧಾರೆಯಿಂದ ಭರತನು ಜ್ಞಾನವಿಲ್ಲದೆ ಮೂರ್ಛೆಬಿದ್ದುಬಿಟ್ಟನು. ಅಷ್ಟು ಹೊತ್ತಿಗೆ ಸಾಯಂಕಾಲ ಸಮಯವು ಪ್ರಾಪ್ತವಾದುದರಿಂದ ಶೈಲೂಷನು ರಥದಮೇಲೆ ಮೂರ್ಛಿತನಾಗಿದ್ದ ಭರತನನ್ನು ಹಾಗೆಯೇ ಬಿಟ್ಟವನಾಗಿ ಯುದ್ಧವನ್ನಲ್ಲಿಗೆ ನಿಲ್ಲಿಸಿದನು.

ಕೃತ್ವಾವಹಾರಂ ತು ಗತಃ ಶಿಬಿರಾಯ ನರಾಧಿಪಃ ॥ ೨೦ ॥
ಹತ್ವಾ ರಥೇ ನಾಗರಥಾಶ್ವಯೋಧಾ-
ನ್ಸಂಪ್ರಾಪ್ಯ ಮಧ್ಯೇ ನಿಶಿತೈಃ ಪೃಷತ್ಕೈಃ ।
ರಘುಪ್ರವೀರೋಽಪಿ ಗೃಹಾಯ ಯಾತಃ
ಸಂಪೂಜ್ಯಮಾನೋ ಭುವಿ ಮಾನವೇಂದ್ರೈಃ ॥ ೨೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷಭರತಯುದ್ಧೇ ಷಷ್ಠಯುದ್ಧ
ದಿವಸೋನಾಮ ಪಂಚಷಷ್ಟ್ಯುತ್ತರ
ದ್ವಿಶತತಮೋಽಧ್ಯಾಯಃ.

---

೨೦. ಸಂಧ್ಯಾಕಾಲದ ಮಂದಮಾರುತನ ಶೀತಸ್ಪರ್ಶದಿಂದ ಸಂಜ್ಞೆಯನ್ನು ತೆಗೆದುಕೊಂಡವನಾಗಿ ಆ ಭರತನೂ, ಶೈಲೂಷನು ತನ್ನ ಮನೆಗೆ ಹೊರಟುಹೋದು ದನ್ನು ತಿಳಿದು ತಾನೂ ಕೂಡ ಅಂದಿನ ದಿವಸದ ಯುದ್ಧವನ್ನು ಮುಕ್ತಾಯಮಾಡಿ ಮನೆಯ ಕಡೆಗೆ ತೆರಳಿದನು.

೨೧. ಈ ಪ್ರಕಾರವಾಗಿ ಆ ಮಹಾವೀರನಾದ ಭರತನು ಅನೇಕ ರಥಗಳನ್ನೂ, ಆನೆ ಕುದುರೆ ಕಾಲಾಳುಗಳನ್ನೂ ಸಹ ನಾಶಗೊಳಿಸಿ, ತೀಕ್ಷ್ಣವಾದ ಬಾಣಗಳಿಂದ ತಾನೂ ಸಹ ಆದಿನ ಬಲವಾಗಿ ನೊಂದವನಾಗಿ, ಎಲ್ಲರೂ ಜಯಜಯರಘುವೀರ ಸಮರ್ಥ! ಎಂದು ಹೊಗಳುತ್ತಿರಲು ಶಿಬಿರದ ಕಡೆ ಹೊರಡುವಂಥವನಾದನು.
ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ

ವಜ್ರಸಂವಾದರೂಪವಾದ ಶೈಲೂಷ ಭರತ ಯುದ್ಧದಲ್ಲಿ ಆರನೆಯ
ದಿವಸದ ಯುದ್ಧಪ್ರಸಂಗವೆಂಬ ಹೆಸರಿನ
ಇನ್ನೂರಅರವತ್ತೈದನೆಯ
ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಷಟ್‌ಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ತತಸ್ತು ಸಪ್ತಮೇ ಪ್ರಾಪ್ತೇ ದಿವಸೇ ಯುದ್ಧದುರ್ಮದೌ ।
ಸಮೀಯತುರ್ಮಹಾತ್ಮಾನೌ ಶೈಲೂಷಭರತಾವುಭೌ ॥ ೧ ॥

ತತಸ್ತು ಭರತಃ ಪ್ರಾಹ ಶೈಲೂಷಂ ಯುದ್ಧದುರ್ಮದಂ ।
ಆವಯೋಃ ಪ್ರಸ್ತುತಂ ಸೈನ್ಯಂ ಕಿಮೇತೈಸ್ಸೈನಿಕೈರ್ಮೃತೈಃ ॥ ೨ ॥

ನಿವಾರಯಸ್ವ ಸೈನ್ಯಂ ಸ್ವಂ ವಾರಯಿಷ್ಯಾಮ್ಯಹಂ ಸ್ವಕಂ ।
ಆವಯೋರ್ದ್ವೈರಥಂ ಯುದ್ಧಂ ಪಶ್ಯಂತು ವಸುಧಾಧಿಪಾಃ ॥ ೩ ॥

---

### ಇನ್ನೂರಅರವತ್ತಾರನೆಯ ಅಧ್ಯಾಯವು.

೧. ಮಾರ್ಕಂಡೇಯನು ಯುದ್ಧದ ವಿಚಾರವನ್ನು ಮುಂಬರಿಸಿ ವಜ್ರರಾಜನೊಡನೆ ಹೇಳಿದನೆಂತೆನೆ :—ಇಂದು ಯುದ್ಧವು ಆರಂಭವಾದ ಏಳನೆಯ ದಿವಸ. ಇದು ಶೈಲೂಷನಿಗೆ ವಿಷಮದಿವಸ ಈ ದಿವಸದಲ್ಲಿ ಸಮಸಮವಾಗಿ ನಿಂತು ಯುದ್ಧದುರ್ಮದರಾದ ಮಹಾತ್ಮರಾದ ಭರತಶೈಲೂಷರೀರ್ವರೂ ಸಮರವಂ ಮಾಡಲಾರಂಭಿಸಿದರು

೨. ಆಗ ಮೊದಲು ಭರತನು ಶೈಲೂಷನನ್ನು ಕುರಿತಿಂತೆಂದನು :—ಎಲೈ, ಯುದ್ಧದುರ್ಮದನಾದ ಶೈಲೂಷನೇ ! ಈ ದಿನ ನಾವಿಬ್ಬರೇ ಯುದ್ಧಮಾಡೋಣ ! ಮೃತಪ್ರಾಯವಾದೀ ಸೈನ್ಯಗಳಿಂದೇನೇನೂ ಪ್ರಯೋಜನವಿಲ್ಲ

೩. ವ್ಯರ್ಥವಾಗಿ ಸೈನ್ಯವನ್ನೇಕೆ ಸಾಯಿಸುತ್ತೀಯೆ ? ಇವರೆಲ್ಲರನ್ನೂ ಸುಮ್ಮನೆ ಹಿಂದಕ್ಕೆ ಕಳುಹಿಸಿಬಿಡು. ನಿನ್ನೊಬ್ಬನನ್ನೇ ನಾನು ಇದುರಿಸಿ ಯುದ್ಧಮಾಡು

ತ್ವದೀಯಾಃ ಸೈನಿಕಾ ಯೇ ಚ ಸುರನಾಥಾಃ ಸಹಾಮರೈಃ ।
ಹತೇ ಮಯಿ ಮದೀಯಂತು ಸೈನ್ಯಂ ಕಾಮಂ ಪ್ರಯುಧ್ಯತಾಂ ॥ ೪ ॥

ಸಂಗ್ರಾಮಂ ಮಾ ಕರೋತ್ವಾಜೌ ತ್ವದೀಯಂತು ಹತೇ ತ್ವಯಿ ।
ಏವಮುಕ್ತಸ್ತಥೇತ್ಯುಕ್ತ್ವಾ ವಾರಯಾಮಾಸ ಸೈನಿಕಾನ್ ॥ ೫ ॥

ಗಂಧರ್ವರಾಟ್ ಸ ಶೈಲೂಷೋ ಭರತೋಽಪಿ ತಥಾ ಸ್ವಕಾನ್ ।
ತತಃ ಪ್ರವವೃತೇ ಯುದ್ಧಂ ತಯೋರ್ದೇವಾಸುರೋಪಮಂ ॥ ೬ ॥

---

ತ್ತೇನೆ. ನನ್ನ ಸೈನಿಕರನ್ನೂ ಹಿಂದಕ್ಕೆ ಕಳುಹಿಸಿಬಿಡುತ್ತೇನೆ. ಅವರೆಲ್ಲರೂ ಸುಮ್ಮನೆ ನಿಂತುಕೊಂಡು ನಮ್ಮಿಬ್ಬರ ಯುದ್ಧವನ್ನು ನೋಡುತ್ತಲಿರಲಿ.

೪. ನನ್ನ ಮಾತನ್ನೀಗ ಕೇಳು. ಶೈಲೂಷ! ನಮ್ಮಿಬ್ಬರ ಯುದ್ಧದಲ್ಲಿ ನಾನೇ ಒಂದು ವೇಳೆ ಪ್ರಾಣ ಬಿಟ್ಟೆನೆಂದು ತಿಳಿದುಕೋ! ಹಾಗೇನಾದರೂ ನಾನು ಪ್ರಾಣ ಬಿಡುವುದಾದರೆ ನಿನ್ನ ಕಡೆ ಗಂಧರ್ವರೂ, ದೇವಲೋಕದಲ್ಲಿರುವ ದೇವತೆಗಳೂ ಒಟ್ಟಿಗೆ ಸೇರಿ ನನ್ನ ಕಡೆಯ ಉಳಿದ ಸೈನ್ಯದಮೇಲೆ ಮನಸ್ವಿಯಾಗಿ ಯುದ್ಧಮಾಡಲಿ.

೫. ಈ ಯುದ್ಧದಲ್ಲಿ ಒಂದು ವೇಳೆ ನೀನೇ ಸತ್ತುಹೋದೆಯೆಂದು ತಿಳಿದುಕೋ! ಹಾಗೇನಾದರೂ ನೀನು ಸಾಯುವುದಾದರೆ ನಮ್ಮ ಸೈನಿಕರು ನಿನ್ನ ಸೈನಿಕರ ಮೇಲೆ ಯುದ್ಧಮಾಡಿದರೂ ಮಾಡಲಿ, ಬಿಟ್ಟಾದರೂ ಬಿಡಲಿ. ಅದನ್ನು ಕಟ್ಟಿಕೊಂಡು ನಿನಗಾಗಬೇಕಾದುದೇನಯ್ಯ! ಹೀಗೆಂದು ಹೇಳಲು ಭರತನ ಮಾತಿಗೆ ಶೈಲೂಷನು ಒಪ್ಪಿಕೊಂಡು, ತನ್ನ ಕಡೆ ಸೈನಿಕರೆಲ್ಲರೂ ತಟಸ್ಥರಾಗಿದ್ದು ಯುದ್ಧವನ್ನು ಮಾತ್ರ ನೋಡುತ್ತಿರಲೆಂದು ಆಜ್ಞೆಮಾಡಿದನು.

೬. ಯಾವಾಗ ಶೈಲೂಷನು ಗಂಧರ್ವ ಸೈನ್ಯವನ್ನು ಹಿಂತಿರುಗಿಸಿದನೋ, ಅದೇ ಮೇರೆ ಭರತನೂ ಸಹ ತನ್ನ ಕಡೆ ಸೈನಿಕರೆಲ್ಲರೂ ತಟಸ್ಥರಾಗಿರುವಂತೆ ಅಪ್ಪಣೆ ಮಾಡಿದನು. ಆ ಬಳಿಕ ಅವರಿಬ್ಬರಿಗೂ ದೇವಾಸುರಸಂಗ್ರಾಮದಂತಹ ಯುದ್ಧವು ಆರಂಭವಾಯಿತು.

ಪಶ್ಯತಾಂ ಸರ್ವಸೈನ್ಯಾನಾಂ ದೇವಾನಾಮಪಿ ಪಶ್ಯತಾಂ ।
ಶರಜಾಲೇನ ಮಹತಾ ಛಾದಿತಾರ್ಕಕರೇ ರಣೇ ॥ ೭ ॥

ತತಕ್ಷತುಸ್ತಾವನ್ಯೋಽನ್ಯಂ ಶರೈಃ ಸನ್ನತಪರ್ವಭಿಃ ।
ಪರಸ್ಪರಶರಾಘಾತವಿಸರಚ್ಛೋಣಿತೋಕ್ಷಿತೌ ॥ ೮ ॥

ವಿರೇಜತುಸ್ತೌ ರಾಜೇಂದ್ರ ಪುಷ್ಪಿತಾವಿವ ಕಿಂಶುಕೌ ।
ಉಭೌ ಮಹಾರಥೌ ವೀರೌ ಚೋಭೌ ವಿಶ್ರುತಪೌರುಷೌ ॥ ೯ ॥

ತಥೋಭೌ ವರಧಾನುಷ್ಕೌ ಚೋಭೌ ಸಮರದುರ್ಮದೌ ।
ಕಾಂಚನಾಂಗರಥಸ್ಥೌ ತೌ ಚೋಭೌ ಸಧ್ವಜಶೋಭಿತೌ ॥ ೧೦ ॥

ವೀಜ್ಯಮಾನೌ ತಥೈವೋಭೌ ಯೋಧಾಭ್ಯಾಂ ವರಚಾಮರೈಃ ।
ಛತ್ರಯೋಸ್ತೌ ತದಾಽಽಧಸ್ತಾಚ್ಛುಶುಭಾತೇ ಮಹಾರಥೌ ॥ ೧೧ ॥

---

೭. ಈ ಪ್ರಕಾರವಾಗಿ ಆರಂಭವಾದ ಶೈಲೂಷಭರತರ ಯುದ್ಧವನ್ನು ನೋಡುವುದಕ್ಕಾಗಿ ಸಕಲ ಸೈನಿಕರೂ ನಿಬಿಡವಾಗಿ ಬಂದು ನಿಂತರು. ಆಕಾಶಮಾರ್ಗದಲ್ಲಿ ಸಕಲ ದೇವತೆಗಳೂ ಗುಂಪು ಕೂಡಿ ನಿಂತರು. ಇವರೆಲ್ಲರೂ ನೋಡುತ್ತಲಿದ್ದ ಹಾಗೆಯೇ ಉಭಯವೀರರಿಂದಲೂ ಪ್ರಯೋಗಿಸಲ್ಪಟ್ಟ ಬಾಣವರ್ಷಗಳಿಂದ ಸೂರ್ಯಮಂಡಲವು ಮುಚ್ಚಿಹೋಗಿ ಕಣ್ಣಿಗೆ ಕಾಣಿಸದಂತಾಯಿತು.

೮. ಅವರಿಬ್ಬರೂ ಅನ್ಯೋನ್ಯರಾಗಿ ಹೂಡಿ ಪ್ರಯೋಗಿಸಲ್ಪಟ್ಟ ಬಾಣಗಳು ಪರಸ್ಪರರ ದೇಹಗಳನ್ನು ಚುಚ್ಚಿ ರಕ್ತವು ಈಚೆಗೆ ಚಿಮ್ಮುತ್ತಿದ್ದುದನ್ನು ನೋಡಿದರೆ,

೯. ಅವರಿಬ್ಬರ ದೇಹಗಳೂ ಆಗ ತಾನೇ ಹೂವು ಬಿಟ್ಟಿರುವ ಮುತ್ತುಗದ ಮರಗಳಂತೆ ಶೋಭಿಸುತ್ತಲಿದ್ದುವು ಇವರಿಬ್ಬರೂ ಸಾಮಾನ್ಯರಾದವರೇನೂ ಅಲ್ಲ. ಇಬ್ಬರೂ ಮಹಾರಥಿಗಳು. ಇಬ್ಬರೂ ಸುಪ್ರಸಿದ್ಧ ಪೌರುಷಶಾಲಿಗಳು.

೧೦. ಇದೇ ರೀತಿಯಾಗಿ ಇವರಿಬ್ಬರೂ ಶ್ರೇಷ್ಠರಾದ ಧನುರ್ವಿದ್ಯಾವಿಶಾರದರು. ಇಬ್ಬರೂ ಸಮರದುರ್ಮದರು. ಇಬ್ಬರೂ ಸುವರ್ಣಮಯವಾದ ರಥದಲ್ಲಿ ಕುಳಿತಿರುವರು. ಆ ರಥದ ಮೇಲುಭಾಗದಲ್ಲಿ ಉತ್ತಮವಾದ ಧ್ವಜಪಟಗಳನ್ನು ನೆಟ್ಟಿರತಕ್ಕವರು.

೧೧. ಈ ವೀರರೀರ್ವರ ಎಡಬಲಭಾಗಗಳಲ್ಲಿಯೂ ಸೇವಕರು ಬೀಸಣಿಗೆ ಬೀಸುತ್ತಾ, ಚಾಮರಗಳನ್ನು ಹಾಕುತ್ತಾ ನಿಂತಿರುವರು. ಮತ್ತು ಅವರುಗಳೆರಡು ಪಾರ್ಶ್ವಗಳಲ್ಲಿಯೂ ಇಬ್ಬರು ದೂತರು ಶ್ವೇತಚ್ಛತ್ರಿಗಳನ್ನು ಹಿಡಿದು ನಿಂತಿರುವರು.

ಉಭಾವಸ್ತ್ರಪ್ರತಾಪೇನ ಚಕ್ರತುಸ್ತುಮುಲಂ ರಣಂ ।
ಅಸ್ತ್ರಯುದ್ಧಂ ಚಿರಂ ಕೃತ್ವಾ ಶರಯುದ್ಧಂ ಪ್ರಚಕ್ರತುಃ ॥ ೧೨ ॥

ಶರಯುದ್ಧೇ ವ್ಯತಿಕ್ರಾಂತೇ ಅಸ್ತ್ರಯುದ್ಧಂ ಪುನಃಪುನಃ ।
ಏವಂ ತೌ ದಿವಸಂ ಕೃತ್ವಾ ಯುದ್ಧಂ ಸಂಶ್ರಾಂತವಾಹನೌ ॥ ೧೩ ॥

ರೋಪಯಂತೌ ಶ್ರಮಂ ರಾಜನ್ಸಮರೇಷು ಜಿತಶ್ರಮೌ ।
ತತೋ ಗಂಧರ್ವರಾಜಸ್ತು ಲಂಬಮಾನೇ ದಿವಾಕರೇ ॥ ೧೪ ॥

ಚಕಾರ ತಾಮಸೀಂ ಮಾಯಾಂ ಯಯಾಂಧಮಭವಜ್ಜಗತ್ ।
ಅಂಧಕಾರೇ ತತೋ ಜಾತೇ ವಾಚೋಽಶ್ರೂಯಂತ ದಾರುಣಾಃ ॥ ೧೫ ॥

ಭರತೋ ಹನ್ಯತಾಂ ಶೀಘ್ರಂ ಭಕ್ಷ್ಯತಾಂ ಪಾತ್ಯತಾಂ ತಥಾ ।
ಅಭ್ಯವರ್ತಂತ ಭರತಂ ಸರ್ಪವೃಶ್ಚಿಕಕರ್ಕಟಾಃ ॥ ೧೬ ॥

---

೧೨. ಈ ಪ್ರಕಾರವಾಗಿ ಪ್ರಕಾಶಮಾನರಾದ ಆವರೀರ್ವರೂ ಪರಸ್ಪರವಾಗಿ ಅಸ್ತ್ರಪ್ರಯೋಗ ಮಾಡುತ್ತಾ ತುಮುಲಯುದ್ಧವನ್ನಾರಂಭಿಸಿದರು. ಅಸ್ತ್ರಯುದ್ಧವು ಕಳೆದ ಸಮನಂತರದೋಳ್ ಆ ಶೂರರೀರ್ವರೂ ಶರಯುದ್ಧವನ್ನು ಮಾಡಿದರು.

೧೩. ಬಹಳ ಹೊತ್ತು ಶರಯುದ್ಧವು ಆದಬಳಿಕ ಪುನಃ ಪುನಃ ಅಸ್ತ್ರಯುದ್ಧವನ್ನೇ ಮಾಡಿದರು. ಈ ರೀತಿ ಈ ಯುದ್ಧವು ಮಧ್ಯಾಹ್ನದವರೆಗೂ ನಡೆದ ಬಳಿಕ ಇಬ್ಬರೂ ಬಳಲಿ, ವಾಹನಗಳನ್ನು ಸ್ವಲ್ಪ ವಿಶ್ರಮಮಾಡಿಕೊಳ್ಳಲು ಬಿಟ್ಟುಬಿಟ್ಟರು.

೧೪. ಹೀಗೆ ವಾಹನಗಳು ವಿಶ್ರಮಿಸಿಕೊಳ್ಳುವಷ್ಟರೊಳಗೆ ಶೈಲೂಷ ಭರತರೀರ್ವರೂ ತಾವೂ ಸಹ ವಿಶ್ರಮಿಸಿಕೊಂಡವರಾಗಿ ಪುನಃ ಯುದ್ಧವನ್ನಾರಂಭಿಸಿದರು. ಮಧ್ಯಾಹ್ನ ಕಳೆದು ಇಳಿಹೊತ್ತು ಬಂದಾಗ ಗಂಧರ್ವರಾಜನೇನುಮಾಡಿದನೆಂದರೆ :—

೧೫. ಮಾಯಾಯುದ್ಧಕ್ಕಾರಂಭಿಸಿದನು. ಅಂದರೆ ಲೋಕವೆಲ್ಲಾ ಕತ್ತಲೆ ಮುಸುಕುವಂತೆ ಮಾಯ ಮಾಡಿ ಬಿಟ್ಟನು. ಇದರಿಂದ ಎತ್ತೆತ್ತಲೂ ಕತ್ತಲೆ ಮುಸುಕಿತು. ಈರೀತಿ ಕತ್ತಲೆ ಕವಿದುಕೊಂಡೊಡನೆಯೇ ದಶದಿಕ್ಕುಗಳಿಂದಲೂ ಈ ಕೆಳಗೆ ಹೇಳುವಂತೆ ಭಯಂಕರವಾದ ಮಾತುಗಳು ಕೇಳಿಬಂದುವು.

೧೬. ಭರತನು ಶೀಘ್ರವಾಗಿ ಕೊಲ್ಲಲ್ಪಡಲಿ! ತಿನ್ನಲ್ಪಡಲಿ! ಬೀಳಿಸಲ್ಪಡಲಿ! ಹಾವುಗಳೂ, ಚೇಳುಗಳೂ, ಏಡಿಗಳೂ, ಈ ಭರತನನ್ನು ಕಚ್ಚಿಕೊಲ್ಲಲಿ.

ಮರ್ಕಟಾ ವಾನರಾ ಘೋರಾಃ ಸೃಗಾಲಾ ದ್ವೀಪಿನಸ್ತಥಾ ।
ಸಿಂಹವ್ಯಾಘ್ರವರಾಹಾಶ್ಚ ಶ್ವಾಪದಾ ಯೇ ಚ ಜಾತಯಃ　॥ ೧೭ ॥

ಅರ್ದ್ಯಮಾನಃ ಸ ಧರ್ಮಾತ್ಮಾ ಭರತಸ್ತೈಃ ಸುದುರ್ಮುಖೈಃ ।
ಸೌರೇಣಾಸ್ತ್ರೇಣ ತಾಂ ಮಾಯಾಂ ಬಭಂಜ ಪರವೀರಹಾ　॥ ೧೮ ॥

ತತಸ್ತು ಮಹತೀಂ ಮಾಯಾಂ ಸ ಚಕಾರ ಮಹಾಭುಜಃ ।
ಉತ್ತಸ್ಥೌ ಸುಮಹಾನ್ಮೇಘಶ್ಛಾದಯಿತ್ವಾ ನಭಸ್ತಲಂ　॥ ೧೯ ॥

ಪ್ರವವರ್ಷ ಚ ಘೋರಾಣಿ ಶಸ್ತ್ರಜಾಲಾನ್ಯನೇಕಶಃ ।
ನಾರಾಚಾನರ್ಧನಾರಾಚಾಂಸ್ತಥೈವ ಚಷಕಾನನಾನ್　॥ ೨೦ ॥

ವತ್ಸದಂತಾಂಸ್ತಥಾ ವಲ್ಲಾನ್ಕರ್ಣಿನಾಲೀಕಗೋಮುಖಾನ್ ।
ಕ್ಷುರಪ್ರಾನರ್ಧಚಂದ್ರಾಂಶ್ಚ ವರಾಹವದನಾಂಸ್ತಥಾ　॥ ೨೧ ॥

---

೧೭-೧೮. ಇಂತಹ ದಾರುಣವಾಕ್ಯಗಳು ಕಿವಿಗಳಲ್ಲಿ ಕೇಳಿಬರುವುದರೊಳಗಾಗಿ ನರಿಗಳೂ, ಹುಲಿಗಳೂ, ಘೋರಾಕಾರವಾದ ಕಪಿಗಳೂ, ಸಿಂಹ ವ್ಯಾಘ್ರವರಾಹಾದಿಗಳೂ, ಇವುಗಳ ಒಳಭೇದಗಳ ಘೋರಪ್ರಾಣಿಗಳೂ, ರಾಕ್ಷಸರೂ ಸಹ ಭರತನ ಮೇಲೆ ಬಿದ್ದು ಗರ್ಜಿಸುತ್ತಾ ಅವನನ್ನು ಹಿಂಸೆಮಾಡಲುಪಕ್ರಮಿಸಲು, ಇದು ಮಾಯಾಯುದ್ಧವೆಂದು ಭಾವಿಸಿ ಆ ಭರತನು ಸೌರಾಸ್ತ್ರಪ್ರಯೋಗದಿಂದ ಆ ಅಂಧಕಾರಾಸ್ತ್ರವನ್ನು ಭೇದಿಸಿಬಿಟ್ಟನು.

೧೯. ಈರೀತಿ ತಮೋಸ್ತ್ರವು ನಾಶವಾದೊಡನೆಯೇ ಶೈಲೂಷನು ಮತ್ತೊಂದು ವಿಧವಾದ ಮಹಾಮಾಯೆಯನ್ನುಪಯೋಗಿಸಿದನು. ಆ ಕೂಡಲೇ ಆಕಾಶದಲ್ಲಿ ದೊಡ್ಡ ದೊಡ್ಡ ಮೇಘಗಳೆದ್ದು ಅಂತರಿಕ್ಷದಲ್ಲೆಲ್ಲಾ ಕವಿದುಕೊಂಡುಬಿಟ್ಟವು.

೨೦ ಆ ಮೋಡಗಳಿಂದ ಘೋರವಾದ ಶಸ್ತ್ರಾಸ್ತ್ರಗಳು ಅನೇಕವಾಗಿ ಕೆಳಗೆ ಉದುರಿದುವು ಬಾಣಗಳು, ಅರ್ಧ ಬಾಣಗಳು, ಹೆಂಡದ ಗಡಿಗೆಯ ಮುಖದಂತಹ ಶಸ್ತ್ರಗಳೂ ಮಳೆಯಂತೆ ಸುರಿದುಬಿಟ್ಟುವು.

೨೧-೨೩. ವತ್ಸದಂತ, ವಲ್ಲ, ಕರ್ಣಿ, ನಾಳೀಕ, ಗೋಮುಖ, ಕ್ಷುರಪ್ರ, ಅರ್ಧಚಂದ್ರ, ವರಾಹಮುಖ, ಗದೆ, ಭುಶುಂಡಿ, ಪ್ರಾಸ, ಭಿಂಡಿಪಾಲ, ಪರಶ್ವಧ,

ಗದಾಭುಶುಂಡೀಃ ಪ್ರಾಸಾಂಶ್ಚ ಭಿಂಡಿಪಾಲಾನ್ಪರಶ್ವಧಾನ್ ।
ಹುಡಾನ್ಗುಡಾನ್ಸಲಗುಡಾಂಶ್ಚಕ್ರಖಡ್ಗಾಂಸ್ತಥಾ ಪರಾನ್ ॥ ೨೨

ಏತಾನನ್ಯಾಂಶ್ಚ ವಿವಿಧಾನ್ವವರ್ಷ ಪತಮಾಯುಧಾನ್ ।
ಪತದ್ಭಿರಾಯುಧೈರ್ಘೋರೈರ್ಬಾಧ್ಯಮಾನಃ ಸ ರಾಘವಃ ॥ ೨೩ ॥

ವಾಯವ್ಯಾಸ್ತ್ರೇಣ ತಾಂ ಮಾಯಾಂ ನಾಶಯಾಮಾಸ ಶತ್ರುಹಾ ।
ತತೋ ಬಭೂವ ರಾಜೇಂದ್ರ ಗಂಧರ್ವಃ ಪರ್ವತೋ ಮಹಾನ್ ॥ ೨೪ ॥

ಕ್ಷರತ್ಪ್ರಸ್ರವಣೋ ಘೋರಃ ಶಿಖಿರೈಶ್ಚ ಸಮುಚ್ಛ್ರಿತೈಃ ।
ಮಾಯಾಂ ತಾಂ ಪಾರ್ವತೀಂ ಶ್ರೀಮಾನ್ವಜ್ರಾಸ್ತ್ರೇಣ ರಘೂದ್ವಹಃ ॥

ನಾಶಯಾಮಾಸ ರಾಜೇಂದ್ರ ಸರ್ವಸೈನ್ಯಸ್ಯ ಪಶ್ಯತಃ ।
ಹನ್ಯಮಾನಾಸು ಮಾಯಾಸು ರೂಪಾಂಶ್ಚಕ್ರೇ ಸುದಾರುಣಾನ್ ॥ ೨೬ ॥

---

ಹುಡಗುಡ, ಸಲಗುಡ, ಚಕ್ರ, ಖಡ್ಗವೇ ಮುಂತಾದ ವಿವಿಧಾಯುಧವಿಶೇಷಗಳೂ ಸಹ ಧಾರಾಕಾರವಾಗಿ ಭರತನ ಮೇಲೆ ವರ್ಷಿಸಲ್ಪಟ್ಟುವು. ಇವೆಲ್ಲಾ ಆಯುಧಗಳಿಂದ ಹಿಂಸೆಗೊಳಿಸಲ್ಪಟ್ಟ ಭರತನು ಭೀತಿಹೊಂದದೆ, ಇದೂ ಸಹ ಮಾಯೆಯಿಂದ ಪ್ರಯೋಗಿಸಲ್ಪಟ್ಟ ಮೋಘಾಸ್ತ್ರವೆಂದು ಭಾವಿಸಿದವನಾಗಿ ವಾಯುವ್ಯಾಸ್ತ್ರವನ್ನು ಪ್ರಯೋಗಿಸಿ ಆ ಮಾಯಾಸ್ತ್ರವನ್ನಡಗಿಸಿಬಿಟ್ಟನು.

೨೪-೨೬. ತನ್ನ ಮಾಯಾಮೋಹಾಸ್ತ್ರಗಳು ನಾಶವಾದೊಡನೆ ಶೈಲೂಷನು ಶೈಲಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರವು ಬಿಡಲ್ಪಟ್ಟೊಡನೆಯೇ ಭರತನ ಮುಂದೆ ಭಯಂಕರವಾದ ಪರ್ವತಗಳನೇಕವಾಗಿ ಎದ್ದು ನಿಂತುಕೊಂಡವು. ಆ ಬೆಟ್ಟಗಳ ಮೇಲೆ ತೀಕ್ಷ್ಣವಾದ ಉನ್ನತವಾದ ಶಿಖರಗಳು ಕಾಣಿಸಿಕೊಂಡವು. ಇದೂ ಕೂಡ ಮಾಯೆಯೆಂದೇ ತಿಳಿದವನಾಗಿ ಆ ಪರ್ವತಾಸ್ತ್ರವನ್ನು ವಜ್ರಾಸ್ತ್ರದಿಂದ ಎಲ್ಲರೂ ನೋಡುತ್ತಿದ್ದಾಗಲೇ ಛೇದಿಸಿಬಿಟ್ಟನು. ಪರ್ವತಾಸ್ತ್ರವನ್ನು ಸೀಳಿದ ಬಳಿಕ ಭರತನ ಮುಂದೆ ಅನೇಕಾನೇಕ ವಿಕಾರವದನಗಳುಳ್ಳ ಯಕ್ಷರೂ, ಪಿಶಾಚಿಗಳೂ, ಹದ್ದುಗಳೂ, ಸಿಂಹ, ಹುಲಿ, ಆನೆ ಕರಡಿಗಳೂ, ಕಾಣಿಸಿಕೊಂಡವು.

ಯಕ್ಷಾಣಾಂ ರಾಕ್ಷಸಾನಾಂ ಚ ಪಿಶಾಚಾನಾಂ ಪತತ್ರಿಣಾಂ ।
ಸಿಂಹವ್ಯಾಘ್ರತರಕ್ಷೂಣಾಂ ಕುಂಜರಾಣಾಂ ತಥೈವ ಚ ॥ ೨೭ ॥

ಬಭಂಜ ತಸ್ಯ ಮಾಯಾಸ್ತಾ ದಿವ್ಯಾಸ್ತ್ರೈರ್ಭರತೋ ರುಷಾ ।
ಹನ್ಯಮಾನಾಸು ಮಾಯಾಸು ಲಾಘವಾದ್ಭರತಂ ರಣೇ ॥ ೨೮ ॥

ಮೋಹಯಾಮಾಸ ರಾಜೇಂದ್ರ ಶೈಲೂಷೋ ರಣದರ್ಪಿತಃ ।
ಭರತೋಽಪಿ ಧನುಷ್ಕೋಟ್ಯಾಂ ಶರಾಗ್ರೇ ಚ ನಿಲೀಯತೇ ॥ ೨೯ ॥

ಧ್ವಜಾಗ್ರೇ ಚ ರಥಾಗ್ರೇ ಚ ತುರಗಾಗ್ರೇ ಪುನಃಪುನಃ ।
ಸಾಯಕಾನ್ಭರತಶ್ಶೈಘ್ರ್ಯಾದ್ಧ್ವಂಸಯಾಮಾಸ ಯಾದವ ॥ ೩೦ ॥

ರಾಘವಾಸ್ತುತುಷುಸ್ತಸ್ಯ ದೇವದೈತ್ಯಾಶ್ಚ ಸಂಘಶಃ ।
ಅಸುರಾಮುಮುಚುರ್ಘೋರಮಟ್ಟಹಾಸಂ ಸುದಾರುಣಂ ॥ ೩೧ ॥

---

೨೭-೨೯ ಈ ಮುಖಗಳ ಅವಸ್ಥೆಯನ್ನು ನೋಡಿ ಭರತನಿಗೆ ಬಹಳ ಕೋಪ ಬಂದು ಆ ಮಾಯಾಸ್ತ್ರವನ್ನು ದಿವ್ಯಾಸ್ತ್ರಗಳಿಂದ ಪರಿಹರಿಸಿಬಿಟ್ಟನು. ತಾನು ಹೂಡಿದ ಮಾಯಾಸ್ತ್ರಗಳೆಲ್ಲವೂ ವ್ಯರ್ಥವಾಗುತ್ತಾ ಬಂದುದನ್ನು ನೋಡಿ ಶೈಲೂಷನು, ಬಹು ಹಗುರವಾದ ಸೂಕ್ಷ್ಮದೇಹವುಳ್ಳವನಾಗಿ ಭರತನಿಗೆ ಅಜ್ಞಾನವನ್ನುಂಟುಮಾಡಿ ಮೋಹಪಡಿಸಿದನು. ಭರತನು ಈ ಮೋಸಕ್ಕೆ ಅಂಜದೆ ಧನುಷ್ಕೋಟಿಗಳನ್ನು ಪ್ರಯೋಗಿಸಿ ಶರಾಗ್ರದಲ್ಲಿ ಅದರ ಸೂಕ್ಷ್ಮತೆಯನ್ನು ಅಡಗಿಸಿಬಿಟ್ಟನು.

೩೦-೩೧. ಆ ಕೂಡಲೆ ಶೈಲೂಷನು ಕಣ್ಣಿಗೇ ಕಾಣಿಸದವನಂತೆ ನಟಿಸುತ್ತಾ ಧ್ವಜದ ಮೇಲೂ, ರಥದ ಮೇಲೂ, ಕುದುರೆಗಳ ಮೇಲೂ ಅಡಗಿಯಡಗಿ ಕುಳಿತುಕೊಳ್ಳಲಾರಂಭಿಸಿದನು. ಇವನ ಸೂಕ್ಷ್ಮಾವಸ್ಥೆಯು ಭರತನಿಗೆ ಗೊತ್ತಾಗುತ್ತಾ ಬರಲು, ಅವನು ಅಡಗಿಕುಳಿತ ಬಳಿಗೇ ಬಾಣವನ್ನು ಹೂಡಿ ಹೂಡಿ ಬಿಡುತ್ತಾ ಬಂದನು. ಈರೀತಿಯಾದ ಭರತನ ಬಾಣಪ್ರಯೋಗದಿಂದ ಶೈಲೂಷನ ರಥಗಳೂ, ಧ್ವಜವೂ, ಕುದುರೆಗಳೂ ನಿಪಾತವಾಗಿ ಹೋದುವು. ಆಕಾಶದ ಮೇಲೆ ವಿಮಾನಗಳಲ್ಲಿ ಕುಳಿತು ಗುಂಪುಗುಂಪಾಗಿ ಈ ನೋಟವನ್ನು ನೋಡುತ್ತಿದ್ದ ದೇವದೈತ್ಯಾದಿಗಳೆಲ್ಲರೂ ಭರತನ ಸಮರಕೌಶಲವನ್ನು ನೋಡಿ ಹೊಗಳಲಾರಂಭಿಸಿದರು.

ದೈತ್ಯಾನಾಮುಟ್ಟಹಾಸೇನ ಭರತಃ ಕುಪಿತೋಭೃಶಂ ।
ನಾರಾಯಣಾಸ್ತ್ರಂ ಸಂಯೋಜ್ಯ ಶರೇಣಾನತಪರ್ವಣಾ ॥ ೩೨ ॥

ಇಯೇಷ ಹಂತುಂ ತಂ ಕ್ರೋಧಾದ್ಗಂಧರ್ವಂ ರಣಗರ್ವಿತಂ ।
ಅಸ್ತ್ರಂ ತತ್ಸಂಹೃತಂ ಜ್ಞಾತ್ವಾ ಜಗಾಮ ಸ್ವಂ ರಥಂ ತ್ವರನ್ ॥ ೩೩ ॥

ಇಯೇಷ ಹಂತುಂ ತಂ ಚಾಸ್ತ್ರಂ ರುದ್ರಾಸ್ತ್ರೇಣ ತು ದಾರುಣಂ ।
ಏತಸ್ಮಿನ್ನೇವ ಕಾಲೇ ತು ಮುಮೋಚ ಭರತಃ ಶರಂ ॥ ೩೪ ॥

ಕಾಲಾನಲಸಮಪ್ರಖ್ಯಂ ಸುಪುಂಖಂ ಸಫಲಂ ತಥಾ ।
ರಾಜಿತಂ ವೈನತೇಯಸ್ಯ ಪಕ್ಷೈಃ ಶತ್ರುವಿನಾಶನಂ ॥ ೩೫ ॥

---

೩೨. ರಾಕ್ಷಸರು ಭರತನ ವಿಜಯವನ್ನು ನೋಡಿ ಘೋರವಾಗಿ ಅಟ್ಟಹಾಸವನ್ನು ಮಾಡಲುಪಕ್ರಮಿಸಿದರು. ಈ ದೈತ್ಯರು ವೃಥಾ ಮಾಡುತ್ತಿದ್ದ ಅಟ್ಟಹಾಸಧ್ವನಿಗಳನ್ನು ಕೇಳಿ ಭರತನಿಗೆ ಬಲುಸಿಟ್ಟು ಬಂದು ತನ್ನ ಬಿಲ್ಲನ್ನು ಬಲವಾಗಿ ಎಳೆದು ಬಗ್ಗಿಸಿ, ಅದರಲ್ಲಿ ನಾರಾಯಣಾಸ್ತ್ರವನ್ನು ಹೂಡಿದನು.

೩೩. ಈ ಅಸ್ತ್ರದಿಂದ ಗಂಧರ್ವರಾಜನನ್ನು ಸಂಹರಿಸಿ ಬಿಡಬೇಕೆಂದಾಲೋಚಿಸಿದವನಾಗಿ ಭರತನು ಅದನ್ನು ಬಲು ವೇಗದಿಂದ ಪ್ರಯೋಗಿಸಬೇಕೆಂದಿರುವುದನ್ನು ತಿಳಿದು, ಶೈಲೂಷನು ಅವನು ಬಾಣತೊಡುವುದರೊಳಗಾಗಿ ತನ್ನ ಬೇರೊಂದು ರಥದ ಮೇಲೆ ವೇಗದಿಂದ ಹಾರಿ ಕುಳಿತು, ಆ ದಾರುಣವಾದ ರುದ್ರಾಸ್ತ್ರವನ್ನು ಅವನ ಮೇಲೆ ಪ್ರಯೋಗಿಸಿದನು.

೩೪. ಇದೇ ಸಮಯದಲ್ಲಿಯೇ ಭರತನು ನಾರಾಯಣಾಸ್ತ್ರವನ್ನು ಪ್ರಯೋಗಿಸಲು ಇಷ್ಟಪಡದೆ ಅದನ್ನು ಬತ್ತಲಿಕೆಯಲ್ಲಿರಿಸಿ, ಸ್ವಲ್ಪವೂ ತಡಮಾಡದೆ ಕಾಲಾಗ್ನಿಜ್ವಾಲೆಯಂತೆ ಉರಿಯುತ್ತಿದ್ದ, ಅನೇಕ ಗರಿಗಳುಳ್ಳ, ವ್ಯರ್ಥವಾಗದೆ ಇರುವ, ವೈನತೇಯಾಸ್ತ್ರವನ್ನು ಶತ್ರುನಾಶಕ್ಕಾಗಿ ಪ್ರಯೋಗಿಸಿದನು.

೩೫-೩೭. ಆರೀತಿಯಾಗಿ ಭರತನಿಂದ ಪ್ರಯೋಗಿಸಲ್ಪಟ್ಟ ಗಾರುಡಾಸ್ತ್ರವು, ಶೈಲೂಷನಿಂದ ಬಿಡಲ್ಪಟ್ಟ ರುದ್ರಾಸ್ತ್ರವೇಗವನ್ನು ಶಾಂತಮಾಡಿ ರಥದ ಮೇಲೆ ಕುಳಿತಿದ್ದ ಶೈಲೂಷನ ಹೃದಯಕ್ಕೆ ಹೋಗಿ ತಾಕಿತು. ಆ ಕೂಡಲೆ ಗಂಧರ್ವನ ಚಿನ್ನದ

ಹತ್ವಾ ರುದ್ರಾಸ್ತ್ರವೇಗಂತು ರಥಸ್ಥಸ್ಯ ಮಹೀಪತೇಃ ।
ಬಿಭೇದ ಹೃದಯಂ ರಾಜನ್ವರ್ಮ ಭಿತ್ತ್ವಾಽಥಕಾಂಚನಂ ॥ ೩೬ ॥

ರಾಜ್ಞಶ್ಚ ಹೃದಯಂ ಭಿತ್ತ್ವಾ ಭಿತ್ತ್ವಾ ಚ ವಸುಧಾತಲಂ ।
ಸ್ನಾತ್ವಾ ರಸಾತಲಾಂಭಸ್ಸು ತೂಣೀರಂ ಪುನರುಪಾಗಮತ್ ॥ ೩೭ ॥

ಗಂಧರ್ವರಾಜೋಽಭಿಹತಃ ಶರೇಣಾನತಪರ್ವಣಾ ।
ರಥನೀಡೇ ಧನುಸ್ತ್ಯಕ್ತ್ವಾ ಮಮಾರ ಪರವೀರಹಾ ॥ ೩೮ ॥

ಪಿತರಂ ನಿಹತಂ ದೃಷ್ಟ್ವಾ ಶೈಲೂಷತನಯಾ ರಣೇ ।
ಕ್ರೋಧದುಃಖಪರೀತಾಸ್ತೇ ಭರತಂ ರಣಕರ್ಕಶಂ ॥ ೩೯ ॥

ವಿವ್ಯಧುರ್ಭೂಪತಿಶ್ರೇಷ್ಠ ಬಾಣೈರಾಶೀವಿಷೋಪಮೈಃ ।
ಆಯುಧೈರ್ವಿವಿಧಾಕಾರೈಸ್ತದಾ ತೇ ವೈ ರಣಾಜಿರೇ ॥ ೪೦ ॥

---

ಕವಚವು ಸೀಳಿಹೋಗಿ ಆ ಬಾಣವು ಅವನ ಎದೆಯಲ್ಲಿ ಹೊಕ್ಕು ಅಲ್ಲಿಂದ ಹೊರಕ್ಕೆ ಬಂದು, ಅಲ್ಲಿಂದ ಹೋಗಿ ಭೂಮಿಯನ್ನು ಭೇದಿಸಿ, ಅಲ್ಲಿಂದ ಪಾತಾಳಕ್ಕೆ ನುಗ್ಗಿ ಭೋಗವತೀ ನದಿಯಲ್ಲಿ ಸ್ನಾನವಾಡಿ, ಪುನಃ ಮೇಲಕ್ಕೆ ಹಾರಿ ಬಂದು ಭರತನ ಬತ್ತಲಿಕೆಯೊಳಗೆ ಹೋಗಿ ಸೇರಿಕೊಂಡಿತು.

೩೮. ಈರೀತಿ ಗಾರುಡಾಸ್ತ್ರದ ಏಟಿಗೆ ಸಿಕ್ಕಿದ ಆ ಶೈಲೂಷನು ಕೂಡಲೆ ಪ್ರಾಣಗಳನ್ನು ತ್ಯಾಗಮಾಡಿ, ರಥವೆಂಬ ಗೂಡಿನಲ್ಲಿ ಧನುಸ್ಸನ್ನು ಕೆಳಗೆ ಬೀಳಿಸಿ ತಾನೂ ಬಿದ್ದು ಸತ್ತುಹೋದನು.

೩೯-೪೦. ತಮ್ಮ ತಂದೆ ಸತ್ತು ರಣರಂಗದಲ್ಲಿ ಬಿದ್ದುದನ್ನು ನೋಡಿದೊಡನೆಯೇ, ಆ ಶೈಲೂಷನ ಮಕ್ಕಳಿಗೆ ದುಃಖವೂ ಕ್ರೋಧವೂ ಏಕಕಾಲದಲ್ಲುತ್ಪನ್ನವಾಗಲು ರಣಕರ್ಕಶನಾದ ಭರತನನ್ನು ಸರ್ಪಸದೃಶವಾದ ತೀಕ್ಷ್ಣಬಾಣಗಳಿಂದ ಹೊಡೆದರು. ಮತ್ತು ಅದರ ಜತೆಯಲ್ಲಿಯೇ ಅನೇಕ ವಿಧವಾದ ಆಯುಧಗಳನ್ನು ಭರತನ ಮೇಲೆ ಪ್ರಯೋಗಿಸಿದರು.

**ಮಾಯಾಶ್ಚ ವಿವಿಧಾಶ್ಚಕ್ರುರ್ಭರತಸ್ಯ ವಿಪತ್ತಯೇ ।**
**ಅಂತರಿಕ್ಷಂ ಚ ತೈರ್ವ್ಯಾಪ್ತಂ ನಾನಾಹೇತಿಪ್ರವರ್ಷಿಭಿಃ** ॥ ೪೧ ॥

**ಅಸ್ತ್ರೈಶ್ಚ ಕೇಚಿದ್ಭರತಂ ಪ್ರವವರ್ಷುರ್ಮಹಾರಥಾಃ ।**
**ಭೂರಿಭಾರಾತ್ಸ ಯೋಧಾನಾಂ ಮಹಾಸ್ತ್ರಾಣಾಂ ಮಹಾಬಲಾತ್** ॥ ೪೨ ॥

**ಪ್ರತಾಪಾದಸ್ತ್ರಜಾಲಾನಾಂ ಸಂಶಯಂ ಪರಮಂ ಗತಾಃ ।**
**ಕಾಲಾಸ್ತ್ರಮಥ ಸಾಂವರ್ತಂ ಮುಮೋಚ ಭರತಸ್ತದಾ** ॥ ೪೩ ॥

**ತಸ್ಮಾದಸ್ತ್ರಾತ್ಸಹಸ್ರಾಣಿ ಶಸ್ತ್ರಾಣಾಂ ನಿರ್ಯಯುಸ್ತದಾ ।**
**ಗಂಧರ್ವಸೈನ್ಯಂ ಸಕಲಮಸ್ತ್ರೈಸ್ತೈಃ ಪ್ರತ್ಯಹನ್ಯತ** ॥ ೪೪ ॥

---

೪೧. ಇಷ್ಟಕ್ಕೇ ತೃಪ್ತರಾಗದೆ ಆ ಗಂಧರ್ವಕುಮಾರರು ಭರತನ ವಿಪತ್ತಿಗೋಸ್ಕರವಾಗಿ ನಾನಾವಿಧವಾದ ಮಾಯಾಯುದ್ಧಗಳನ್ನು ಕಲ್ಪಿಸಿದರಲ್ಲದೆ, ಕತ್ತಿಯೇ ಮುಂತಾದ ಶಸ್ತ್ರಗಳ ಮಳೆಯನ್ನೇ ಆ ಭರತನ ಮೇಲೆ ಸುರಿಸಿಬಿಟ್ಟರು.

೪೨. ಕೆಲವರು ಮಹಾರಥಿಗಳು ಶೈಲೂಷಸಂಹಾರವಾದೊಡನೆಯೇ ಭರತನ ಮೇಲೆ ಅಸ್ತ್ರವರ್ಷವನ್ನು ಕರೆದರು. ಇಂತು ಸಹಸ್ರ ಸಹಸ್ರ ಸಂಖ್ಯಾಕರಾದ ಯೋದ್ಧರೆಲ್ಲರೂ ಒಟ್ಟೊಟ್ಟಾಗಿ ಗುಂಪುಕೂಡಿ ತಮ್ಮ ಸರ್ವ ಸಾಹಸವನ್ನೂ ವಿನಿಯೋಗಿಸಿ ತಾವು ಕಲಿತಿದ್ದ ಅಸ್ತ್ರವಿದ್ಯೆಯನ್ನೆಲ್ಲಾ ಪ್ರಯೋಗಿಸಿ ಭರತನನ್ನು ಭೀತಿಗೊಳಿಸಬೇಕೆಂದಾಲೋಚಿಸಿದರು.

೪೩. ಈರೀತಿ ಕೋಟಿ ಕೋಟಿ ಗಂಧರ್ವವೀರರು ತಾವು ತಾವು ಕಲಿತ ವಿದ್ಯೆಯನ್ನೆಲ್ಲಾ ಪ್ರಯೋಗಿಸಿದರೂ ಸಹ ಭರತನು ಒಂದಕ್ಕೂ ಜಗ್ಗದೆ ಅಚಲನಾಗಿ ನಿಂತಿದ್ದುದನ್ನು ನೋಡಿ ಎಲ್ಲರಿಗೂ ಸಂಶಯವುಂಟಾಯಿತು. ಇಂತು ಸಂಶಯಗ್ರಸ್ತರಾಗಿ ನಿಂತಿದ್ದ ಗಂಧರ್ವಕುಲದ ಮೇಲೆ ಭರತನು ಒಂದು ಕಾಲಾಸ್ತ್ರವನ್ನೂ, ಪುನಃ ಒಂದು ಪ್ರಳಯಾಸ್ತ್ರವನ್ನೂ ಪ್ರಯೋಗಮಾಡಿದನು.

೪೪. ಈರೀತಿ ಬಿಟ್ಟ ಮಹಾಸ್ತ್ರಗಳಿಂದ ನೂರಾರು ಸಾವಿರಾರು ಲಕ್ಷಾಂತರ ಕೋಟ್ಯಂತರ ಶಸ್ತ್ರಾಸ್ತ್ರಗಳು ಹೊರಟು ಶಸ್ತ್ರಪ್ರಳಯವೇ ಆಗಿ, ಆ ಗಂಧರ್ವಗಣವನ್ನು ನಾಮಾವಶೇಷವನ್ನಾಗಿಮಾಡಿದವು.

**ಶಸ್ತ್ರೈಃ ಕೇಚಿದ್ವಿಶಿರಸಃ ಕೃತಾ್ವ ಗಂಧರ್ವಸತ್ತಮಾಃ ।**
**ವಿವಾಹಾಶ್ಚ ಕೃತಾಃ ಕೇಚಿತ್ಕೇಚಿದ್ರಾಜರ್ ದ್ವಿಧಾ ಕೃತಾಃ ॥ ೪೫ ॥**

**ಕೇಚಿದ್ವಿಬಾಹವಶ್ಚೈವ ಕೇಚಿದ್ವ್ಯಂಗಾಶ್ಚ ಯಾದವ ।**
**ಗಂಧರ್ವಾಣಾಂ ಚ ತಾಃ ಕೋಟ್ಯಸ್ತಿಸ್ರಃ ಸಂಗ್ರಾಮಶಾಲಿನಾಂ ॥ ೪೬ ॥**

**ಕ್ಷಣೇನಾಸ್ತ್ರಪ್ರಪಾತೇನ ಭರತೇನ ನಿಪಾತಿತಾಃ ।**
**ಗಂಧರ್ವಸೈನ್ಯೇ ನಿಹತೇ ಪ್ರವವುರ್ಮಾರುತಾಃ ಶಿವಾಃ ॥ ೪೭ ॥**

**ಪುಷ್ಪವರ್ಷಂ ಪಪಾತಾಥ ಭರತಸ್ಯ ತು ಮೂರ್ಧನಿ ।**
**ದಿಶಶ್ಚ ನಿರ್ಮಲೀಭೂತಾ ದೇವಾನಾಂ ವಿಗತಂ ಭಯಂ ॥ ೪೮ ॥**

**ತತೋ ದೇವಃ ಸಹಸ್ರಾಕ್ಷಃ ಸರ್ವೈಃ ಸುರಗಣೈಃ ಸಮಂ ।**
**ವಿಮಾನಸ್ಥೋ ಬಭಾಷೇದಂ ಭರತಂ ಧರ್ಮವತ್ಸಲಂ ॥ ೪೯ ॥**

---

೪೫. ಈ ಶಸ್ತ್ರಪ್ರಯೋಗದಿಂದ ಅನೇಕ ಗಂಧರ್ವರ ಕತ್ತು ಕತ್ತರಿಸಿ ಹೋಯಿತು. ಕೆಲವರ ವಾಹನಗಳೇ ಹಾರಿಹೋಗಿ ವಿವಾಹನ (ವಿ—ವಾಹನ) ರಾದರು. ಕೆಲವರು ತುಂಡುತುಂಡಾಗಿ ಕತ್ತರಿಸಲ್ಪಟ್ಟರು.

೪೬. ಕೆಲವರ ತೋಳುಗಳು ಮುರಿದುಹೋದುವು. ಕೆಲವರ ಮೊಳೆಗಳು ಮುರಿದುಹೋದುವು. ಈರೀತಿ ಆ ರಣಾಂಗಣದಲ್ಲಿ ಏಟುತಿಂದು ಬಿದ್ದವರ ಸಂಖ್ಯೆ ಯನ್ನು ಎಣಿಸುವಲ್ಲಿ ಮೂರು ಕೋಟಿ ಲೆಖ್ಖ ಸಿಕ್ಕಿತು.

೪೭. ಭರತನಿಂದ ಪ್ರಯೋಗಿಸಲ್ಪಟ್ಟ ಆ ಸಂವರ್ತಾಸ್ತ್ರವು ಒಂದು ಕ್ಷಣ ದೊಳಗಾಗಿ ಇಷ್ಟು ಕೆಲಸವನ್ನು ಮಾಡಿಬಿಟ್ಟಿತು. ಯಾವಾಗ ಗಂಧರ್ವಸೈನ್ಯವು ನಾಶಹೊಂದಿತೋ, ಆ ಕೂಡಲೆ ಸುಖವಾದ ತಂಗಾಳಿಯು ದಶದಿಕ್ಕುಗಳಲ್ಲಿಯೂ ಬೀಸಿತು.

೪೮. ಭರತನ ತಲೆಯಮೇಲೆ ದೇವತೆಗಳು ಬಹಳ ಹೊತ್ತಿನವರಿಗೆ ಹೂಗಳ ಮಳೆಯನ್ನು ಸುರಿಸಿದರು. ಎಲ್ಲಾ ದಿಕ್ಕುಗಳೂ ನಿರ್ಮಲವಾದುವು. ದೇವತೆಗಳ ಭಯವೆಲ್ಲಾ ಪರಿಹಾರವಾಯಿತು.

೪೯. ಆಗ ಆಕಾಶದ ಕಡೆ ಕತ್ತೆತ್ತಿ ನೋಡಿದಾಗ ಕಾಣಿಸಿದುದೇನೆಂದು ಬಲ್ಲಿರಾ? ಸಹಸ್ರ ನೇತ್ರನಾದ ದೇವೇಂದ್ರನು ಸಕಲ ದೇವವೃಂದವನ್ನೂ ಜತೆ

॥ ಇಂದ್ರ ಉವಾಚ ॥
ಪಿತಾಮಹವರೋಪ್ರೇತಾದವಧ್ಯಂ ದೇವತಾಗಣೈಃ ।
ಹತವಾನಸಿ ಶೈಲೂಷಂ ದೇವಬ್ರಾಹ್ಮಣಕಂಟಕಂ ॥ ೫೦ ॥

ಯಸ್ಮಾತ್ತಸ್ಮಾದ್ವರಂ ಮತ್ತೋ ಗೃಹಾಣ ರಘುನಂದನ ।
॥ ಮಾರ್ಕಂಡೇಯ ಉವಾಚ ॥
ಶತಕ್ರತೋರ್ನಿಶಮ್ಯೈತದ್ಭರತೋ ವಾಕ್ಯಮಬ್ರವೀತ್ ॥ ೫೧ ॥

॥ ಭರತ ಉವಾಚ ॥
ತ್ವಮೀಶಃ ಸರ್ವದೇವಾನಾಂ ತವೇದಂ ಸಕಲಂ ಜಗತ್ ।
ಅಚಿರೇಣೈವ ಮರಣಂ ತ್ವದಾಜ್ಞಾಭಂಗಕಾರಿಣಾಂ ॥ ೫೨ ॥

---

ಯಲ್ಲಿ ಕರೆದುಕೊಂಡು ಒಂದು ವಿಮಾನದ ಮೇಲೆ ಕುಳಿತು, ಧರ್ಮವತ್ಸಲನಾದ ಭರತನ ಸಂಗಡ ಈ ಮಾತನ್ನು ಹೇಳಿದನು.

೫೦. ಆ ಇಂದ್ರನು ಮಾಡಿದ ಭಾಷಣದ ಸಾರಾಂಶವನ್ನಿಲ್ಲಿ ಒರೆಯಲಾಗುವುದು :—ಓ! ಮಹಾತ್ಮನಾದ ಭರತನೇ! ಬ್ರಹ್ಮನಿಂದ ವರವನ್ನು ಪಡೆದು ಕೊಬಿಬ ಸಕಲ ದೇವತಾವೃಂದದಿಂದಲೂ ಅವಧ್ಯತ್ವವನ್ನು ಸಂಪಾದಿಸಿಕೊಂಡಿದ್ದ, ದೇವಬ್ರಾಹ್ಮಣಕಂಟಕನಾಗಿದ್ದ ದುಷ್ಟ ಶೈಲೂಷನನ್ನು ನೀನಿಂದು ಕೊಂದು ಕೆಡಹಿದೆಯ್ಯ! ವೀರ! ಶೂರ! ಭರತ!

೫೧. ನೀನು ಮಾಡಿದ ಈ ಕೆಲಸದಿಂದ ನಮಗೆಲ್ಲರಿಗೂ ಎಷ್ಟೋ ಉಪಕಾರವಾದಂತಾಯಿತು. ಇದಕ್ಕಾಗಿ ನಾವು ನಿನಗೆ ನೀನು ಕೇಳದೆ ಇದ್ದಾಗ್ಯೂ ವರವನ್ನು ಕೊಡಲು ಸಿದ್ಧರಾಗಿರುತ್ತೇವೆ.—ಹೀಗೆಂದು ಹೇಳಿದನು. ಈ ಮಾತನ್ನು ಕೇಳಿ ಭರತನು ಇಂದ್ರನಿಗೆ ಏನುತ್ತರವನ್ನು ಕೊಟ್ಟನೆಂಬ ವಿಷಯವನ್ನೀಗ ನಿನಗೆ ತಿಳಿಸುತ್ತೇನೆ. ಕೇಳು, ವಜ್ರರಾಜ! ಎಂದು ಮಾರ್ಕಂಡೇಯನು ವಜ್ರನೊಡನೆ ಇಂತು ನುಡಿದನು :—

೫೨. ಭರತನು ಇಂದ್ರನೊಡನೆ ಹೇಳಿದನು :—ಅಯ್ಯಾ! ದೇವೇಂದ್ರ! ಕೇಳು. ಸಕಲ ದೇವತೆಗಳಿಗೂ ನೀನು ಪ್ರಭುವಾಗಿರುತ್ತೀಯೆ. ಈ ಸಕಲ ಜಗತ್ತೂ ನಿನ್ನ ಅಧೀನವಾಗಿದೆ. ನಿನ್ನ ಆಜ್ಞೆಯನ್ನಾರು ಮೀರುವರೋ ಅವರು ಬಹಳ ಬೇಗ ನಾಶವನ್ನು ಹೊಂದುವುದರಲ್ಲಡ್ಡಿಯಿಲ್ಲ.

ಭವತೀಹ ಸದಾ ಲೋಕೇ ನಿಮಿತ್ತಂ ಮದ್ವಿಧೋ ಜನಃ ।
ಪ್ರಜಾಪತಿಕೃತಂ ಭೇದಂ ಕೋ ವೇತ್ತುಂ ಜಗತಿ ಕ್ಷಮಃ ॥ ೫೩ ॥

ವರಶ್ಚ ಯದಿ ಮೇ ದೇಯಸ್ತ್ವಯಾ ದೇವ ಪ್ರದೀಯತಾಂ ।
ಸಿಂಧೋರುಭಯಕೂಲೇಷು ಕರಿಷ್ಯಾಮಿ ಪುರದ್ವಯಂ ॥ ೫೪ ॥

ಗಂಧರ್ವರಕ್ಷಿತೇ ದೇಶೇ ಪುತ್ರಯೋರ್ಧರುಭಯೋಃ ಕೃತೇ ।
ನಿರ್ದೇಶಂ ತದವಾಪ್ನೋತು ಪ್ರಸಾದೇನ ಶತಕ್ರತೋ ॥ ೫೫ ॥

॥ ಮಾರ್ಕಂಡೇಯ ಉವಾಚ ॥

ಏವಮಸ್ತ್ವಿತ್ಯಥೋಕ್ತ್ವೈವಸ್ವರ್ಲೋಕಂ ವಾಸವೋ ಯಯೌ ।
ವಾಸವೇ ತು ಗತೇ ನಾಕಂ ರಾಜಾ ಚಿತ್ರರಥಸ್ತತಃ ॥ ೫೬ ॥

---

೫೩. ಈರೀತಿ ನಿನ್ನ ಆಜ್ಞೋಲ್ಲಂಘನೆಮಾಡದೆ ನಮ್ಮಂತಹ ಕೆಲವು ಜನರು ಈ ಲೋಕದಲ್ಲಿ ನಿಮಿತ್ತಕಾರಣರಾಗಿ ಇರುತ್ತಾರೆ. ಲೋಕದಲ್ಲಿ ಬ್ರಹ್ಮನು ಮಾಡಿರುವ ಪ್ರಭೇದದ ಶಿಸ್ತನ್ನು ಮೀರಲು ಯಾರು ತಾನೇ ಶಕ್ತರಾಗಿದ್ದಾರು?

೫೪. ಅಯ್ಯಾ, ದೇವೇಂದ್ರನೇ! ನನಗೆ ನೀನು ವರವನ್ನು ಕೊಡುತ್ತೀಯೆಂದು ಹೇಳಿದ ಮಾತನ್ನು ಕೇಳಿ ಬಹು ಸಂತೋಷವಾಯಿತು. ಆರೀತಿ ನೀನು ವರವನ್ನು ಕೊಡುವುದಾದರೆ, ದೇವ! ನಾನು ಕೇಳುವ ವರವನ್ನು ದಯಮಾಡಿ ಅನುಗ್ರಹಿಸು.

೫೫. ಈ ಸಿಂಧೂನದಿಯ ಉಭಯದಡಗಳಲ್ಲಿಯೂ ನಾನು ಈಗ ಎರಡು ಪಟ್ಟಣಗಳನ್ನು ರಚನೆಮಾಡಬೇಕೆಂದಿದ್ದೇನೆ. ಇದುವರೆವಿಗೆ ಗಂಧರ್ವರು ವಾಸಮಾಡಿಕೊಂಡಿದ್ದ ಸ್ಥಳವುಂಟಷ್ಟೆ? ಈ ಸ್ಥಳದಲ್ಲೆಲ್ಲಾ ನನ್ನಿಬ್ಬರು ಮಕ್ಕಳಿಗೋಸ್ಕರ ಹೊಸ ನಗರವನ್ನು ನಿರ್ಮಾಣಮಾಡಿಕೊಡಬೇಕೆಂದಿದ್ದೇನೆ. ಆ ಕೆಲಸವು ನಿನ್ನ ಅನುಗ್ರಹದಿಂದ ನಡೆಯಬೇಕಾಗಿದೆ.

೫೬. ಮಾರ್ಕಂಡೇಯನು ಹೇಳುತ್ತಾನೆ:—ನಿನ್ನ ಇಷ್ಟದಂತೆಯೇ ಆಗಲಯ್ಯಾ ಎಂದು ಹೇಳಿ, ಇಂದ್ರನು ಭರತನನ್ನಾಶೀರ್ವಾದಿಸಿ ಸ್ವರ್ಗಲೋಕಕ್ಕೆ ಹೊರಟುಹೋದನು. ಕೇಳಿದೆಯಾ? ವಜ್ರರಾಜ! ಈ ರೀತಿ ಸ್ವರ್ಗಕ್ಕೆ ಇಂದ್ರನು

**ಗಂಧರ್ವಾಣಾಂ ಮಹಾತೇಜಾ ಭರತಂ ವಾಕ್ಯಮಬ್ರವೀತ್ ।**
**। ಚಿತ್ರರಥ ಉವಾಚ ॥**
**ಗಂಧರ್ವಾ ನಿಹತಾ ವೀರಾ ಮದಾಜ್ಞಾಭಂಗಕಾರಿಣಃ ॥ ೫೭ ॥**

**ತ್ವಯಾ ತೇ ಧರ್ಮನಿತ್ಯೇನ ದೇವಬ್ರಾಹ್ಮಣಕಂಟಕಾಃ ।**
**ತನ್ಮೇ ಸಮುದ್ಧೃತಂ ಶಲ್ಯಂ ದೇವಾನಾಂಚ ಪ್ರಿಯಂ ಕೃತಂ ॥ ೫೮ ॥**

**ತಸ್ಮಾತ್ತ್ವಭಾಜಯಿತ್ವಾ ತ್ವಾಂ ಯಾಸ್ಯಾಮಿ ತ್ರಿದಿವಂ ಪುನಃ ।**
**॥ ಮಾರ್ಕಂಡೇಯ ಉವಾಚ ॥**
**ಭರತಸ್ತಮುವಾಚಾಥ ಗಂಧರ್ವಾ ನಿಹತಾ ಮಯಾ ॥ ೫೯ ॥**

---

ಪ್ರಯಾಣಮಾಡಿದೊಡನೆಯೇ ಚಿತ್ರರಥನೆಂಬ ಗಂಧರ್ವನು ಭರತನ ಸಮೀಪಕ್ಕೆ ಬಂದನು.

೫೭. ಮಹಾತೇಜಸ್ವಿಯಾದ ಆ ಚಿತ್ರರಥನು ಭರತನನ್ನು ಕುರಿತು ಹೇಳಿದುದೇನೆಂದರೆ:—ಅಯ್ಯಾ, ಭರತ! ಇದುವರೆಗೆ ನಿನ್ನಿಂದ ಸಂಹೃತರಾದ ಗಂಧರ್ವರ ವೃತ್ತಾಂತವನ್ನು ಹೇಳುತ್ತೇನೆ, ಕೇಳು. ಇವರೆಲ್ಲರೂ ಸ್ವರ್ಗದಲ್ಲಿದ್ದಾಗ ಮಹಾಪಟಿಂಗರಾಗಿದ್ದು, ನನ್ನ ಆಜ್ಞೆಯನ್ನು ಉಲ್ಲಂಘಿಸುತ್ತಿದ್ದವರೆಂದು ತಿಳಿದುಕೋ!

೫೮. ನನ್ನನ್ನು ಕಂಡರೂ, ದೇವಬ್ರಾಹ್ಮಣರನ್ನು ಕಂಡರೂ ಇವರು ಮಹತ್ತರವಾದ ದ್ವೇಷವನ್ನೇ ಸಾಧಿಸುತ್ತಾ ಲೋಕಕಂಟಕರಾಗಿ, ಅಧರ್ಮಪ್ರವರ್ತಕರಾಗಿದ್ದರೂ ಧರ್ಮಾತ್ಮನಾದ ನಿನ್ನಿಂದ ಈ ಪುಂಡರು ಸಂಹೃತರಾದ್ದರಿಂದ ಇಂದಿಗೆ ನನ್ನ ಕಂಟಕವು ಪರಿಹಾರವಾಯಿತು. ದೇವತೆಗಳಿಗೂ ಉಪಕಾರವಾಯಿತು.

೫೯. ಆದುದರಿಂದ ನಿನಗೆ ನನ್ನ ಧನ್ಯವಾದಗಳನ್ನು ಸಲ್ಲಿಸಿ ನಾನು ಸುಖವಾಗಿ ಸ್ವರ್ಗಕ್ಕೆ ಹೋಗಿ ವಾಸಮಾಡುತ್ತೇನೆ; ಎಂಬುದಾಗಿ ಹೇಳಿ ಸ್ವರ್ಗಕ್ಕೆ ಪ್ರಯಾಣ ಮಾಡಲು ಸನ್ನದ್ಧನಾದನು. ಕೇಳಿದೆಯಾ? ಎಂದು ಮಾರ್ಕಂಡೇಯ ಮುನಿಯು ವಜ್ರನೊಡನೆ ನಿರೂಪಿಸುವ ಬಗೆಯೆಂತೆಂದೊಡೆ:—

ತತ ಏನಂ ಜನಂ ತೇಷಾಂ ಸ್ತ್ರಿಯಶ್ಚ ಪರಿಪಾಲಯ ।
ಗಂಧರ್ವಾಃ ಪರಿಪಾಲ್ಯಾಸ್ತೇ ತೇಷಾಂ ತ್ವಂ ಪರಿಪಾಲಕಃ ॥ ೬೦ ॥

ಮದೀಯೇನಾನುರೋಧೇನ ವಿಶೇಷಾತ್ಕರ್ತುಮರ್ಹಸಿ ।
ಸರ್ವೇಷಾಂ ಚ ತಥಾ ಸ್ಥಾನಂ ಪರ್ವತೇ ಗಂಧಮಾದನೇ ॥ ೬೧ ॥

ಪ್ರಯಾತಾಸ್ತವ ತತ್ರಸ್ಥಾಃ ಪಾಲಯಿಷ್ಯಂತಿ ಶಾಸನಂ ।
ಏವಂ ಕರಿಷ್ಯ ಇತ್ಯುಕ್ತ್ವಾ ಪರಿಷ್ವಜ್ಯ ಚ ಪೀಡಿತಂ ॥ ೬೨ ॥

ಸರ್ವಜ್ಞಂ ಭರತಂ ಶ್ರೀಮಾನ್ಗಂಧರ್ವಸ್ತ್ರಿದಿವಂ ಯಯೌ ॥ ೬೩ ॥

---

೬೦ ಸ್ವರ್ಗಕ್ಕೆ ಪ್ರಯಾಣಬೆಳಸುವುದಕ್ಕಿಂತ ಮುಂಚಿತವಾಗಿ ಆ ಚಿತ್ರರಥನನ್ನು ಕುರಿತು ಭರತನಿಂತೆಂದನು :—ಎಲೈ, ಚಿತ್ರರಥನೇ; ಮುಂದೆ ನೀನು ಈ ಗಂಧರ್ವಕುಲವನ್ನು ಕೈಬಿಡಬೇಡ. ಈ ಗಂಧರ್ವವಂಶವನ್ನೂ, ಲೋಕೋತ್ತರ ಸುಂದರಿಯರಾದ ಗಂಧರ್ವನಾರಿಯರನ್ನೂ ಚೆನ್ನಾಗಿ ಸಂರಕ್ಷಿಸು ಇನ್ನು ಮುಂದೆ ಅವರೆಲ್ಲರಿಗೂ ನೀನೇ ಧೊರೆಯಾಗಿದ್ದುಕೊಂಡು ಸುಖವಾಗಿ ಬಾಳು.

೬೧. ನಾನು ಮಾಡುವ ವಿಶೇಷವಾದ ಆಜ್ಞೆಯನ್ನು ಕೇಳು. ಈ ಗಂಧರ್ವರಿಗೆಲ್ಲಾ ಇನ್ನು ಮುಂದೆ ಗಂಧಮಾದನಪರ್ವತವು ವಾಸಸ್ಥಾನವಾಗಿರಲಿ. ಅವರನ್ನೆಲ್ಲಾ ಅಲ್ಲಿಗೆ ಕಳುಹಿಸು.

೬೨ ಈಗ ಹತಶೇಷರಾಗಿ ನಿಂತಿರುವ ಗಂಧರ್ವ ನರನಾರಿಯರೆಲ್ಲರೂ ಕೂಡಲೆ ಅಲ್ಲಿಗೆ ಪ್ರಯಾಣಬೆಳಸಲಿ. ಎಲ್ಲರೂ ನೀನು ಮಾಡಿದ ಶಾಸನಗಳನ್ನು ಮೀರದೆ ಅಲ್ಲಿ ವಾಸವಾಗಿರಲಿ. ಈ ರೀತಿಯಾಗಿ ಹೇಳಿದ ಭರತನ ಮಾತನ್ನು ಕೇಳಿ ಚಿತ್ರರಥನು ಹಾಗೆಯೇ ಆಗಲೆಂದೊಪ್ಪಿಕೊಂಡನು. ಆಗ ಆ ಗಂಧರ್ವನು ಗಂಧರ್ವರ ಶಸ್ತ್ರಾಸ್ತ್ರಗಳಿಂದ ಕ್ಷತವಿಕ್ಷತನಾಗಿದ್ದ ಆ ಭರತನನ್ನಾಲಂಗಿಸಿಕೊಂಡು ಅವನನ್ನು ನಿರ್ವ್ರಣನನ್ನಾಗಿಮಾಡಿದನು.

೬೩-೬೪. ಆ ಬಳಿಕಲಾ ಚಿತ್ರರಥನು ಸರ್ವಜ್ಞನಾದ ಭರತನ ಆಜ್ಞೆಯನ್ನು ಪಡೆದವನಾಗಿ ತನ್ನ ಸ್ಥಳಕ್ಕೆ ಪ್ರಯಾಣಮಾಡಿದನು. ಈ ಪ್ರಕಾರವಾಗಿ ಭರತನು

ರಘುಪ್ರವೀರೋऽಪಿ ರಣೇ ಮಘೋನಃ
ಶತ್ರೂನ್ನಿಹತ್ವಾ ವರದಾನಯುಕ್ತಾಂ ।
ವಿರಾಜಮಾನೋ ಯಶಸಾ ಪರೇಣ
ಜಗಾಮ ರಾಜನ್ಸ್ವಪುರಂ ಪ್ರಹೃಷ್ಟಃ ॥ ೬೪ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶೈಲೂಷವಧೋನಾಮ ಷಟ್ಷಷ್ಟ್ಯುತ್ತರ
ದ್ವಿಶತತಮೋऽಧ್ಯಾಯಃ.



---

ಇಂದ್ರನ ಶತ್ರುಗಳಾಗಿದ್ದ, ಬ್ರಹ್ಮವರದಿಂದ ಮತ್ತರಾಗಿ ಲೋಕಹಿಂಸಕರಾಗಿದ್ದ ಗಂಧರ್ವರನ್ನು ಸಂಹರಿಸಿ ಅಭೂತಪೂರ್ವವಾದ ಯಶಸ್ಸನ್ನು ಸಂಪಾದಿಸಿ ತನ್ನ ಬಿಡಾರಕ್ಕೆ ತೆರಳಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಶೈಲೂಷವಧೆಯೆಂಬ ಹೆಸರಿನ
ಇನ್ನೂರಅರವತ್ತಾರನೆಯ ಅಧ್ಯಾಯವು
ಮುಗಿದುದು.



ಶ್ರೀಃ

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತಷಷ್ಟ್ಯುತ್ತರ ದ್ವಿಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ಆದಿತ್ಯೇಽಸ್ತಮನುಪ್ರಾಪ್ತೇ ಸಂಧ್ಯಾಕಾಲೇ ಸುದಾರುಣೇ ।
ನಿವರ್ತಯಾಮಾಸ ರಥಂ ಯುಧಾಜಿದ್ಭರತಸ್ಯ ಚ ॥ ೧ ॥

ನಿವರ್ತಯಾನಶ್ಚ ರಥಂ ಭರತಂ ವಾಕ್ಯಮಬ್ರವೀತ್ ।
ಸಂಗ್ರಾಮಮೇದಿನೀಂ ಪಶ್ಯ ಸ್ವಕೃತಾಂ ರಘುನಂದನ ॥ ೨ ॥

---

### ಇನ್ನೂರರವತ್ತೇಳನೆಯ ಅಧ್ಯಾಯವು.

೧. ಮಾರ್ಕಂಡೇಯನು ವಜ್ರಮಹಾರಾಜನನ್ನು ಕುರಿತು ಹೇಳುತ್ತಾನೆ:–– ಶೈಲೂಷನು ಸಾಯುವಹೊತ್ತಿನಲ್ಲಿ ಸಂಧ್ಯಾಕಾಲವೂ ಸನ್ನಿಹಿತವಾಗಿತ್ತು. ಕ್ರಮೇಣ ಸಂಜೆಯು ಕಳೆದು ಕತ್ತಲೆಯು ಆವರಿಸುತ್ತ ಬಂತು. ಆಗ ಯುಧಾಜಿನ್ಮಹಾರಾಜನು ಭರತನ ರಥವನ್ನು ಸಂಗ್ರಾಮರಂಗದಿಂದ ಹಿಂತಿರುಗಿಸಿದನು.

೨. ರಥವನ್ನು ಹಿಂತಿರುಗಿ ಬಿಟ್ಟುಕೊಂಡು ಹೋಗುವಾಗ ಸೋದರಳಿಯನನ್ನು ಕುರಿತು ಯುಧಾಜಿತನು ಇಂತೆಂದು ಹೇಳಿದನು :—ಮಗು ! ಭರತ ! ನೋಡಿದೆಯಾ ? ನಿನ್ನಿಂದ ಮಾಡಲ್ಪಟ್ಟ ಈ ರಣಭೂಮಿಯನ್ನು ಸ್ವಲ್ಪ ನಿಧಾನಿಸಿ ನೋಡು.

**ಗಂಧರ್ವಾಂಗಸಮಾಕೀರ್ಣಾಂ ಹತಕುಂಜರಭೂಷಣಾಂ ।**
**ತುರಂಗಮಗಣಾಕೀರ್ಣಾಂ ವರಾಯುಧಧರಾಂ ಧರಾಂ** ॥ ೩ ॥

**ಸಂಪೂರ್ಣಚಂದ್ರಪ್ರತಿಮೈರ್ದಷ್ಟೋಷ್ಠೈಶ್ಚಾರುಕುಂಡಲೈಃ ।**
**ಭೃಕುಟೀತಟದುಷ್ಪ್ರೇಕ್ಷ್ಯೈರ್ಮಸ್ತಕೈರ್ಭಾತಿ ಮೇದಿನೀ** ॥ ೪ ॥

**ಪಂಚಶೀರ್ಷೋರಗಾಕಾರೈರ್ವರಾಂಗದವಿಭೂಷಣೈಃ ।**
**ಬಾಹುಭಿರ್ಭಾತಿ ಶೂರಾಣಾಂ ವಸುಧಾ ವಸುಧಾಧಿಪ** ॥ ೫ ॥

**ಪದ್ಮಪತ್ರದಲಾಕಾರೈರ್ಗಂಧರ್ವಾಣಾಂ ತಥಾ ಕರೈಃ ।**
**ಭಾತಿ ಸಾಯಕವಿಚ್ಛಿನ್ನೈಃ ಸಪದ್ಮೇವ ವಸುಂಧರಾ** ॥ ೬ ॥

---

೩. ರಥವನ್ನು ಬಿಟ್ಟುಕೊಂಡು ಶಿಬಿರಕ್ಕೆ ಹಿಂತಿರುಗಿದ ಈ ದಾರಿಯು ಗಂಧರ್ವರ ಹೆಣಗಳಿಂದ ತುಂಬಿಹೋಗಿದೆ. ಸತ್ತುಹೋದ ಆನೆಗಳು ಬೆಟ್ಟದಂತೆ ದಾರಿಯಲ್ಲಿ ಬಿದ್ದಿವೆ. ಸತ್ತ ಕುದುರೆಗಳೂ, ಮುರಿದು ತುಂಡುತುಂಡಾದ ನಾನಾವಿಧ ಆಯುಧಗಳೂ ದಾರಿಯಲ್ಲೆಲ್ಲಾ ತುಂಬಿಹೋಗಿವೆ.

೪. ಪೂರ್ಣಚಂದ್ರನಂತೆ ಸುಂದರಮುಖವುಳ್ಳ ಈ ಗಂಧರ್ವರು ಮನೋಹರವಾದ ಕರ್ಣಕುಂಡಲಗಳಿಂದ ವಿರಾಜಿತರಾಗಿ ತುಟಿಯನ್ನು ಕಚ್ಚಿಕೊಂಡು ನೆಲದಮೇಲೆ ಸತ್ತುಬಿದ್ದಿರುವುದನ್ನು ನೋಡು. ಈ ರಣಾಂಗಣವು ಹುಬ್ಬುಗಂಟಿಕ್ಕಿಕೊಂಡು ನೋಡುವುದಕ್ಕೆ ದಿಗಿಲಾಗುವಂತಿರುವ ಗಂಧರ್ವರ ಮಸ್ತಕಗಳಿಂದ ತುಂಬಿಹೋಗಿರುವ ಬಗೆಯನ್ನು ನೋಡು.

೫. ಶ್ರೇಷ್ಠವಾದ ಅಂಗದಾಭರಣಗಳಿಂದ ಭೂಷಿತರಾದ ಶೂರ ಗಂಧರ್ವರ ಬಾಹುದಂಡಗಳನ್ನು ನೋಡಿದರೆ, ಐದು ಹೆಡೆಗಳನ್ನು ಬಿಟ್ಟುಕೊಂಡು ಹಾವುಗಳೇನಾದರೂ ಹರಿದುಹೋಗುತ್ತಿವೆಯೋ ಎಂಬಂತೆ ಈ ರಣಾಂಗಣವು ಹೊಳೆಯುತಲಿದೆ.

೬. ಬಾಣಗಳ ಏಟಿನಿಂದ ಕತ್ತರಿಸಿಹೋಗಿ ಪದ್ಮಪತ್ರದಳಗಳಂತೆ ಪ್ರಕಾಶಿಸುವ ಗಂಧರ್ವರ ಸುಂದರವಾದ ಹಸ್ತಗಳನ್ನು ನೋಡಿದರೆ ಭೂಮಿಯಮೇಲೆಲ್ಲಾ ತಾವರೆಹೂವೇನಾದರೂ ಬಿಟ್ಟಿರುವುವೋ ಎಂಬಂತೆ ಕಾಣಬರುವುದು. ಕಂಡೆಯಾ !

ಹಸ್ತಿಹಸ್ತಸಮಾಕಾರೈರ್ಗಂಧರ್ವಾಣಾಂ ತಥಾ ಕರೈಃ ।
ವಿಭಾತಿ ವಸುಧಾಕೀರ್ಣಾ ವರಚಂದನಭೂಷಿತೈಃ ॥ ೭ ॥

ತ್ವದೇಕಶರನಿರ್ಭಿನ್ನೈರ್ಗಂಡಶೈಲೋಪಮೈರ್ಗಜೈಃ ।
ಉದ್ಭ್ರಾಂತಜೀವಿತೈಃ ಪಶ್ಯ ವಿನಿಕೀರ್ಣಧರಾತಲಂ ॥ ೮ ॥

ಆವಿಷ್ಕೃತರದೈಶ್ಚಾಶ್ವೈರ್ವಿವೃತ್ತಾಕ್ಷೈಸ್ತಥೈವ ಚ ।
ಪತಿತೈರಾವೃತಾಂ ಪಶ್ಯ ತುರಂಗೈರ್ಮೇದಿನೀಂ ರಣೇ ॥ ೯ ॥

ಆತಪತ್ರೈಃ ಶಶಾಂಕಾಭೈಶ್ಚಾಮರೈಶ್ಚ ವಿರಾಜಿತಾಂ ।
ಯೋಕ್ತ್ರೈಃ ಖಲೀನೈಃ ಪಲ್ಯಾಣೈಃ ಕುಥಾಭಿಃ ಕಂಬುಭಿಸ್ತಥಾ ॥ ೧೦ ॥

---

೭. ಶ್ರೇಷ್ಠವಾದ ಚಂದನದಿಂದ ಭೂಷಿತವಾದ ಆನೆಯ ಸೊಂಡಿಲುಗಳಿಂದಲೂ ಗಂಧರ್ವರ ಹಸ್ತಗಳಿಂದಲೂ ಸಹ ಸಿಕ್ಕಾಪಟ್ಟೆ ಎರಚಾಡಿದಂತೆ ಬಿದ್ದಿರುವ ಈ ಭೂಭಾಗವನ್ನು ನೋಡು.

೮. ನಿನ್ನ ಮುಖ್ಯಮುಖ್ಯವಾದ ಬಾಣಗಳೇಟಿಗೆ ಸಿಕ್ಕಿ ತಲೆತಿರುಗಿ ಬಿದ್ದು ಸತ್ತಿರುವ ದೊಡ್ಡದೊಡ್ಡ ಬಂಡೆಗಳಂತಿರುವ ಆನೆಗಳಿಂದ ವ್ಯಾಪ್ತವಾಗಿರುವ ಸಮರ ಭೂಮಿಯನ್ನು ನೋಡು.

೯. ಮುಖಗಳನ್ನಗಲಿಸಿಕೊಂಡು ಕಣ್ಣುಗಳನ್ನು ತಿರುಗಿಸುತ್ತಾ ಕೆಳಗೆ ಬಿದ್ದು ಸತ್ತಿರುವ ತುರಂಗತರಂಗಗಳಿಂದಾಕೀರ್ಣವಾಗಿರುವ ಈ ಸಮರಾಂಗಣವನ್ನು ನೋಡು.

೧೦. ಈರೀತಿ ಸತ್ತುಬಿದ್ದಿರುವ ಕುದುರೆಗಳ ಪಕ್ಕಗಳಲ್ಲಿ ಚಂದ್ರಮಂಡಲದಂತೆ ಹೊಳೆಯುತ್ತಿರುವ ಶ್ವೇತಚ್ಛತ್ರಿಗಳು ಹೇಗೆ ಮುರಿದುಬಿದ್ದಿವೆ ನೋಡಿದೆಯಾ ? ಹಾಗೆಯೇ ಒಂದುಕಡೆ ಬಿದ್ದಿರುವ ಚಾಮರಗಳನ್ನು ನೋಡು! ಕಡಿವಾಣ, ಕಾಟರ, ಜೀನು ಮುಂತಾದ ಕುದುರೆಗಳ ಸವಾರಿಗಾಗಿ ಉಪಯೋಗಿಸತಕ್ಕ ಪದಾರ್ಥಗಳು ಚಲ್ಲಾಪಿಲ್ಲಿಯಾಗಿ ಬಿದ್ದಿರುವುವು. ಇವನ್ನು ನೋಡು:

ಕೇಶೈರ್ದಂಡೈಸ್ತಥಾ ಚಾಪೈಃ ಪ್ರಾಸೈಃ ಖಡ್ಗೈಃ ಪರಶ್ವಧೈಃ ।
ಶರೈರ್ನಾನಾಪ್ರಕಾರೈಶ್ಚ ನಾನಾನಾಮಾಂಕಿತೈಃ ಶುಭೈಃ ॥ ೧೧ ॥

ಮುಕುಟೈರಂಗದೈರ್ಹಾರೈಃ ಕುಂಡಲೈರಪಿ ಶೋಭಿತಾಂ ।
ರಘುನಾಥ ಭುವಂ ಪಶ್ಯ ಕಾರುಣ್ಯೇಽಪಿ ಮನೋಹರಾಂ ॥ ೧೨ ॥

ಗಂಧರ್ವಾನ್ಭಕ್ಷ್ಯಮಾಣಾಂಶ್ಚ ಕ್ರವ್ಯಾದ್ಭಿರ್ಮೃಗಪಕ್ಷಿಭಿಃ ।
ಪಶ್ಯ ತ್ವಂ ಚಾರುಸರ್ವಾಂಗಂ ಸರ್ವಾಭರಣಭೂಷಿತಂ ॥ ೧೩ ॥

ಆಕೃಷ್ಯಮಾಣಂ ನಿಮ್ನೇಷು ಕ್ರವ್ಯಾದ್ಭಿಃ ಕುಣಪಾನ್ರಣೇ ।
ಗಾತ್ರೈಶ್ಚಲದ್ಭಿರ್ದೃಶ್ಯಂತೇ ಜೀವಂತೈರಿವ ಪಾರ್ಥಿವ ॥ ೧೪ ॥

ಸನ್ನಿಧಾನಂ ತು ಯೋಧಾನಾಂ ವಿವೃತಂ ಕರಪಂಕಜಂ ।
ಧನುರ್ಗ್ರಾಹಾಜ್ಜ್ಞಾತಕಿಣಂ ಭಕ್ಷಿತೇನ ಪತತ್ರಿಭಿಃ ॥ ೧೫ ॥

---

೧೧ ತಲೆಕೂದಲುಗಳು, ಬೆತ್ತಗಳು, ಧನುಸ್ಸುಗಳು, ಪ್ರಾಸಖಡ್ಗಪರಶ್ವಧಾದಿಗಳೇ ಮುಂತಾದ ಶಸ್ತ್ರಗಳೂ, ನಾನಾವಿಧವಾದ ಬಾಣಗಳೂ ಸಹ ಎಷ್ಟೊಂದು ವಿಧವಾಗಿ ಚೆಲ್ಲಾಡಿರುವುವು, ಕಂಡೆಯಾ ?

೧೨. ಮತ್ತೊಂದುಕಡೆ ದೃಷ್ಟಿಸಿ ನೋಡು ! ವೀರರು ಧರಿಸಿದ್ದ ಕಿರೀಟಗಳೂ, ಕುಂಡಲಗಳೂ, ಹಾರಗಳೂ, ಅಂಗದಗಳೇ ಮುಂತಾದ ನಾನಾಭರಣಗಳನ್ನು ನೋಡಿದರೆ ಎಷ್ಟೊಂದು ಕರುಣಾಜನಕವಾಗಿ ಕಾಣುತ್ತವೆ, ನೋಡಿದೆಯಾ ?

೧೩. ಇತ್ತ ತಿರುಗಿ ನೋಡು ! ಭರತ ! ಸತ್ತುಬಿದ್ದಿರುವ ಗಂಧರ್ವರ ಹೆಣಗಳನ್ನು ಕಿತ್ತು ತಿನ್ನುತ್ತಿರುವ ರಾಕ್ಷಸರಿಂದಲೂ, ಮೃಗಪಕ್ಷಿಗಳಿಂದಲೂ ಆಕ್ರಾಂತವಾದ ಸರ್ವಾಭರಣಭೂಷಿತವಾದ ಮನೋಹರವಾದ ಗಂಧರ್ವಶರೀರಗಳನ್ನು ನೋಡು.

೧೪. ಸತ್ತುಹೋದ ವೀರರ ದೇಹಗಳನ್ನು ತಿನ್ನಬೇಕೆಂದಾಶಿಸಿ ರಾಕ್ಷಸರು ಅವರ ನಿರ್ಜೀವ ದೇಹಗಳನ್ನು ಹಳ್ಳದಕಡೆ ಎಳೆದುಕೊಂಡು ಹೋಗುತ್ತಿರುವುದನ್ನು ನೋಡಿದರೆ, ಈ ಹೆಣಗಳಿಗೆ ಪುನಃ ಜೀವವೇನಾದರೂ ಕೂಡಿಕೊಂಡು ಓಡಾಡುತಲಿವೆಯೋ ಎಂಬಂತೆ ಕಾಣುತ್ತಿರುವುದಲ್ಲವೆ ?

೧೫. ಸತ್ತು ಬಿದ್ದಿರುವ ಯೋಧರುಗಳ ಕೈಯಲ್ಲಿ ಹಿಡಿದಿರುವ ಧನುಸ್ಸುಗಳಿಗೆ ಕಟ್ಟಿರುವ ನರಗಳನ್ನ ಕೆದಕೆದು ತಿನ್ನುತ್ತಿರುವ ಪಕ್ಷಿಗಳ ಗುಂಪುಗಳನ್ನು ನೋಡು.

ಅರ್ಧಸಂಭಕ್ಷಿತೈರ್ವಕ್ತ್ರೈಸ್ತಥಾ ಸಂಪೂರ್ಣಭಕ್ಷಿತೈಃ ।
ಮುಖ್ಯತ್ವಾನ್ಪಶ್ಯಗಂಧರ್ವಾನ್ ಶಾಪಾದಿವ ಮಹೀಕ್ಷಿತಾಂ ॥ ೧೬ ॥

ಅನಾಗಸಾಂ ನರೇಂದ್ರಾಣಾಂ ಗಂಧರ್ವೈರ್ಯತ್ಪುರಾ ಕೃತಂ ।
ಭೂಯಸ್ತದೇವ ಸಮರೇ ಗಂಧರ್ವಾಣಾಂ ತ್ವಯಾ ಕೃತಂ ।
ರಣಾಜಿರೇ ಪಿಶಾಚಾನಾಂ ಗಂಧರ್ವಾನ್ಪಶ್ಯ ರಾಘವ ॥ ೧೭ ॥

ಯಕ್ಷಾಣಾಂ ರಾಕ್ಷಸಾನಾಂ ಚ ಶತಶೋಽಥ ಸಹಸ್ರಶಃ ।
ಗಂಧರ್ವಮಾಂಸಲುಬ್ಧಾನಾಂ ಸತತಂ ಕ್ಷತಜಾಶಿನಾಂ ॥ ೧೮ ॥

ಸಮುದ್ರದಾರಾಃ ಸಂಪ್ರಾಪ್ತಾಃ ಕ್ರವ್ಯಾದಾಃ ಕ್ಷುಧಿತಾ ಭೃಶಂ ।
ತ್ವಯ್ಯೈತೇಷಾಂ ಪರಾ ತೃಪ್ತಿಃ ಕೃತಾಽದ್ಯ ರಣಮೂರ್ಧನಿ ॥ ೧೯ ॥

---

೧೬. ಸತ್ತ ಗಂಧರ್ವರ ಹೆಣಗಳನ್ನು ಕಿತ್ತು ಒಂದುಕಡೆ ಅರ್ಧತಲೆಯನ್ನೂ, ಮತ್ತೊಂದುಕಡೆ ಪೂರಾ ಮುಖಗಳನ್ನೂ ಕಿತ್ತು ತಿನ್ನುತ್ತಿರುವ ಹದ್ದುಗಳನ್ನು ನೋಡಿದರೆ ಭೂಪತಿಗಳ ಶಾಪದಿಂದ ಗಂಧರ್ವರಿಗೆ ಈ ದುರವಸ್ಥೆ ಬಂತೆಂದು ಭಾವಿಸಬಹುದಲ್ಲವೆ ?

೧೭. ನಿರಪರಾಧಿಗಳಾದ ರಾಜರುಗಳನ್ನು ಗಂಧರ್ವರು ತಾವು ಬದುಕಿದ್ದಾಗ ಎಷ್ಟೆಷ್ಟು ಗೋಳುಹುಯ್ದುಕೊಂಡರೋ ಆ ಕಷ್ಟಗಳನ್ನೆಲ್ಲಾ ನೀನು ಗಂಧರ್ವರಿಗೆ ಹಿಂತಿರುಗಿಸಿ ಈ ದುರವಸ್ಥೆಗೆ ಗುರಿಮಾಡಿರುವಂತೆ ಕಾಣುತ್ತಿರುವುದಲ್ಲವೆ ? ಭರತ, ಭರತ, ಗಂಧರ್ವರ ಹೆಣಗಳನ್ನು ತಿನ್ನಲು ಓಡಿಬರುತ್ತಿರುವ ಪಿಶಾಚಗಳನ್ನು ನೋಡು.

೧೮. ಭರತ, ಮತ್ತೂ ಚೆನ್ನಾಗಿ ನೋಡು. ಗಂಧರ್ವರ ಬಲು ರುಚಿಕರವಾದ ಮಾಂಸವನ್ನು ತಿನ್ನಬೇಕೆಂದು ಕಾದಿದ್ದ ಬಹುದಿನಗಳಿಂದ ಹಸಿದಿದ್ದ ಯಕ್ಷರಾಕ್ಷಸರುಗಳೂ ಸಹ ನೂರುಗಟ್ಟಲೆ ಸಾವಿರಗಟ್ಟಲೆ ಲಕ್ಷಗಟ್ಟಲೆಯಾಗಿ ಯುದ್ಧರಂಗದ ಕಡೆ ಓಡಿಯೋಡಿ ಬರುತ್ತಿರುವುದನ್ನು ನೋಡು.

೧೯. ಹೊಟ್ಟೆಹಸಿವಿನಿಂದ ಸಂಕಟಪಡುತ್ತಿರುವ ಕ್ರವ್ಯಾದರು ಸಮುದ್ರದಕಡೆಯಿಂದ ಓಡಿಬಂದಿರುವುದನ್ನು ನೋಡು. ಈಗ ನಿನ್ನ ದೆಸೆಯಿಂದ ಈ ಸಮಸ್ತ ಪ್ರಾಣಿಗಳಿಗೂ ತೃಪ್ತಿಕರವಾದ ಭೋಜನವು ಸಿಕ್ಕಿದಂತಾಯಿತು.

ನಾನಾವಿಧಾನಿ ರೂಪಾಣಿ ಪಶ್ಯ ಕ್ರವ್ಯಭುಜಾಂ ರಣೇ ।
ಕೇಚಿತ್ಸ್ಥೂಲಾಃ ಕೃಶಾಃ ಕೇಚಿತ್ಪ್ರಾಂಶವೋ ಲಘವೋಽಪರೇ ॥ ೨೦ ॥

ಲಂಬಭ್ರೂಜಠರಾಃ ಕೇಚಿತ್ತಥಾ ಚಿಪಿಟನಾಸಿಕಾಃ ।
ವೃತ್ತಾಕ್ಷಾಃ ಕೇಕರಾಕ್ಷಾಶ್ಚ ದಂತುರಾಃ ಸುವಿಭೀಷಣಾಃ ॥ ೨೧ ॥

ತಥಾ ಚೈವೋರ್ಧ್ವರೋಮಾಣೋ ಮಹಾದಂಷ್ಟ್ರಾ ಮಹಾಮುಖಾಃ ।
ಪುರಸ್ತಾತ್ಪಾರ್ಶ್ವಯೋರ್ಘೋರಾಃ ಪಶ್ಚಾದಂಗದಯೋಃ ಪರೇ ॥ ೨೨ ॥

ನಾನಾವಿಧಾನಾಂ ಸತ್ತ್ವಾನಾಂ ಸದೃಶೈಶ್ಚ ತಥಾಽನನೈಃ ।
ನಾನಾವೇಷಧರಾ ರೌದ್ರಾ ನಾನಾವಿಸ್ಕೃತದರ್ಶನಾಃ ॥ ೨೩ ॥

---

೨೦. ತಾವು ತಿಂದು ಸಾಕಾಗಿ ಮಾಂಸದ ಮುದ್ದೆಗಳನ್ನು ಹೆಗಲಮೇಲೆ ಹೊತ್ತು ಸಾಗುತ್ತಿರುವ ನಾನಾವಿಧರೂಪಗಳನ್ನು ಧರಿಸಿರುವ ಕ್ರವ್ಯಾದ (ಹೆಣ ತಿನ್ನುವ ರಾಕ್ಷಸ) ರನ್ನು ನೋಡು. ಇವರಲ್ಲಿ ಕೆಲವರು ದಪ್ಪನಾಗಿರುವರು. ಎತ್ತರವಾಗಿ ಕೆಲವರು ಬೆಳೆದಿರುವರು ಮತ್ತೆ ಕೆಲವರು ಬಹುಲಕ್ಷಣವಾಗಿರುವರು.

೨೧. ಕೆಲವರ ಹೊಟ್ಟೆ ಜೋಲಾಡುತ್ತಿದೆ. ಕೆಲವರ ಮೂಗು ಚಪ್ಪಟೆಯಾಗಿದೆ. ಕೆಲವರ ಕಣ್ಣಾಲಿಗಳು ಗರ್ರನೆ ತಿರುಗುತ್ತಿವೆ. ಕೆಲವರ ಕಣ್ಣು ಕಾಗೆ ನೋಟದಿಂದ ಕೂಡಿವೆ. ಕೆಲವರ ಕಣ್ಣು ನೋಡುವುದಕ್ಕೇ ಬಹು ಹೆದರಿಕೆಯಾಗುವಂತಿದೆ.

೨೨. ಕೆಲವರ ಮೈ ಕೂದಲುಗಳು ಎದ್ದುನಿಂತಿವೆ. ಕೆಲವರ ಮುಖದಿಂದ ಉಬ್ಬುಹಲ್ಲುಗಳು ಈಚೆಗೆ ಹೊರಟು ಹೆದರಿಕೆಯಾಗುವಂತಿದೆ. ಕೆಲವರಿಗೆ ಮುಂದುಗಡೆ ಮುಖವಾದರೆ, ಕೆಲವರಿಗೆ ಹಿಂದುಗಡೆ ಮುಖ, ಮತ್ತೆ ಕೆಲವರಿಗೆ ಪಕ್ಕಗಳಲ್ಲಿ ಮುಖವಿದೆ. ಕೆಲವರಿಗೆ ತೋಳುಗಳಮೇಲೆ ಮುಖ.

೨೩. ಅನೇಕಮಂದಿ ರಾಕ್ಷಸರು ಅನೇಕವಿಧವಾದ ಮೃಗಗಳ ಮುಖದಂತೆ ಮುಖವನ್ನುಳ್ಳವರಾಗಿದ್ದಾರೆ. ಇವರೆಲ್ಲರೂ ನಾನಾ ವೇಷಗಳನ್ನು ಧರಿಸಿದ್ದಾರೆ. ನಾನಾ ವಿಕಾರವಾದ ದರ್ಶನಗಳನ್ನು ಹೊಂದಿರುವವರನೇಕರು ಇಲ್ಲಿದಾರೆ.

**ಸಿಂಹಚರ್ಮಾಂಬರಧರಾ ವ್ಯಾಘ್ರಚರ್ಮಾಂಬರಾಸ್ತಥಾ ।**
**ಆಹೂಯಂತೇ ದಶಂತ್ಯನ್ಯೇ ಹರಂತ್ಯನ್ಯೇಽಸೃಗುತ್ತಮಂ    ॥ ೨೪ ॥**

**ಅನ್ಯೇ ಸ್ಕಂದಂ ಸಮಾರೋಪ್ಯ ಮಾಂಸಂ ರಕ್ತಂ ತದಾಽಗರ್ಮ ।**
**ರಕ್ತಾಪಗಾಸು ಕ್ರೀಡಂತಿ ತ್ವತ್ಕೃತಾಸು ಯಥಾಸುಖಂ    ॥ ೨೫ ॥**

**ಸ್ನಪಯಂತಿ ರುಧಿರೈಶ್ಚಾನ್ಯೇ ಪಾಯಯಂತಿ ಪರೇಽಸೃಜಂ ।**
**ರಕ್ತಂ ಕೃತ್ವಾ ಕಪಾಲೇಷು ಕೃತ್ವೋತ್ಸಂಗೇ ಪುನಃಪುನಃ    ॥ ೨೬ ॥**

**ಭಾರ್ಯಾಭಿಶ್ಚ ಸಹೈವಾನ್ಯೇ ಪಿಬಂತಿ ರುಧಿರಂ ರಣೇ ।**
**ಪಾಯಯಂತಿ ತಥೈವಾನ್ಯೇ ರಾಮಾ ರಾಮಾನುಜ ! ಸ್ವಯಂ    ॥ ೨೭ ॥**

೨೪. ಕೆಲವರು ಸಿಂಹದ ಚರ್ಮಗಳನ್ನು ಹೊದ್ದಿದ್ದಾರೆ. ಒಬ್ಬರು ಮತ್ತೊಬ್ಬರನ್ನು ಕರೆಯುತ್ತಿದ್ದಾರೆ. ಕೆಲವರು ಮಾಂಸವನ್ನು ತಿನ್ನುತ್ತಿದಾರೆ.

೨೫. ಕೆಲವರು ರಕ್ತಮಾಂಸಗಳನ್ನು ತಮ್ಮತಮ್ಮ ಹೆಗಲುಗಳಮೇಲೆ ಹೊತ್ತುಕೊಂಡು ತಮ್ಮ ಆಪ್ತರಿಗೆ ಕೊಡುತಲಿದಾರೆ. ಓ ಭರತ, ನಿನ್ನಿಂದ ನಿರ್ಮಿತವಾದ ರಕ್ತನದಿಗಳಲ್ಲಿ ಅನೇಕರು ಈಜಾಡುತ್ತಾ ಆನಂದಪಡುತಲಿದ್ದಾರೆ ನೋಡು.

೨೬. ಮತ್ತೆ ತಮ್ಮ ಸ್ನೇಹಿತರನೇಕರನ್ನು ಹಿಡಿದುತಂದು ರಕ್ತದಹೊಳೆಯಲ್ಲಿ ಅದ್ದುತ್ತಿರುವ ಚಂದವನ್ನು ನೋಡು. ಬಲಾತ್ಕಾರವಾಗಿ ರಕ್ತವನ್ನು ಕುಡಿಸುತ್ತಿರುವ ಆಂದವನ್ನು ನೋಡು. ಇತ್ತ ಕೆಲವರು ಮಕ್ಕಳನ್ನು ತೊಡೆಯಮೇಲೆ ಮಲಗಿಸಿಕೊಂಡು ತಲೆಬುರುಡೆಗಳಲ್ಲಿ ರಕ್ತವನ್ನು ತುಂಬಿಕೊಂಡು ಬಂದು ಪ್ರೀತಿಯಿಂದ ಕುಡಿಸುತ್ತಿರುವುದನ್ನು ನೋಡು.

೨೭. ಗಂಡಹೆಂಡಿರು ಸಂತೋಷದಿಂದ ಕಲೆತು ತೃಪ್ತಿಯಾಗುವಂತೆ ರಕ್ತಪಾನ ಮಾಡುತ್ತಿರುವ ಸೊಬಗನ್ನು ನೋಡು. ನಾಚಿಕೊಂಡ ಹೆಂಡತಿಯರನ್ನು ಬಲಾತ್ಕಾರವಾಗಿ ಹಿಡಿದುಕೊಂಡು ಬಂದು ಪ್ರೀತಿಯಿಂದ ರಕ್ತವನ್ನು ಕುಡಿಸುತ್ತಿರುವ ಕಾಂತರ ಸವಿನೋಟವನ್ನು ನೋಡು.

ಭಾರ್ಯಾಕರಧೃತೇಷ್ವನ್ಯೇ ಕಪಾಲೇಷು ಪಿಬಂತ್ಯಸೃಕ್ ।
ಕೌಂಜರೇಷು ಕಪಾಲೇಷು ಪಿಬಂತ್ಯನ್ಯೇಽಸೃಗುಲ್ಬಣಾಃ ॥ ೨೮ ॥

ಶಿಶೂನ್ಸ್ಕಂಧಗತಾನ್ಕೃತ್ವಾ ತೃಪ್ತಾ ನೃತ್ಯಂತಿ ಚಾಪರೇ ।
ಹಸ್ತಪೂದಾಯ ಪತ್ನೀನಾಂ ನೃತ್ಯಂತ್ಯನ್ಯೇ ತಥೈವ ಚ ॥ ೨೯ ॥

ನೃತ್ಯಂತ್ಯನ್ಯೇ ಹಸಂತ್ಯನ್ಯೇ ವಿಕೃತೈಶ್ಚ ತಥಾ ಸ್ವರೈಃ ।
ಗಾಯಂತ್ಯನ್ಯೇ ಸ್ವಪಂತ್ಯನ್ಯೇ ಕಲಹಾಯಂತಿ ಚಾಪರೇ ॥ ೩೦ ॥

ಕುಣಪಾಂಶ್ಚ ತಥೈವಾನ್ಯೇ ತ್ಯಜಂತ್ಯನ್ಯೇ ಮಹೀತಲೇ ।
ಅನ್ಯಾಂಶ್ಚಾದಾತುಮಿಚ್ಛಂತಿ ಗೃಹ್ಣಂತಿ ಚ ತಥಾಽಪರಾ ॥ ೩೧ ॥

---

೨೮. ಕೆಲವರು ಹೆಂಡತಿಯರ ಕೈಯಲ್ಲಿ ಹಿಡಿದಿರುವ ತಲೆಬುರುಡೆಗಳಲ್ಲಿ ತುಂಬಿಕೊಂಡಿದ್ದ ರಕ್ತವನ್ನು ಪಾನಮಾಡುತಲಿರುವರು. ಸಣ್ಣ ಸಣ್ಣ ತಲೆಬುರುಡೆಗಳಲ್ಲಿ ತುಂಬಿಕೊಂಡು ಕುಡಿದರೆ ದಾಹೆವಡಗುವುದಿಲ್ಲವೆಂದು ಕೆಲವು ಮಂದಿ ಪಿಪಾಸುಗಳು ಆನೆಗಳ ತಲೆಬುರುಡೆಯಲ್ಲಿ ಯಥೇಚ್ಛವಾಗಿ ರಕ್ತವನ್ನು ತುಂಬಿಕೊಂಡು ಸರ್ರೆಂದು ಹೀರುತ್ತಿರುವ ನೋಟವನ್ನು ನೋಡು.

೨೯. ಕೆಲವರು ಚೆನ್ನಾಗಿ ರಕ್ತಗಳನ್ನು ಕುಡಿದು ಮೇರೆಮೀರಿದ ಆನಂದದಿಂದ ತುಂಬಿದವರಾಗಿ ತಮ್ಮತಮ್ಮ ಮಕ್ಕಳನ್ನು ಹೆಗಲಮೇಲೇರಿಸಿಕೊಂಡು ಥಕಥೈ ಥಕಥೈ ಎಂದು ಕುಣಿಯುತ್ತಿರುವುದನ್ನು ನೋಡು. ಕೆಲವರು ತಮ್ಮತಮ್ಮ ಹೆಂಡತಿಯರ ಕೈಗಳನ್ನು ಹಿಡಿದುಕೊಂಡು ಕುಣಿಯುತ್ತಿರುವ ಸೊಗಸನ್ನು ನೋಡು.

೩೦. ಹೀಗೆ ಕುಣಿಯುವವರೆಷ್ಟು ಮಂದಿಯೋ, ಕೇಕೇ ಹಾಕಿಕೊಂಡು ನಗುವವರೆಷ್ಟು ಮಂದಿಯೋ, ವಿಕಾರವಾದ ಸ್ವರಗಳಿಂದ ಕಿರಿಚಿಕೊಳ್ಳುವವರೆಷ್ಟುಮಂದಿಯೊ ನಾನಾ ರಾಗಗಳಿಂದ ಆಲಾಪನೆಮಾಡುವವರೆಷ್ಟು ಮಂದಿಯೋ, ಒಬ್ಬರೊಬ್ಬರು ಕುಡಿದು ಜಗಳವಾಡುತ್ತಿರುವವರೆಷ್ಟು ಮಂದಿಯೋ.

೩೧. ಹೆಣಗಳನ್ನು ಕಿತ್ತು ತಿಂದಾದಮೇಲೆ ಅವರ ಮೂಳೆಚಕ್ಕಳನ್ನಾ ಚೆಗೆಸೆದು ಬೇರೊಂದು ಹೆಣವನ್ನು ಕೈಗೆ ತೆಗೆದುಕೊಂಡು ಅದರ ರುಚಿಯನ್ನು ನೋಡುವವರೆಷ್ಟು ಮಂದಿ ಇಲ್ಲಿ ಕಾಣಿಸುತ್ತಿರುವರು ಕುಡೆಯಾ, ಭರತ !

**ಕುರ್ವಂತಿ ಕಲಹಾಂಶ್ಚಾನ್ಯೇ ಕುಣಪಾರ್ಥಾಯ ಕುತ್ಸಿತಾಃ ।**
**ಉತ್ಕೃತ್ಯ ಮಾಂಸಾನ್ಯಶ್ನಂತಿ ಕೇಚಿದ್ಗಾತ್ರೈರ್ವಿಭೂಷಿತಾಃ　　॥ ೩೨ ॥**

**ಭುಕ್ತ್ವಾ ಚಾಸ್ಥೀನಿ ಮಜ್ಜಾಶ್ಚ ಕೇಚಿದಶ್ನಂತಿ ರಾಘವ ।**
**ಭರತಸ್ಯ ಪ್ರಸಾದೇನ ತೃಪ್ತಾಃ ಸ್ಮ ಇತಿ ಚಾಪರೆ　　॥ ೩೩ ॥**

**ಪರಸ್ಪರಂ ಚ ಭಾಷಂತೇ ಪರಂ ಹರ್ಷಮುಪಾಗತಾಃ ।**
**ನಿತ್ಯಂ ಭವತು ರಾಜ್ಞಾಂ ಚ ಯುದ್ಧಂ ವೈರಂ ನೃಶಂಸತಾ　　॥ ೩೪ ॥**

**ಬಲಂ ಸಹಾಯಾಃ ಪುಷ್ಟಿಶ್ಚ ಯೇನ ತೃಪ್ಯಾಮಹೇ ವಯಂ ।**
**ಏವಮೇತೇ ವದಂತಶ್ಚ ಸ್ವರೈಶ್ಚ ವಿವಿಧೈರ್ಜಗುಃ　　॥ ೩೫ ॥**

---

೩೨. ಕೆಲವು ಕೆಟ್ಟ ಜನರು ಮಾಂಸನಷ್ಟವಾದ ಹೆಣಗಳಿಗೋಸ್ಕರ ನನಗೆ ತನಗೆಂದು ಜಗಳವಾಡುತ್ತಿರುವುದನ್ನು ನೋಡು. ಒಬ್ಬ ಘಾತುಕನು ಇನ್ನೊಬ್ಬನ ಕೈಯಲ್ಲಿದ್ದ ಹೆಣವನ್ನು ಧಕ್ಕಡಕತನದಿಂದ ಕಿತ್ತುಕೊಂಡು ತಿನ್ನುತ್ತಿರುವುದನ್ನು ನೋಡು.

೩೩. ಹೆಣದ ಎಲೇಮೂಳೆಗಳನ್ನೂ ಕೊಬ್ಬನ್ನೂ ಕೆಲವರು ತಿನ್ನುತ್ತಿದಾರೆ. ನೋಡು. ಅಲ್ಲಿ ಕೆಲವರಾಡಿಕೊಳ್ಳುತ್ತಿರುವ ಮಾತು ನಿನ್ನ ಕಿವಿಗೆ ಬಿತ್ತೋ ಇಲ್ಲವೋ ಈಗ ಚೆನ್ನಾಗಿ ಕೇಳು. ಭರತನ ಅನುಗ್ರಹದಿಂದ ನಾವೆಲ್ಲರೂ ಚೆನ್ನಾಗಿ ತೃಪ್ತಿಹೊಂದಿ ದೆವೆಂಬ ಮಾತನ್ನು ಕೇಳಿದೆಯಾ ?

೩೪. ಇನ್ನೂ ಕೆಲವರಾಡುತ್ತಿರುವ ಮಾತನ್ನು ಕೇಳು. ಅವರೇನು ಹೇಳಿದ ರೆಂಬುದನ್ನು ನಾನೇ ನಿನಗೆ ವಿವರಿಸುತ್ತೇನೆ--ನಮಗೆಲ್ಲಾ ಬಹು ಸಂತೋಷವಾಗಿದೆ. ಈ ರೀತಿಯಾಗಿಯೇ ಯಾವಾಗಲೂ ರಾಜರಿಗೂ ಪರರಾಜರಿಗೂ ನಿತ್ಯವೂ ವೈರವು ಅಭಿವೃದ್ಧಿಯಾಗಲಿ. ಹೀಗೆಯೇ ಯುದ್ಧವು ಬಹು ಕ್ರೂರವೇಗದಿಂದ ನಡೆಯುತ್ತಾ ಇರಲಿ.

೩೫. ಯುದ್ಧಮಾಡುವ ವೀರರ ಬಲ ಹೆಚ್ಚಲಿ. ಅವರಿಗೆ ಸಹಾಯ ಸಂಪತ್ತುಗಳೊದಗಲಿ. ಅವರ ದೇಹದ ರಕ್ತಮಾಂಸಗಳ ಸೇವನೆಯಿಂದ ನಾವು ಸರ್ವದಾ ತೃಪ್ತರಾಗಿರೋಣ. ಇಂತಹ ಈ ವಿಧವಾದ ಮಾತುಗಳನ್ನು ಹೇಳಿ ಕೊಳ್ಳುತ್ತಾ ಅವನ್ನೇ ನಾನಾರಾಗಗಳಿಂದ ಆಲಾಪಿಸುತ್ತಾ, ಆನಂದದಿಂದ ಹಾಡುತ್ತಾ ಇರುವುದನ್ನು ನೋಡು.

**ರಥಂ ತಥಾऽನ್ಯೇ ವೀಕ್ಷಂತೇ ಸಸ್ನೇಹಾ ಭೃಶದುರ್ದೃಶಾಃ ।**
**ಏವಂ ಸ ಭರತಃ ಶ್ರೀಮಾನ್ಮಾತುಲೇನ ಪ್ರದರ್ಶಿತಂ ॥ ೩೬ ॥**

**ಪಶ್ಯನ್ರಣಾಜಿರಂ ಪ್ರಾಯಾದ್ಯೇನ ರಾಜಗೃಹಂ ಪುನಃ ।**
**ಸೋऽಪಶ್ಯನ್ನಗರಾಭ್ಯಾಶೇ ವಾಯುವ್ಯಾಸ್ತ್ರನಿಪೋಹಿತಂ ॥ ೩೭ ॥**

**ಸೈನ್ಯಂ ತತ್ಪಾರ್ಥಿವೇಂದ್ರಾಣಾಂ ವ್ರಜಂತಂ ಸಸುರಾದಿಮಂ ।**
**ದೃಷ್ಟ್ವಾ ತೇ ಭರತಂ ಸರ್ವೇ ರಣರೇಣುಸಮುತ್ಕ್ಷಿತಂ ॥ ೩೮ ॥**

**ಸಂಗ್ರಾಮೇ ಜಯಿನಂ ವೀರಮಭ್ಯನಂದಂತ ಪಾರ್ಥಿವಾಃ ।**
**ಸ ಸಮೇತ್ಯ ಮಹಾಭಾಗೈಃ ಪರಿಷ್ವಜ್ಯ ಚ ಪಾರ್ಥಿವಾನ್ ।**
**ಸಾಂತ್ವಯಿತ್ವಾ ಚ ಧರ್ಮಾತ್ಮಾ ಶಿಬಿರಾಣಿ ವ್ಯಸರ್ಜಯತ್ ॥ ೩೯ ॥**

---

೩೬. ಈರೀತಿ ಆ ರಣಭೂಮಿಯಲ್ಲಿ ಭೂತಪ್ರೇತಪಿಶಾಚಾದಿಗಳ ಸಮ್ಮೋದಾಮೋದಗಳು ಯಥೇಚ್ಛವಾಗಿ ನಡೆದಿರಲು, ಅಲ್ಲಿ ಬಿದ್ದಿದ್ದ ನಾಯಕರಿಲ್ಲದ ರಥಗಳನ್ನು ಸ್ನೇಹಪರವಶರಾಗಿ ಅವರು ಹೃದಯಭೇದಕವಾದ ನೋಟದಿಂದ ನೋಡಿದರು.

೩೭. ಶ್ರೀಮಂತನಾದ ಭರತನು ತನ್ನ ಸೋದರಮಾವನಿಂದ ಪ್ರದರ್ಶಿಸಲ್ಪಟ್ಟ ಈ ವಿಧವಾದ ರಣರಂಗದ ನೋಟವನ್ನು ನೋಡುತ್ತಾ ನೋಡುತ್ತಾ ರಾಜಗೃಹವನ್ನು ಪ್ರವೇಶಿಸಿದನು. ಹೀಗೆ ಬರುತ್ತಿದ್ದಾಗ ಊರಿನ ಹತ್ತಿರದಲ್ಲಿ ವಾಯುವ್ಯಾಸ್ತ್ರದಿಂದ ತೂರಿಕೊಂಡು ಬಂದು ಬಿದ್ದಿದ್ದ ತನ್ನ ಕಡೆಯ ಸೈನ್ಯವನ್ನು ನೋಡಿದನು.

೩೮. ಈರೀತಿ ಬಿದ್ದಿದ್ದ ರಾಜರು ಮೇಲಕ್ಕೆದ್ದು ತಮ್ಮ ಸೈನ್ಯದೊಡನೆ ಪುನಃ ರಣರಂಗಕ್ಕೆ ಹೋಗಬೇಕೆಂದು ಹೊರಟಾಗ ಭರತನನ್ನು ಊರಬಾಗಿಲಲ್ಲೇ ಕಂಡರು. ಆಗ ಭರತನ ಮೈಯೆಲ್ಲಾ ಯುದ್ಧರಂಗದ ಧೂಳಿನಿಂದ ತುಂಬಿಹೋಗಿತ್ತು.

೩೯. ಭರತನು ಜಯಶಾಲಿಯಾಗಿ ಬಂದುದನ್ನು ನೋಡಿ ಆ ರಾಜರೆಲ್ಲರೂ ಭರತನನ್ನಭಿನಂ(ವಂ)ದಿಸಿದರು. ಆಗ ಆ ಭರತನು ಆ ರಾಜರನ್ನು ಆಲಿಂಗಿಸಿಕೊಳ್ಳುತ್ತಾ ಅವರ ಜತೆಯಲ್ಲಿ ಮಾತನಾಡುತ್ತಾ, ಅವರನ್ನೆಲ್ಲಾ ಸಮಾಧಾನಮಾಡುತ್ತಾ ಅವರವರ ಶಿಬಿರದ ಬಾಗಿಲಲ್ಲಿ ಬಿಟ್ಟು ಸೋದರಮಾವನೊಡನೆ ಹೊರಟನು.

ತತಃ ಸ ತಾಂ ಮಾತುಲರಾಜಧಾನೀಂ
ಪ್ರಹೃಷ್ಟಯೋಧಾರ್ಯಜನಾಭಿರಾಮಾಂ ।
ವಿವೇಶ ರಾತ್ರೌ ರಘುವಂಶನಾಥಃ
ಸಂಸ್ತೂಯಮಾನಃ ಸ್ತುತಿಭಿರ್ನೃಸಿಂಹೈಃ　　॥ ೪೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಣಭೂಮಿವರ್ಣನೋನಾಮ
ಸಪ್ತಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ.

---

೪೦. ಭರತನು ಯುಧಾಜಿನ್ಮಹಾರಾಜನ ಅರಮನೆಗೆ ಹಿಂತಿರುಗಿ ಬರುವ ಹೊತ್ತಿಗೆ ಚೆನ್ನಾಗಿ ರಾತ್ರಿಯಾಗಿತ್ತು. ಆ ರಾತ್ರಿವೇಳೆಯಲ್ಲಿ ಸಂತೋಷಚಿತ್ತರಾಗಿದ್ದ ಯೋಧರಿಂದಲೂ, ಆರ್ಯಜನರಿಂದಲೂ ಮನೋಹರವಾಗಿದ್ದ ಅರಮನೆಯಲ್ಲಿ ಸಿಂಹ ಗರ್ಜನೆಯಂತೆ ಹೊಗಳುತ್ತಿದ್ದ ನರವೀರಮಾಗಧರ ಸ್ತೋತ್ರಗಳನ್ನು ಕೇಳುತ್ತಾ ಕೇಳುತ್ತಾ ಆ ರಘುಕುಲತಿಲಕನಾದ ಭರತನು ಪ್ರವೇಶಮಾಡಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ರಣಭೂಮಿವರ್ಣನವೆಂಬ ಹೆಸರಿನ
ಇನ್ನೂರಅರವತ್ತೇಳನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ ಅಷ್ಟಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ತಸ್ಯಾಂ ರಾತ್ರ್ಯಾಂ ವ್ಯತೀತಾಯಾಂ ಗಂಧರ್ವನಗರಾಙ್ಗನಾಃ ।
ಗಂಧರ್ವಪುತ್ರದಾರಾಶ್ಚ ರಾಜಪತ್ನ್ಯಸ್ತಥೈವ ಚ ॥ ೧ ॥

ರಣಾಜಿರಂ ತು ಸಂಪ್ರಾಪ್ಯ ರುರುದುರ್ಭೃಶದುಃಖಿತಾಃ ।
ಅಹೋ ಕೃತಾಂತೋ ಬಲವಾನ್ಯೇನ ನೋ ಬಲದರ್ಪಿತಾಃ ॥ ೨ ॥

ಅಜೇಯಾಃ ಸುರಸಂಘಾನಾಂ ಸಂಗ್ರಾಮೇ ವಿನಿಪಾತಿತಾಃ ।
ನಾತಿಭಾರೋಽಸ್ತಿ ದೈವಸ್ಯ ನಾಶಕ್ಯಂ ತಸ್ಯ ವಿದ್ಯತೇ ॥ ೩ ॥

---

## ಇನ್ನೂರಅರವತ್ತೆಂಟನೆಯ ಅಧ್ಯಾಯ.

೧. ಮಾರ್ಕಂಡೇಯನು ಹೇಳುತ್ತಾನೆ :—ವಜ್ರಮಹಾರಾಜ! ಕೇಳು. ಆ ಭಯಂಕರವಾದ ಯುದ್ಧದ ರಾತ್ರಿಯು ಕಳೆದು ಬೆಳಗಾದೊಡನೆ ಶೈಲೂಷನ ರಾಜಧಾನಿಯ ಕಡೆಯಿಂದ ಯುದ್ಧದಲ್ಲಿ ಸತ್ತವೀರರ ಹೆಂಡತಿಯರೂ, ಮಕ್ಕಳೂ, ರಾಜಪತ್ನಿಯರೂ ಸಹ ರಣರಂಗದ ಹತ್ತಿರದಲ್ಲಿ ಬಂದು ಸೇರಿದರು.

೨. ಈರೀತಿಯಾಗಿ ರಣರಂಗಕ್ಕೆ ಬಂದು ಸೇರಿದ ಸಕಲರೂ ಆ ರಣಭೂಮಿಯಲ್ಲಿ ರಾಶಿರಾಶಿಯಾಗಿ ಬಿದ್ದಿದ್ದ ಗಂಧರ್ವರ ಹೆಣಗಳನ್ನು ನೋಡಿ ನೋಡಿ ಬಹಳ ದುಃಖಾಕ್ರಾಂತರಾಗಿ ಘಟ್ಟಿಯಾಗಿ ಅಳಲಾರಂಭಿಸಿದರು. ಅಯ್ಯೋ, ಯಮನೇ, ನೀನೇ ಶಕ್ತನಯ್ಯಾ.

೩. ದೇವಾದಿದೇವತೆಗಳಿಂದಲೂ ಜಯಿಸಲಶಕ್ಯರಾದ ಬಲದರ್ಪಿತರಾದ ನಮ್ಮ ಪೋಷಕರಾದ ಗಂಧರ್ವರು ಇಲ್ಲಿ ಸತ್ತುಬಿದ್ದಿರುವರಲ್ಲಾ, ದೇವರಿಗೆ ಭಾರವಾದುದಾವುದೂ ಇಲ್ಲ. ಅಶಕ್ಯವಾದುದಾವುದೂ ಇಲ್ಲ.

**ಯೇನ ನಾಗಾಯುತಪ್ರಾಣಾ ಗಂಧರ್ವತನಯಾ ಹತಾಃ ।**
**ಯೇ ಪುರಾ ಶಯನೀಯೇಷು ಪರಾರ್ಧ್ಯೇಷು ಮದೋತ್ಕಟಾಃ ॥ ೪ ॥**

**ನ ನಿದ್ರಾಮಭಿಗಚ್ಛಂತಿ ಶೇರತೇ ತೇಽದ್ಯ ಭೂತಲೇ ।**
**ತಾಲವೃಂತಾನಿಲೈರ್ಯೇ ತು ವರಸ್ತ್ರೀಭಿಶ್ಚ ವೀಜಿತಾಃ ॥ ೫ ॥**

**ವೀಜ್ಯಂತೇ ಪತಿತಾಸ್ತೇಽದ್ಯ ಗೃಧ್ರಪತ್ರೈರ್ಮಹೀತಲೇ ।**
**ಪರಾರ್ಧ್ಯಚಂದನಾಕ್ತಾಂಗಾ ಯೇ ವಿರೇಜುಃ ಸಮಾಗತಾಃ ॥ ೬ ॥**

**ನ ರಾಜಂತೇಽದ್ಯ ತೇ ಸರ್ವೇ ಶೋಣಿತಾಕ್ತಾ ಮಹೀತಲೇ ।**
**ಆಲಿಂಗ್ಯ ಸುಷುಪುಃ ಪೂರ್ವಂ ವರೋರುಜಘನಾಃ ಸ್ತ್ರಿಯಃ ॥ ೭ ॥**

---

೪. ಯಾವ ದೇವರಿಂದ ಎಂಭತ್ತಾನೆಗಳ ಬಲವುಳ್ಳ ಗಂಧರ್ವಕುಮಾರರು ಹತರಾಗಿ ಇಲ್ಲಿ ಬಿದ್ದಿರುವರೋ, ಅಂತಹ ಈ ರಾಜಕುಮಾರರು ಮದದಿಂದ ಕೊಬ್ಬಿದವರಾಗಿ ಹಂಸತೂಲಿಕಾತಲ್ಪದಂತಹ ಅನರ್ಘ್ಯವಾದ ಸುಪ್ಪತ್ತಿಗೆಗಳ ಮೇಲೆ ಮಲಗಿಕೊಂಡಾಗ್ಯೂ ನಿದ್ದೆ ಬರದೆ ಒದ್ದಾಡುತ್ತಿದ್ದರು.

೫. ಇಂತಹ ಈ ಮಹಾಸುಖಭೋಗಿಗಳು ಇಂದು ಈ ಬರೀ ನೆಲದಮೇಲೆ ದಿಕ್ಕಿಲ್ಲದಂತೆ ಮಲಗಿರುವರಲ್ಲಾ, ತಾಳೇಗರಿಯ ಬೀಸಣಿಗೆಯನ್ನು ಹಿಡಿದುಕೊಂಡು ಗಂಧರ್ವನಾರಿಯರಿಂದ ಗಾಳಿಹಾಕಿಸಿಕೊಳ್ಳುತ್ತಿದ್ದ ಈ ಸುಕುಮಾರರ ಅವಸ್ಥೆ ಹೀಗಾಯಿತೇ ?

೬. ಈ ವಿಧವಾದ ಸುಖಭೋಗಿದಲ್ಲಿದ್ದ ಈ ರಾಜಕುಮಾರರ ಚಂದನಾದಿಗಳಿಂದ ಲೇಪಿತವಾಗುತ್ತಿದ್ದ ದೇಹಗಳನ್ನು, ಈಗ ಹದ್ದುಗಳೆರಗಿ ಅವರ ಹೆಣಗಳ ಮೇಲೆ ಗರಿಗಳನ್ನು ಕೆದರಿಕೊಡವುತ್ತಾ ಕುಳಿತುಕೊಂಡು ಕುಕ್ಕಿ ತಿನ್ನುತ್ತಿರುವುದನ್ನು ನೋಡಬಹುದೇ ?

೭. ಈ ದೇಹಗಳು ಈಗ ಹಿಂದಿನಂತೆ ಇಲ್ಲ. ಯಾವ ಈ ಸುಂದರಗಂಧರ್ವರ ದೇಹಗಳು ಕರಭೋರು (ಆನೆಯ ತೊಡೆ) ಗಳಾದ ಗಂಧರ್ವ ಸುಂದರಿಯರನ್ನಾಲಿಂಗಿಸಿಕೊಂಡು ಮಲಗಿ ನಿದ್ದಿಸುತ್ತಿದ್ದುವೋ ಅಂತಹ ಈ ದೇಹಗಳು ಎಂತಹ ದುರವಸ್ಥೆಯನ್ನು ಈಗ ಹೊಂದಿರುವುದೆಂಬುದನ್ನು ನೋಡಬಹುದೇ ?

ಯೇ ತೇಽದ್ಯ ಭೂಮಿಮಾಲಿಂಗ್ಯ ದುಃಖಶಯ್ಯಾಸು ಶೇರತೇ ।
ಹಾ ರಾಜನ್ ದೇವದರ್ಪಘ್ನ ಹಾ ರಾಜನ್‌ಭೃತ್ಯವತ್ಸಲ ॥ ೮ ॥

ಹಾ ರಾಜಂಶ್ಚಾರುಸರ್ವಾಂಗ ಹಾ ರಾಜನ್ ಸೂತವತ್ಸಲ ।
ಬಾಹುಚ್ಛಾಯಾಮುಪಾಶ್ರಿತ್ಯ ವಯಂ ಕಸ್ಯ ಜನೇಶ್ವರ ॥ ೯ ॥

ನಿರ್ಭಯಾ ದೇವದೈತ್ಯಾನಾಂ ನಿವತ್ಸ್ಯಾಮೋ ಯಥಾಸುಖಂ ।
ಸಂಪೂರ್ಣಚಂದ್ರವದನಂ ಪುತ್ರಕೋಟಿಭಿರಾವೃತಂ ॥ ೧೦ ॥

ವಿಷಮಸ್ಥಮಿತೋ ದೃಷ್ಟ್ವಾ ಯಾಸ್ಯಾಮೋ ಯಮಸಾದನಂ ।
ಸಭಾಸ್ಥಂ ತ್ವಾಮಪಶ್ಯಂತೋ ಯಾಸ್ಯಾಮೋ ಯಮಸಾದನಂ ॥ ೧೧ ॥

---

೮. ಅಂತಹ ಆ ಸುಖದೇಹಗಳೀಗ ಭೂಮಿಯಲ್ಲೊರಗಿ ಜೀವರಹಿತವಾಗಿ ನೆಲವನ್ನು ತಬ್ಬಿಕೊಂಡು ಬಿದ್ದಿರುತ್ತವೆ. ಇನ್ನೂ ಅಲ್ಲಿ ಗುಂಪು ಗುಂಪಾಗಿ ಕುಳಿತು ಸತ್ತವರ ಗುಣಗಾನಮಾಡುತ್ತಾ ಕುಳಿತಿರುವ ಜನರನ್ನು ನೋಡು. ಅವರೇನು ಹೇಳುತ್ತಿರುವರು ಕೇಳು---ಅಯ್ಯೋ! ಗಂಧರ್ವ ಮಹಾರಾಜನೇ! ದೇವತೆಗಳ ಗರ್ವವನ್ನು ಮುರಿದು ಮೆರೆಯುತ್ತಿದ್ದೆಯಲ್ಲಾ? ಭೃತ್ಯವತ್ಸಲನಾದ ಮಹಾರಾಜ! ನೀನೀಗ ಎಲ್ಲಿಗೆ ಹೋದೆ?

೯. ಅಯ್ಯೋ, ಧೊರೆಯೇ! ನಿನ್ನ ಸುಂದರವಾದ ದೇಹದ ಸೊಗಸನ್ನು ಈಗ ಹೇಗೆ ನೋಡಬಹುದೈ! ವಂದಿಮಾಗಧರ ಮೇಲೆ ಬಲು ಪ್ರೇಮವನ್ನಿಟ್ಟಿದ್ದ ಗಂಧರ್ವರಾಜನಾದ ನೀನೀಗ ಎಲ್ಲಿಗೆ ಹೋದೆಯೈ! ಇದುವರೆವಿಗೂ ನಾವು ನಿನ್ನ ಭುಜದ ನೆರಳನ್ನನುಸರಿಸಿಕೊಂಡು ಬದುಕಿಕೊಂಡಿದ್ದೆವಲ್ಲಾ?

೧೦. ನಾವಿದುವರೆಗೂ ನಿನ್ನ ಬಲದ ಮೇಲೆ ದೇವದಾನವರನ್ನೂ ಸಹ ತೃಣೀಕರಿಸಿ ಸುಖವಾಗಿ ವಾಸಮಾಡಿಕೊಂಡಿದ್ದೆವಲ್ಲಾ! ಪೂರ್ಣಚಂದ್ರನಂತೆ ಮುಖ ಕಾಂತಿಯುಳ್ಳ ಕೋಟಿ ಕೋಟಿ ಗಂಧರ್ವಪುತ್ರರಿಂದ ವಿರಾಜಿತನಾಗಿದ್ದ ನೀನದೆಲ್ಲಿಗೆ ಹೋದೆ?

೧೧. ಇಂತಹ ವಿಪನ್ನಾವಸ್ಥೆಯಲ್ಲಿರುವ ನಿನ್ನನ್ನು ನೋಡಿದ ಮೇಲೆ ನಾವೂ ಸಹ ನಿನ್ನೊಡನೆ ಯಮಪುರಿಗೆ ಹೊರಟುಬರುವೆವು. ಗಂಧರ್ವರಾಜ ಮಹಾ ಸಭೆಯಲ್ಲಿ ನಿನ್ನನ್ನು ನೋಡವೆ ಹೋದಮೇಲೆ ನಾವು ಒಂದರಗಳಿಗೆಯೂ ಈ ಲೋಕ ದಲ್ಲಿರುವುದಿಲ್ಲ.

ಏವಂ ಜನೇ ತು ಶೋಕಾರ್ತೇ ಕರುಣಂ ವಿಲಪತ್ಯಥ ।
ಗಂಧರ್ವರಾಜಪುತ್ರಾಣಾಂ ಪತ್ನ್ಯಸ್ತಾಃ ಸುಮನೋಹರಾಃ ॥ ೧೨ ॥

ತತಸ್ತಾ ದುಃಖಶೋಕಾರ್ತಾಃ ಕಾರುಣ್ಯೇ ಮಹತಿ ಸ್ಥಿತಾಃ ।
ಭರ್ತಾರಂ ಶಿರಸಾ ಹೀನಂ ಕಾಚಿದ್ಬಾಹುವಿನಾಕೃತಂ ॥ ೧೩ ॥

ದ್ವಿಧಾ ಕೃತಂ ತಥೈವಾನ್ಯಾ ಕಾಚಿತ್ಕ್ರವ್ಯಾದಭಕ್ಷಿತಂ ।
ದೃಷ್ಟ್ವಾ ರುರೋದ ದುಃಖಾರ್ತಾ ಕಾಚಿನ್ನಾಸಾದಯತ್ಯಪಿ ॥ ೧೪ ॥

ಕುಣಪೇಷು ಸ್ಖಲಂತ್ಯಸ್ತಾ ಬಭ್ರಮುಸ್ತತ್ರ ದುಃಖಿತಾಃ ।
ಉರಾಂಸಿ ಪಾಣಿಭಿರ್ಘ್ನಂತ್ಯೋ ಲೂನಯಂತ್ಯಃ ಶಿರೋರುಹಾನ್ ॥ ೧೫ ॥

ನಾವಾಪ ಯಾಸಾಂ ಭವನೇ ಪುರಾ ಸೂರ್ಯೋಽಪಿ ದರ್ಶನಂ ।
ದುಃಖಿತಾ ಮುಕ್ತಕೇಶಾಸ್ತಾ ಜನಃ ಸರ್ವೋಽಥ ಪಶ್ಯತಿ ॥ ೧೬ ॥

---

೧೨. ಈರೀತಿಯಾಗಿ ಸಾಮಾನ್ಯ ಜನರು ಕರುಣಾಜನಕವಾಗಿ ದುಃಖ ಪಡುತ್ತಾ ಇರುವ ಸಮಯದಲ್ಲೇ ಗಂಧರ್ವರಾಜರ ಪುತ್ರರ ಹೆಂಡತಿಯರು ದುಃಖ ದಿಂದ ಅಳಲಾರಂಭಿಸಿದರು.

೧೩. ಇವರು ಕರುಣಾಜನಕವಾಗುವಂತೆ ಅಳುವ ಸಮಯದಲ್ಲಿ ಒಬ್ಬಳು ತನ್ನ ಗಂಡನ ಶಿರಸ್ಸಿಲ್ಲದ ಮುಂಡವನ್ನು ನೋಡಿದಳು. ಒಬ್ಬಳು ಪತಿಯ ತೋಳು ಗಳು ಕತ್ತರಿಸಿಹೋಗಿದ್ದ ದೇಹವನ್ನು ನೋಡಿದಳು.

೧೪. ಒಬ್ಬಳು ಎರಡು ತುಂಡಾಗಿ ಕತ್ತರಿಸಿಹೋಗಿದ್ದ ತನ್ನ ಗಂಡನ ದೇಹ ವನ್ನು ಕಂಡಳು. ಕೆಲವು ಹೆಣಗಳನ್ನು ರಾಕ್ಷಸರು ಅರ್ಧ ತಿಂದು ಇನ್ನರ್ಧವನ್ನು ಹಾಗೆಯೇ ಬಿಟ್ಟು ಹೋಗಿದ್ದರು. ಈರೀತಿ ತನಗೆ ತನ್ನ ಗಂಡನ ಹೆಣವಾದರೂ ಪೂರ್ತಿಯಾಗಿ ದೊರೆಯದೇಹೋಯಿತಲ್ಲಾ ? ಎಂದು ಒಬ್ಬಳು ಅತ್ತಳು.

೧೫. ಕೆಲವರು ಹೆಣಗಳನ್ನೆಡವಿ ಬೀಳುತ್ತಿದ್ದರು. ಕೆಲವರು ಅಳುತ್ತಾ ಅಲ್ಲೆಲ್ಲಾ ಸುತ್ತಾಡುತ್ತಿದ್ದರು. ಕೆಲವರು ಹೆಂಗಸರು ತಲೆಯ ಕೂದಲನ್ನು ಬಿರಿ ಹುಯ್ದುಕೊಂಡು ಗಟ್ಟಿಯಾಗಿ ಎಲ್ಲರೆದುರಿಗೂ ಅಳುತ್ತಿದ್ದರು.

೧೬-೧೭. ಕೆಲವರು ತಮ್ಮ ತಮ್ಮ ಗಂಡಂದಿರ ಹೆಣದಮೇಲೆ ಬಿದ್ದು ಹೊರ ಳಾಡುತ್ತಿದ್ದರು. ಕೆಲವರು ಹೆಣಗಳನ್ನೇ ಆಲಂಗಿಸಿಕೊಂಡಿದ್ದರು. ಕೆಲವರು ಗಂಧರ್ವ

**ಪತಂತ್ಯುಪರಿ ಭರ್ತ್ರೂಣಾಂ ಸಮಾಲಿಂಗಂತಿ ಚಾಪರಾಃ ।**
**ರುದಂತ್ಯನ್ಯಾಸ್ತಥಾ ರಾಜನ್ಕೃತ್ಯ ಮಧುರಸ್ವರಾಃ ॥ ೧೭ ॥**

**ರುದಂತೀನಾಂ ತಥಾ ತಾಸಾಂ ರಾಜಪತ್ನ್ಯಃ ಸುದುಃಖಿತಾಃ ।**
**ರುರುದುಃ ಕರುಣಂ ರಾಜನ್ವಿಪ್ರಕೀರ್ಣಶಿರೋರುಹಾಃ ॥ ೧೮ ॥**

**ಹಾ ಕಾಂತ ಹಾ ಮಹಾರಾಜ ಹಾ ಮಹಾಜನವಲ್ಲಭ ।**
**ಹಾ ಸುರೇಶ್ವರದರ್ಪಘ್ನ ಹಾ ಶಶಾಂಕನಿಭಾನನ ॥ ೧೯ ॥**

**ಹೇ ಭರ್ತಃ ಕೇನ ತೇ ಬುದ್ಧಿರ್ಮರಣಂ ಪ್ರತಿ ಗಾಹಿತಾ ।**
**ಹಾ ರಾಜಂಸ್ತ್ವಮಿಮಾಂ ಭೂಮಿಂ ಸಮಾಲಿಂಗ್ಯ ಪ್ರಿಯಾಮಿವ ॥ ೨೦ ॥**

**ವಸುಧಾಂ ಪ್ರಿಯಬಾಹುಭ್ಯಾಂ ಸಮಾಜೇ ಕಿಂ ನ ಲಜ್ಜಸೇ ।**
**ಕಿಂ ಶೇಷೇ ಪುರತೋಽಸ್ಮಾಕಂ ವಿಶೇಷೇಣ ರಜಸ್ವಲಾಂ ॥ ೨೧ ॥**

---

ನಾರಿಯರು ತಮ್ಮ ಗಂಡಂದಿರ ಗುಣಗಳನ್ನು ಮಧುರವಾದ ಸ್ವರದಿಂದಾಲಾಪನೆಮಾಡಿಕೊಂಡು ಉಚ್ಚಸ್ವರಗಳಿಂದ ಅಳುತ್ತಿದ್ದರು.

೧೮. ಈ ಪ್ರಕಾರವಾಗಿ ರಾಜಕುಮಾರರ ಹೆಂಡತಿಯರು ದುಃಖಪಡುತ್ತಿರುವುದನ್ನು ನೋಡಿ ಶೈಲೂಷನ ಪತ್ನಿಯರು ತಮ್ಮ ಗಂಡಂದಿರ ಹೆಣವನ್ನು ನೋಡಿ ಕೂದಲುಗಳನ್ನು ಬಿಚ್ಚಿಕೊಂಡು ಎಲ್ಲರ ಮನಸ್ಸು ಕರಗುವಂತೆ ಗಟ್ಟಿಯಾಗಿ ಅತ್ತುಬಿಟ್ಟರು.

೧೯. ಅಯ್ಯೋ, ಮಹಾರಾಜ, ಎಲ್ಲಿಹೋದೆ? ಹಾ! ಕಾಂತ, ಪ್ರಾಣಪ್ರಿಯ, ಹಾ! ಗಂಧರ್ವಮಹಾರಾಜ ವಲ್ಲಭ, ಹಾ! ಸುರೇಶ್ವರದರ್ಪಹಾರಿ! ಹಾ! ಶಶಾಂಕ ಸದೃಶಾನನ!

೨೦. ಅಯ್ಯೋ, ಪತಿಯೇ, ಏತರಿಂದ ನೀನು ಇಂತಹ ಮರಣವಂ ಪಡೆಯುವ ಬುದ್ಧಿಯನ್ನವಲಂಬಿಸಿದೆಯೋ? ಕಾಣೆವಲ್ಲಾ? ಅಯ್ಯೋ, ಪ್ರಿಯನೇ, ನೀನು ಮಹಾರಾಜನಾಗಿ ನಮ್ಮೊಡನೆ ಭೋಗಪಡುತ್ತಿದ್ದವನು ಈಗ ನೆಲವನ್ನು ತಬ್ಬಿಕೊಂಡು ನಾಲಿಗೆಯನ್ನು ಕಚ್ಚಿಕೊಂಡು ಬರೀ ನೆಲದ ಮೇಲೆ ಸತ್ತುಬಿದ್ದಿರುವೆಯಲ್ಲಾ?

೨೧. ಸುಂದರಿಯರಾದ ನಿನ್ನ ಹೆಂಡತಿಯರು ನಾವೆಲ್ಲಾ ಇರುವಲ್ಲಿ ನೀನು ಸ್ವಲ್ಪವೂ ನಾಚಿಕೆಯಿಲ್ಲದೆ ರಜಸ್ವಲೆಯಾಗಿ (ಮುಟ್ಟಾಗಿ) ರುವ ಈ ವಸುಧೆಯನ್ನು

ಖೇಚರಸ್ಯಾಪಿ ತೇ ರಾಜನ್ಸತತಂ ವಸುಧಾ ಪ್ರಿಯಾ ॥ ೨೨ ॥

ನಾರಾಯಣವಚಸ್ತದ್ಧಿ ತ್ವಯಾನರ್ಥಾಯ ನ ಶ್ರುತಂ ।
ಪ್ರಿಯಾ ತೇ ಯದ್ಯಪಿ ಮಹೀ ತಥಾಪ್ಯಸ್ಮಾಸು ಪಾರ್ಥಿವ ।
ಯುಕ್ತಂ ಹಿ ಕರ್ತುಂ ದಾಕ್ಷಿಣ್ಯಂ ಯತಸ್ತ್ವಂ ಸತ್ಕುಲೋದ್ಭವಃ ॥ ೨೩ ॥

ಅತರ್ಕಿತಪ್ರಯಾಣೇನ ತ್ವಯಾ ಸ್ಮ ಪರಿಪೀಡಿತಾಃ ।
ವಾಙ್ಮಾತ್ರೇಣ ಕುರುಷ್ವಾಸ್ಮಾನ್ಸಾಂತ್ವನಂ ರಿಪುಸೂದನ ॥ ೨೪ ॥

ರಾಜ್ಞೋ ನ ಯುಕ್ತಂ ಶಯನಂ ವಿವೃತೇ ವಸುಧಾತಲೇ ।
ತಸ್ಮಾದುತ್ತಿಷ್ಠ ರಾಜೇಂದ್ರ ಶಯನಂ ಭಜ ಮಾ ಚಿರಂ ॥ ೨೫ ॥

---

ಎರಡು ಕೈಗಳಿಂದಲೂ ಈ ಸಮಾಜನೆಯರಿಗೆ ಆಲಿಂಗಿಸಿಕೊಂಡು ಮಲಗಿರುವೆಯಲ್ಲಾ?

ವಿಶೇಷಾರ್ಥ: ಯುದ್ಧಭೂಮಿಯಲ್ಲಿ ರಕ್ತನದಿಯು ಹರಿಯುತ್ತಿದ್ದುದನ್ನು ನೋಡಿ, ವಸುಧೆಯನ್ನು ಇಲ್ಲಿ ರಜಸ್ವಲೆಗೆ ಹೋಲಿಸಿರುವರೆಂದು ತಿಳಿಯಬೇಕು.

೨೨-೨೩. ಗಗನಚಾರಿಗಳಾದ ನಾವಿದ್ದರೂ ನಿನಗೆ ಭೂದೇವಿಯ ಮೇಲೆ ಇಷ್ಟವಾಯಿತೆ? (ನೀನು ಗಂಧರ್ವಲೋಕವನ್ನು ಬಿಟ್ಟು ಭೂಲೋಕಕ್ಕೆ ಬಂದುದು ಶುದ್ಧ ತಪ್ಪೆಂದು ಅಭಿಪ್ರಾಯ.) ನಾರಾಯಣಋಷಿಯು ನಿನಗೆ ಗಿಣಿಗೆ ಹೇಳಿದಂತೆ ಬುದ್ಧಿ ಹೇಳಿದನಾದರೂ ಅವನ ಮಾತನ್ನು ಲಕ್ಷಿಸದೆ ಇಂತಹ ದುರವಸ್ಥೆಗೆ ಗುರಿಯಾದೆಯಲ್ಲಾ? ಭೂಮಿಯಮೇಲೆ ನಿನಗೆ ಇಷ್ಟವಾಯಿತೆಂದೇ ಭಾವಿಸೋಣ. ಆದರೆ ನೀನು ಸತ್ಕುಲಪ್ರಸೂತನಾಗಿರುವಲ್ಲಿ ನಮ್ಮಲ್ಲೂ ದಾಕ್ಷಿಣ್ಯವಿರಬೇಕಾದುದು ನಿನ್ನ ಧರ್ಮವಲ್ಲವೇ? ಮಹಾರಾಜ!

೨೪. ನಮಗಾರಿಗೂ ಹೇಳದೆ ಕೇಳದೆ ಏಕಾಏಕಿ (ಇದ್ದಕ್ಕಿದ್ದಂತೆ) ಯಾಗಿ ನೀನು ಯುದ್ಧಕ್ಕೆ ಬಂದುಬಿಡಬಹುದೇ? ಇದನ್ನು ನೆನೆಸಿಕೊಂಡರೆ ದುಃಖದಿಂದ ಎದೆಯಕರುಳು ಕಿತ್ತುಬರುತ್ತಿರುವುದಲ್ಲಾ? ಈಗಲಾದರೂ ಎರಡು ಮಾತನಾಡಿ ನಮ್ಮನ್ನು ಸಮಾಧಾನಪಡಿಸಬಾರದೆ? .

೨೫. ಪ್ರಾಣಕಾಂತ! ನೀನು ಮಹಾರಾಜನೆನಿಸಿಕೊಂಡು ಈ ಬಟ್ಟಬಯಲಲ್ಲಿ ಮಲಗಿರಬಾರದು. ಏಳು, ನನ್ನೊಡನೆ ಅರಮನೆಗೆ ಬಾ, ಅಲ್ಲಿ ಸುಪ್ಪತ್ತಿಗೆಯ ಮೇಲೆ ಸುಖವಾಗಿ ಮಲಗಿಕೊಳ್ಳುವಿಯಂತೆ, ತಡಮಾಡಬೇಡ, ಏಳು.

ನುನ್ನಾ ವಯಂ ಮಹಾರಾಜ ಮದನೇನ ಮದೇನ ಚ ।
ಕಂಠೇ ನು ಕಂ ಗೃಹೀಷ್ಯಾಮಸ್ತ್ವಯಾ ಹೀನಾ ಜನೇಶ್ವರ ॥ ೨೬ ॥

ಕೃತಾಂತೋ ಬಲವಾನ್ರಾಜನ್ಯೇನಾಕೃಷ್ಯಾದ್ಯ ನೀಯಸೇ ।
ನಾಡಾಯನಸ್ಯ ವಚನಂ ತ್ವಯಾ ಯದಿ ಕೃತಂ ಭವೇತ್ ॥ ೨೭ ॥

ನಾಭವಿಷ್ಯದ್ವಿಯೋಗಸ್ತು ತ್ವಯಾಽಸ್ಮಾಕಂ ಜನಾಧಿಪ ।
ನಿಶ್ಚೇಷ್ಟಾಂಗಃ ಕಥಂ ತ್ವದ್ಯ ರಾಜನ್ಸ್ವಪಿಷಿ ಭೂತಲೇ ॥ ೨೮ ॥

ಉತ್ತಿಷ್ಠ ವೀರ ಚಾಸ್ಮಾಕಂ ಪರಿಷ್ವಜ್ಯ ನ ಚುಂಬಸೇ ।
ವಿಜಿತ್ಯ ಸಮರೇ ವೀರಾನ್ಹತ್ವಾ ಚ ವಸುಧಾಧಿಪಾನ್ ॥ ೨೯ ॥

---

೨೬. ಮಹಾರಾಜ! ಮದನನ ದೆಸೆಯಿಂದ ಪ್ರಮದೆಯರಾದ ನಾವು ಮದನನ ಬಾಧೆಯನ್ನು ತಾಳಲಾರದೆ ನಿನ್ನ ಕಂಠವನ್ನಾಲಂಗಿಸಿಕೊಂಡು ಮಲಗುತ್ತಿದ್ದೆವಲ್ಲಾ. ಈಗ ನೀನು ಭೂಮಿಯನ್ನು ಅವಲಂಬಿಸಿ ಬಿದ್ದಿರುವಂತೆ ನಾವೂ ಸಹ ಇದೇ ಭೂಮಿಯಮೇಲೆ ನಿನ್ನ ಕಂಠವನ್ನು ಆಲಂಗಿಸಿಕೊಂಡು ಮಲಗುವೆವು. ನೀನು ಹೋದಮೇಲೆ ನಾವು ಜೀವಿಸಲಾರೆವು.

೨೭-೨೮. ಅದಾವ ಯಮನಪಾಶದಿಂದ ಬಿಗಿಯಲ್ಪಟ್ಟು ನೀನು ಮರಣ ಹೊಂದಿದೆಯೋ, ಆ ಯಮನು ಬಲಶಾಲಿಯೇ ಅಹುದು. ನೀನು ನಾಡಾಯನನ ಮಾತನ್ನು ಕೇಳಿದ್ದರೆ ನಮಗೂ ನಿನಗೂ ಖಂಡಿತವಾಗಿಯೂ ವಿಯೋಗವುಂಟಾಗುತ್ತಿರಲಿಲ್ಲ. ಆದರೆ ನೀನು ಹೀಗೆ ಮಾಡದೆ ಹೋದುದರಿಂದ ನಿಶ್ಚೇಷ್ಟಿತವಾದ ದೇಹವುಳ್ಳವನಾಗಿ ಈ ಭೂಮಿಯ ಮೇಲೆ ಬಿದ್ದು ಸಾಯಬೇಕಾದ ಗತಿಬಂತು.

೨೯. ಮಹಾರಾಜ! ನೀನು ಹೀಗೆಲ್ಲಾ ಭೂಮಿಯ ಮೇಲೆ ಹೇಗೆ ಮಲಗಿರುತ್ತೀಯೆ. ಹಾಗೆ ಮಲಗಿರಬಾರದು. ಈಗಲೂ ಮೇಲಕ್ಕೆ ಎದ್ದೇಳು. ಎದ್ದು ನಮ್ಮನ್ನು ದೃಢವಾಗಿ ಆಲಂಗಿಸಿಕೊಂಡು ಚುಂಬನಮಾಡು. ಯುದ್ಧದಲ್ಲಿ ಶೂರರೆನಿಸಿದವರನ್ನು ಜಯಿಸಿ, ರಾಜರನ್ನೆಲ್ಲಾ ಸಂಹರಿಸು.

ಕಥಮೇಕೇನ ಯುದ್ಧೇ ತ್ವಂ ಮಾನುಷೇಣ ನಿಪಾತಿತಃ ।
ಕ್ವ ತೇ ವಪುಃ ಕ್ವ ತೇ ತೇಜಃ ಕ್ವ ಸಾ ಲಕ್ಷ್ಮೀಃ ಕ್ವ ತೇ ಬಲಂ　　॥ ೩೦ ॥

ಕ್ವ ತೇ ತದ್ವಿಮಲಂ ಛತ್ರಂ ಕ್ವ ಚ ತೇ ವರಚಾಮರಂ ।
ಕ್ವ ತತ್ಪೀಠಂಚ ಶೃಂಗಾರಂ ಕ್ವ ಚ ತೇ ತನಯಾ ವಿಭೋ　　॥ ೩೧ ॥

ಕ್ವ ಸಾ ಲೀಲಾ ಕ್ವ ಸಾ ಲಕ್ಷ್ಮೀಃ ಕ್ವ ಚ ತೇ ವರಬಂದಿನಃ ।
ವರಚಾಮರಧಾರಿಣ್ಯಃ ಕ್ವ ಚ ತಾಃ ಪರಮಾಂಗನಾಃ　　॥ ೩೨ ॥

ಅದ್ಯೈವಸ್ಮಸ್ತ್ವಯಾ ಹೀನಾ ಅದ್ಯೈವ ಸ್ಪೃಹಯಾಮಹೇ ।
ಅದ್ಯೈವ ಸ್ಮರಣೀಯಸ್ತ್ವಂ ಗತೋऽಸಿಜನವಲ್ಲಭ　　॥ ೩೩ ॥

---

೩೦. ಮಹಾರಾಜ! ನೀನು ನಾವು ಹೇಳಿದಂತೆ ಮಾಡದೆ, ನಮ್ಮ ಮಾತನ್ನು ಲಕ್ಷಿಸದೆ ಇನ್ನೂ ಮಲಗಿರುವೆಯಲ್ಲಾ. ಒಬ್ಬ ಮನುಷ್ಯಮಾತ್ರನಿಂದ ಯುದ್ಧರಂಗದಲ್ಲಿ ನೀನು ಅದೆಂತು ಸಂಹರಿಸಲ್ಪಟ್ಟೆ? ನಿನ್ನ ಸುಂದರವಾದ ದೇಹವೆಲ್ಲಿ? ನಿನ್ನ ತೇಜಸ್ಸೆಲ್ಲಿ? ನಿನ್ನ ಐಶ್ವರ್ಯವೆಲ್ಲಿ? ನಿನ್ನನ್ನು ಹೊಗಳುತ್ತಿದ್ದ ವಂದಿಮಾಗಧರೀಗೆಲ್ಲಿ? ನಿನ್ನೆರಡು ಪಾರ್ಶ್ವದಲ್ಲೂ ನಿಂತು ಚಾಮರವನ್ನು ಬೀಸುತ್ತಿದ್ದ ಗಂಧರ್ವ ಸುಂದರಿಯರೀಗೆಲ್ಲಿ?

೩೧. ನಿನ್ನ ಬಲವೆಲ್ಲೀಗ ಹೋಯಿತು? ನಿನ್ನ ವಿಮಲವಾದ ಶ್ವೇತಚ್ಛತ್ರಿಯು ಎಲ್ಲಿ? ನಿನ್ನ ಚಾಮರವೀಗೆಲ್ಲಿ ಹೋಯಿತು? ನೀನು ಕುಳಿತುಕೊಳ್ಳುತ್ತಿದ್ದ ಸಿಂಹಾಸನವೀಗೆಲ್ಲಿ? ನಿನ್ನ ಶೃಂಗಾರವೀಗೆಲ್ಲಿ ಅಡಗಿತು? ನಿನ್ನ ಮಕ್ಕಳೆಲ್ಲರೂ ಈಗೇನಾದರು?

೩೨-೩೩. ನಿನ್ನನ್ನು ಕಳೆದುಕೊಂಡ ನಿರ್ಭಾಗ್ಯರಾದ ನಾವು ಈಗ ಇನ್ನೂ ನಿನ್ನನ್ನು ಬಯಸಿದರೆ ನೀನೆಂತು ಬರುವೆ? ಈಗ ನಾವು ನಿನ್ನನ್ನು ಸುಮ್ಮನೆ ಸ್ಮರಿಸಿಕೊಳ್ಳುತ್ತಲಿದ್ದೇವೆ. ಅಷ್ಟೇ ವಿನಹ ಮತ್ತೆ ಬೇರೆ ಏನೂ ಇಲ್ಲ. ಅಯ್ಯೋ, ಜನಮನವಲ್ಲಭನೇ, ನಮ್ಮನ್ನಗಲಿ ಹೋದೆಯಾ?

ನೂನಂ ಕಾಂತತರಃ ಸ್ವರ್ಗೇ ರಾಜೇಂದ್ರ ಪ್ರಮದಾಜನಃ ।
ಯತ್ತ್ಯಕ್ತ್ವಾ ಸ್ವಜನಂ ತಸ್ಯ ರತಿರ್ಬದ್ಧಾ ತ್ವಯಾಽನಘ ॥ ೩೪ ॥

ಸ್ವಚ್ಛಂದಚಾರಿಣಾ ಕೇನ ಮತಿಃ ಶೂರನಿಷೇವಿತಾ ।
ತ್ವಯಾ ಸಾರ್ಥಯುತಾ ಲೋಕೇ ಯುದ್ಧಶ್ರದ್ಧಾ ವಿವರ್ಧಿತಾ ॥ ೩೫ ॥

ವಲ್ಲಭಸ್ಯ ಜನಸ್ಯಾಸ್ಯ ಲಾಲಿತಸ್ಯ ತಥಾ ತ್ವಯಾ ।
ದೀರ್ಘಪ್ರಯಾಣೇ ಕರ್ತವ್ಯೋ ವಾಙ್ಮಾತ್ರೇಣಾಪ್ಯನುಗ್ರಹಃ ॥ ೩೬ ॥

ವಿಸರ್ಜಯ ಜನಂ ರಾಜನ್ಕ್ರೀಡಾಮಃ ಸಹಿತಾಸ್ತ್ವಯಾ ।
ಉದ್ಯಾನೇಷು ವಿಚಿತ್ರೇಷು ವನೇಷೂಪವನೇಷು ಚ ॥ ೩೭ ॥

---

೩೪. ರಾಜೇಂದ್ರ! ನೀನು ಈಗ ಸ್ವರ್ಗಕ್ಕೆ ಹೊರಟುಹೋದೆ. ಸ್ವರ್ಗದಲ್ಲಿ ಜನರು ಬಯಸುವುದೇನು? ಪ್ರಮದಾಜನರನ್ನೇ ತಾನೇ? ಅಂತಹ ಸ್ತ್ರೀಜನರೇಯು ರಾದ ಗಂಧರ್ವನಾರಿಯರು ಇಲ್ಲೇ ನಾವೆಲ್ಲಾ ಇದೇವೆಯಲ್ಲಾ? ಇಂತಹ ನಮ್ಮನ್ನು ಬಿಟ್ಟು ನಿನಗೆ ಸುರನಾರಿಯರ ಮೇಲೆ ಮನಸ್ಸು ಹುಟ್ಟಿದುದೇಕೆ?

೩೫. ಸ್ವಚ್ಛಂದಚಾರಿಯಾದ ಯಾವನಿಂದಲೋ ನಿನ್ನ ಬುದ್ಧಿಯು ಯುದ್ಧ ಮಾರ್ಗವನ್ನನುಸರಿಸಿತು. ಹಾಗೆಯೇ ನೀನು ಅದನ್ನೇ ಬಲಪಡಿಸಿಕೊಂಡು ಯುದ್ಧ ಶ್ರದ್ಧೆಯನ್ನು ವೃದ್ಧಿಸಿಕೊಂಡೆ.

೩೬. ನಿನ್ನನ್ನು ನಂಬಿದ್ದ ನಿನ್ನಿಂದ ಪೋಷಿತರಾಗಿ ಈಗ ಇಲ್ಲಿ ಸತ್ತುಬಿದ್ದಿರುವ ಈ ಸಕಲ ಜನರೂ ತಮ್ಮ ವಲ್ಲಭನಾದ ನಿನ್ನೊಡನೆ ದೀರ್ಘಪ್ರಯಾಣಮಾಡಿರುವರು. ಇನ್ನೂ ಅನೇಕರು ಬದುಕಿ ನಮ್ಮೊಡನೆ ಸೇರಿರುವರು. ಇವರೆಲ್ಲರನ್ನೂ ಏನಾದರೂ ಒಂದು ಮಾತನಾಡಿ ಹಿಂದಕ್ಕೆ ಕಳುಹಿಸಿಕೊಡು.

೩೭. ಮಹಾರಾಜ! ಇಲ್ಲಿ ತುಂಬಾ ಜನರು ಸೇರಿ ಬಹು ಗದ್ದಲವೆದ್ದಿದೆ. ಇವರೆಲ್ಲರನ್ನೂ ಉಪಾಯಮಾಡಿ ಕಳುಹಿಸಿಬಿಡು. ಈಗ ನಿನ್ನ ಪತ್ನಿಯರಾದ ನಾವೂ ನೀನೂ ಉಳಿದುಕೊಳ್ಳುತ್ತೇವೆ. ಆಗ ನಮ್ಮೊಡನೆ ಕಲೆತು ನೀನು ವಿಚಿತ್ರವಾದ ಉದ್ಯಾನವನಗಳಲ್ಲಿಯೂ, ವನೋಪವನಗಳಲ್ಲಿಯೂ ಕಾಮಕೇಳಿಯನ್ನಾಡಿ ವಿಹರಿಸುವಿಯಂತೆ.

ವಯಮಿಾಷ್ಯಾಂ ನ ಕುರುಮಃ ಸರ್ವಲೋಕಸ್ಯ ಪಶ್ಯತಃ ।
ವಜ್ರಸಾರಮಿದಂ ನೂನಂ ಹೃದಯಂ ಸುದೃಢಂ ಕೃತಂ　　॥ ೩೮ ॥

ಗತಾಸುಮಪಿ ದೃಷ್ಟ್ವಾತ್ವಾಂ ಶತಧಾ ಯನ್ನ ದೀರ್ಯತೇ ।
ಕರ್ಪೂರಚಂದನಾದ್ರಾಂಗ ಮಹಾರ್ಹಶಯನೋಚಿತ　　॥ ೩೯ ॥

ನಿರಾಜಸೇ ನ ರಾಜೇಂದ್ರ ರುಧಿರಾಕ್ತೋ ಮಹೀತಲೇ ।
ಕ್ವ ತೇ ಭಿನ್ನಘಟಾ ನಾಗಾಸ್ತುರಗಾಃ ಕ್ವ ಚ ತೇ ಗಜಾಃ　　॥ ೪೦ ॥

ಕ್ವ ತೇ ಯೋಧಾ ಗತಾ ರಾಜನ್ ಶಕ್ರವಿಸ್ಪರ್ಧಿನೋ ರಣೇ ।
ಸೈನ್ಯೇ ಮಹತಿ ತಿಷ್ಠಂತಂ ಖಡ್ಗಬಾಣಧನುರ್ಧರಂ　　॥ ೪೧ ॥

---

೩೮. ಮಹಾರಾಜ! ನೀನು ಯಾರೊಡನೆಯಾದರೂ ಕ್ರೀಡಿಸು! ಸವ ಸವತಿಯರಾದ ನಮಗೆ ನಿಜವಾಗಿ ಹೊಟ್ಟೆಯುಕಿಚ್ಚು ಸುತರಾಂ ಇಲ್ಲ. ನೀನು ಯಾರೊಡನೆ ಭೋಗಿಸಿದರೂ ಎಲ್ಲರಂತೆ ನಾವೂ ನೋಡುತ್ತ ವಜ್ರದಂತೆ ಮನಸ್ಸನ್ನು ದೃಢಮಾಡಿ ಸುಮ್ಮನಿರುತ್ತೇವೆ, ಕಂಡೆಯಾ?

೩೯. ಅನರ್ಘವಾದ ಪಟ್ಟೆಮಂಚದ ಮೇಲೆ ಸುಪ್ಪತ್ತಿಗೆಯ ಮೇಲೆ ಮಲಗಿಕೊಂಡು ವಿಹರಿಸುತ್ತಿದ್ದ ಮಹಾರಾಜನೇ! ಪಚ್ಚಕರ್ಪೂರ, ಕೇಸರಿ ಮುಂತಾದ ಪರಿಮಳಗಂಧಗಳಿಂದ ಆದ್ರವಾದ ಅವಯವವುಳ್ಳ ನೀನು ಹೀಗೆ ಸತ್ತುಬಿದ್ದಿರುವುದನ್ನು ನೋಡುತ್ತ ನಿಂತಿದ್ದರೂ, ನಾವು ಚೂರುಚೂರಾಗಿ ನೂರಾರುಪಾಲಾಗಿ ಎದೆ ಬಿರಿದು ಸಾಯದೆ ಇನ್ನೂ ಬದುಕಿರುವೆವಲ್ಲಾ, ಅಯ್ಯೋ, ವಿಧಿಯೇ!

೪೦. ಮೈಕೈಗೆಲ್ಲಾ ರಕ್ತವನ್ನು ಬಳಿದುಕೊಂಡು ನೆಲದ ಮೇಲೆ ಮಲಗಿರುವ ನಿನ್ನ ಕಾಂತಿಹೀನವಾದ ದೇಹವನ್ನು ನೋಡಿ ನಾವೆಂತು ಸಹಿಸಬಲ್ಲೆವು? ಅಯ್ಯೋ, ಮಹಾರಾಜ! ನಿನ್ನ ಆ ಮದಿಸಿದ ಆನೆಗಳೆಲ್ಲಿ ಹೋದುವು? ಕುದುರೆಗಳೀಗೆಲ್ಲಿ ಹೋದುವು.

೪೧. ನಿನ್ನ ಶೂರವೀರರಾದ ಯೋಧ್ಧರುಗಳೀಗೆಲ್ಲಿರುವರು? ಅವರೆಲ್ಲರೂ ರಣರಂಗದಲ್ಲಿ ನಿಂತರೆ ಇಂದ್ರನನ್ನೂ ಕಹ ಎದುರಿಸಿ ಯುದ್ಧಮಾಡುತ್ತಿದ್ದರಲ್ಲಾ. ಮಹತ್ತರವಾದ ಸೈನ್ಯಮಧ್ಯದಲ್ಲಿ ಖಡ್ಗಬಾಣಧನುಸ್ಸುಗಳನ್ನು ಧರಿಸಿ ಎದೆಗೆಡದೆ ಎದು

ಕಥಂ ತ್ವಾಮನಯದ್ರಾಜನ್ಪರಲೋಕಾಯ ರಾಘವಃ ।
ಕೃತಾಂತಸಮದೃಷ್ಟ್ಯೈವ ವೇಪಥುಸ್ತೇ ಜನೇಶ್ವರ ॥ ೪೨ ॥

ಸ ಕಥಂ ಮಾನುಷೇಣಾದ್ಯ ಸಂಗ್ರಾಮೇ ವಿನಿಪಾತಿತಃ ।
ತದ್ವಯಂ ಕಿಂ ಕರಿಷ್ಯಾಮೋ ನಿರಾಶಾಸ್ತವ ಜೀವಿತೇ ॥ ೪೩ ॥

ನ ಮೇಽಸ್ತಿ ಕಲ್ಪೋ ದೃಷ್ಟಿರ್ವಾ ಮೇ ನ ಸೋ ದೃಗ್ದೃಷ್ಟಿಸಂಗತಿಃ ।
ಏವಂ ವಿಲಪಮಾನಾಸ್ತಾಃ ಶೈಲೂಷಸ್ಯ ತು ಯೋಷಿತಃ ॥ ೪೪ ॥

ಆಲಿಂಗ್ಯಾಲಿಂಗ್ಯ ತಂ ರಾಜನ್ನಿಪತಂತಿ ಮಹೀತಲೇ ।
ಶಿರಾಂಸಿ ಚ ವಿನಿಘ್ನಂತಿ ತಾಡಯಂತಿ ಭುಜಾಸ್ತಥಾ ॥ ೪೫ ॥

---

ರಿಸಿ ನಿಲ್ಲುತ್ತಿದ್ದ ಮಹಾವೀರನಾದ ನಿನ್ನನ್ನು ಭರತನು ಪರಲೋಕಕ್ಕೆ ಹೇಗೆ ಕಳುಹಿಸಿದನೋ ಕಾಣೆವಲ್ಲಾ ?

೪೨-೪೩. ಜನರು ನಿನ್ನನ್ನು ನೋಡಿದಾಗಲೆಲ್ಲಾ ಯಮನನ್ನು ಕಂಡಂತೆ ಗಡಗಡನೆ ನಡುಗಿಹೋಗುತ್ತಿದ್ದರಲ್ಲಾ ? ಅಂತಹ ದರ್ಪವುಳ್ಳ ನೀನು ಯಾವನೋ ಒಬ್ಬ ಸಾಮಾನ್ಯ ಮನುಷ್ಯನಿಂದ ತಾಡಿತನಾಗಿ ಸಂಗ್ರಾಮರಂಗದಲ್ಲಿ ಸತ್ತು ಬಿದ್ದಿರುವೆಯಲ್ಲಾ ? ನಿನ್ನ ಜೀವಿತದ ವಿಷಯದಲ್ಲಿ ಹತಾಶರಾದ ನಾವು ಈಗ ಏನು ತಾನೇ ಮಾಡಬಲ್ಲೆವು ?

೪೪. ಅಯ್ಯೋ ! ಈಗ ನಮಗೆ ಏನೂ ತೋಚುವುದೇ ಇಲ್ಲವಲ್ಲಾ ? ನಮಗೆ ಕಣ್ಣೇ ಕಾಣಿಸುವುದಿಲ್ಲವಲ್ಲಾ ? ಏನು ಮಾಡೋಣ ? ಎಲ್ಲಿ ಹೋಗೋಣ? ಹೀಗೆಂಬುದಾಗಿ ಆ ಶೈಲೂಷನ ಹೆಂಡತಿಯರೆಲ್ಲರೂ ಗಟ್ಟಿಯಾಗಿ ಅಳುತ್ತಾ ;

೪೫. ಶೈಲೂಷನ ಹೆಣವನ್ನು ಒಬ್ಬೊಬ್ಬರಾಗಿ ಆಲಿಂಗಿಸಿಯಾಲಿಂಗಿಸಿ ಭೂಮಿಯಮೇಲೆ ಬಿದ್ದು ಹೊರಳಾಡಿದರು. ಹಣೆ ಹಣೆ ಚಚ್ಚಿಕೊಂಡು, ಎದೆ ಎದೆ ಬಡಿದುಕೊಂಡು ಅತ್ತರು.

ಪಶ್ಯಂತಿ ಭೂಯಸ್ತಂ ವೀರಂ ಭೂಮಾವುತ್ಕ್ರಾಂತಜೀವಿತಂ ।
ದೃಷ್ಟ್ವಾ ಭೂಯಶ್ಚ ನಿಃಸಂಜ್ಞಾ ನಿಪತಂತಿ ಮಹೀತಲೇ ॥ ೪೬ ॥

ತಾಸಾಂ ರೋದನಶಬ್ದೇನ ಸಮಾಕ್ರಾಂತಂ ಮಹೀತಲಂ ।
ತಾಸಾಮಾಶ್ವಾಸನಂ ಚಕ್ರೇ ವಿದ್ವಾನ್ನಾಡಾಯನೋ ದ್ವಿಜಃ ॥ ೪೭ ॥

ಏತಸ್ಮಿನ್ನೇವ ಕಾಲೇ ತು ತಂ ದೇಶಮುಪರಾಜಿತಃ ।
ಗಂಧರ್ವೇಂದ್ರಃ ಸಮಭ್ಯಾಗಾದ್ಭರತೇನ ಪ್ರಚೋದಿತಃ ॥ ೪೮ ॥

ಸ ತತ್ಸ್ಥಾನಮುಪಾಭ್ಯೇತ್ಯ ಜನಂ ಸರ್ವಂ ಯಥಾವಿಧಿ ।
ಆಶ್ವಾಸಯಾಮಾಸ ತದಾ ರಾಜಾ ಚಿತ್ರರಥಃ ಶನೈಃ ॥ ೪೯ ॥

ಸತ್ಕಾರಂ ಲಂಭಯಾಮಾಸ ಶೈಲೂಷಂ ತನಯೈಃ ಸಹ ।
ರಾಜ್ಞಾ ಚಿತ್ರರಥೇನಾಥ ಗಂಧರ್ವಾಸ್ತೇ ಪ್ರಚೋದಿತಾಃ ॥ ೫೦ ॥

---

೪೬. ಪುನಃ ಪುನಃ ಆ ಹೆಣದ ಕಡೆ ನೋಡಿದರು. ನೋಡಿನೋಡಿದಾಗಲೆಲ್ಲಾ ಮೂರ್ಛೆಬಿದ್ದು ನೆಲದ ಮೇಲೊರಗುತ್ತಿದ್ದರು. ಹಾಗೆಯೇ ಏಳುತ್ತಿದ್ದರು.

೪೭. ಇವರುಗಳ ಅಳುವಿನ ಸದ್ದು, ಭೂಮಂಡಲದಲ್ಲೆಲ್ಲಾ ತುಂಬಿಹೋಯಿತು. ಈ ಸದ್ದು ಎಲ್ಲೋ ಇದ್ದ ನಾಡಾಯನನ ಕಿವಿಗೆ ಬೀಳದೆ ಇರಲಿಲ್ಲ. ಈ ರೋದನ ಧ್ವನಿಯು ಶ್ರವಣಸ್ಪರ್ಶವಾದೊಡನೆಯೇ ಇವರೆಲ್ಲರನ್ನೂ ಸಮಾಧಾನಪಡಿಸುವುದಕ್ಕಾಗಿ ನಾಡಾಯನಋಷಿಯು ಆ ರಣರಂಗದ ಮಧ್ಯಕ್ಕೆ ಬಂದು ಎಲ್ಲರನ್ನೂ ವೇದಾಂತೋಪದೇಶಪರವಾದ ವಾಕ್ಯಗಳಿಂದ ಸಮಾಹಿತರನ್ನಾಗಿಮಾಡಿದನು.

೪೮-೪೯. ಈ ಗಂಧರ್ವವಿಲಾಪ ವೃತ್ತಾಂತವು ಭರತನಿಗೆ ಗೊತ್ತಾಗಲು ಆ ಕೂಡಲೆ ಗಂಧರ್ವಸಾಮ್ರಾಟ್ ಚಿತ್ರರಥನನ್ನು ತನ್ನ ಬಳಿಗೆ ಬರಮಾಡಿಕೊಂಡವನಾಗಿ ದುಃಖಿತರ ದುಃಖವನ್ನು ನಿವಾರಣೆಮಾಡುವಂತೆ ತಿಳಿಸಿದನು. ಅದರಂತೆ ಆ ಚಿತ್ರರಥನು ರಣರಂಗಕ್ಕೆ ಪ್ರವೇಶಿಸಿದವನಾಗಿ ಅವರಿಗೆ ತಕ್ಕಂತೆ ಮಾತನಾಡಿ ಎಲ್ಲರನ್ನೂ ಮೆಲ್ಲಮೆಲ್ಲನೆ ಸಮಾಧಾನಗೊಳಿಸಿದನು.

೫೦. ಮೃತನಾದ ಶೈಲೂಷನಿಗೂ, ಅವನ ಮಕ್ಕಳಿಗೂ ಅಪರಕರ್ಮವನ್ನು ಯಥಾವಿಧಿಯಾಗಿ ನಡೆಸುವಂತೆ ಚಿತ್ರರಥನು ತನ್ನ ಕಡೆಯ ಗಂಧರ್ವರಿಗೆ ಅಪ್ಪಣೆ ಮಾಡಿದನು.

ರಾಜ್ಞಶ್ಚಕ್ರೇ ಶ್ರಿತಾಂ ಕಾಷ್ಠೈಃ ಸುಶುಷ್ಕೈರ್ಬಹುಭಿಸ್ತದಾ ।
ಪುತ್ರಾಣಾಮಸ್ಯ ಸರ್ವೇಷಾಂ ಯೋಧಾನಾಮಪ್ಯಶೇಷತಃ ।
ಚಂದನಾಗುರುಕಾಷ್ಠೈಸ್ತೇ ತಥಾ ಕಾಲೀಯಕಸ್ಯ ತು ॥ ೫೧ ॥

ಚಿತಾಂ ಗಂಧೈಶ್ಚ ತೈಲೈಶ್ಚ ಪ್ರಜ್ವಾಲ್ಯ ಚ ಘೃತೇನ ತೇ ।
ಸಂಸ್ಕಾರಯಿತ್ವಾ ತಾನ್ಸರ್ವಾನ್ನಗರಾಯ ಪ್ರವವ್ರಜುಃ ॥ ೫೨ ॥

ಗಂಧರ್ವರಾಜವಚಸಾ ತತಃ ಸರ್ವೋ ಮಹಾಜನಃ ।
ನಾಡಾಯನಂ ಪುರಸ್ಕೃತ್ಯ ಪ್ರಯಯೌ ಗಂಧಮಾದನಂ ॥ ೫೩ ॥

ನಿವೇಶಂ ಕೃತವಾಂಸ್ತತ್ರ ರಾಮಪರ್ವತರೋಧಸಿ ।
ಕೃತ್ವಾ ನಿವೇಶನಂ ತತ್ರ ಸರ್ವೇ ಚಿತ್ರರಥಾಜ್ಞಯಾ ।
ಸುಖಮೂಷುರ್ಮಹಾರಾಜ ಪಾಲ್ಯಮಾನಾ ಮಹಾತ್ಮನಾ ॥ ೫೪ ॥

---

೫೧. ಈ ರೀತಿ ಚಿತ್ರರಥನು ಆಜ್ಞೆಮಾಡಿದೊಡನೆಯೇ ಸಕಲ ಗಂಧರ್ವರೂ ಸ್ಮಶಾನಸದೃಶವಾದ ಯುದ್ಧರಂಗದ ಮಧ್ಯವಲ್ಲಿಯೇ, ಒಣಗಿದ ಸೌದೆಗಳನ್ನು ರಾಶಿ ರಾಶಿಯಾಗಿ ತರಿಸಿ ಚಿತಿಗಳನ್ನೊಟ್ಟಿದ್ದರು. ಆ ಚಿತಿಗಳಿಗೆ ಗಂಧದಚಕ್ಕೆ, ಹಾಲು ಮಡ್ಡಿ, ಅಗರು, ಧೂಪದಹುಡಿಯನ್ನೂ ಸೇರಿಸಿದರು.

೫೨. ಆ ಚಿತಿಗಳ ಮೇಲೆ ಸತ್ತ ಗಂಧರ್ವರ ಶವಗಳನ್ನು ಸಾಲುಸಾಲಾಗಿ ಮಲಗಿಸಿದರು. ಆದರ ಮೇಲೆ ಗಂಧಪೆಣ್ಣೆಗಳನ್ನು ಬಲವಾಗಿ ಸುರಿದರು. ತುಪ್ಪ ಗಳನ್ನೂ ಎಣ್ಣೆಗಳನ್ನೂ ಚಿತಿಯಲ್ಲಿ ಬೆರೆಯುವಂತೆ ಚೆನ್ನಾಗಿ ಸುರಿದರು. ಮಂತ್ರಾಗ್ನಿ ಗಳಿಂದ ಅವುಗಳನ್ನು ಸುಟ್ಟರು. ಈರೀತಿ ದಹನವಾದ ಬಳಿಕ ಚಿತ್ರರಥನು ತಾನೇ ಪ್ರತ್ಯಕ್ಷವಾಗಿ ನಿಂತು ಈ ಕೆಲಸಗಳನ್ನೆಲ್ಲಾ ಮಾಡಿಸಿ, ಅವರೆಲ್ಲರನ್ನೂ ಸಮಾಧಾನ ಮಾಡಿ ಅವರವರ ಮನೆಗಳಿಗೆ ಕಳುಹಿಸಿಕೊಟ್ಟನು.

೫೩. ಇಷ್ಟಾದ ಬಳಿಕ ಚಿತ್ರರಥನ ಆಜ್ಞಾಬದ್ಧರಾಗಿ ಸಕಲ ಗಂಧರ್ವರೂ ಸಹ ನಾಡಾಯನನನ್ನು ಮುಂದೆ ಬಿಟ್ಟುಕೊಂಡು ಸುಮುಹೂರ್ತದಲ್ಲಿ ಗಂಧಮಾದನಪರ್ವ ತಕ್ಕೆ ಪ್ರಯಾಣಬೆಳೆಸಿದರು.

೫೪. ಚಿತ್ರರಥನು ಆ ಮಹಾಪರ್ವತದ ಒಂದು ಭಾಗವಾದ ರಾಮಪರ್ವತದ ತಪ್ಪಲಿನಲ್ಲಿ ಅವರೆಲ್ಲರಿಗೂ ಮನೆಗಳನ್ನು ಕಟ್ಟಿಸಿಕೊಟ್ಟನು. ಎಲೈ, ವಜ್ರಮಹಾ

ಬಭೂವ ತತ್ರಾಪಿ ಪುರಪ್ರಧಾನೇ
ಶೈಲೂಷಪೌತ್ರಸ್ತು ಜನಸ್ಯ ರಾಜ್ಞ ।
ಗಂಧರ್ವರಾಜಸ್ತು ಚಕಾರ ತಸ್ಯ
ಸಂರಕ್ಷಣಂ ರಾಘವಮುಖ್ಯವಾಕ್ಯಾತ್ ॥ ೫೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗಂಧರ್ವಸ್ತ್ರೀವಿಲಾಪೋನಾಮಾಷ್ಟ
ಷಷ್ಟ್ಯುತ್ತರದ್ವಿಶತತಮೋಽಧ್ಯಾಯಃ.



ರಾಜನೇ! ಕೇಳು. ಈರೀತಿಯಾಗಿ ಚಿತ್ರರಥನು ಸಕಲ ಗಂಧರ್ವರಿಗೂ ಮನೆಗಳನ್ನು ಕಟ್ಟಿಸಿಕೊಟ್ಟು ಅವರೆಲ್ಲರೂ ಅಲ್ಲಿ ಸುಖವಾಗಿರುವಂತೆ ಹೇಳಿ, ತಾನೂ ಸಹ ಆ ಪರ್ವತದಲ್ಲಿ ಒಂದು ಅರಮನೆಯನ್ನು ಕಟ್ಟಿಸಿ ಸಕಲ ಗಂಧರ್ವರನ್ನೂ ಸುಖವಾಗಿ ಕಾಪಾಡಿಕೊಂಡಿದ್ದನು.

೫೫. ಹೀಗೆಯೇ ಇರುತ್ತಿರಲಾಗಿ ಭರತನು ಚಿತ್ರರಥನನ್ನು ಕರೆಯಿಸಿ ಹೊಸದಾಗಿ ನಿರ್ಮಿಸಿದ ಆ ಗಂಧರ್ವರಾಜ್ಯಕ್ಕೆ ಶೈಲೂಷನ ಮೊಮ್ಮಗನನ್ನು ದೊರೆಯನ್ನಾಗಿ ಮಾಡಿ, ಅವನಿಗೆ ತಾನು ಬುದ್ಧಿವಾದವನ್ನು ಹೇಳಿಕೊಂಡು ಇರುವಂತೆ ಚಿತ್ರರಥನಿಗೆ ಆಜ್ಞೆಮಾಡಲು, ಆರೀತಿ ಹೇಳಿದ ಭರತನ ಮಾತಿನಂತೆ ಶೈಲೂಷನ ಮೊಮ್ಮಗನಿಗೆ ರಾಜ್ಯಾಭಿಷೇಕಮಾಡಿ ಚಿತ್ರರಥನು ಅವನನ್ನು ತಾನು ಸಂರಕ್ಷಿಸಿಕೊಂಡು ಸುಖವಾಗಿದ್ದನು.

ಇಲ್ಲಿಗೆ ಶ್ರೀವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಗಂಧರ್ವಸ್ತ್ರೀವಿಲಾಪನವೆಂಬ ಹೆಸರಿನ
ಇನ್ನೂರಅರವತ್ತೆಂಟನೆಯ ಅಧ್ಯಾಯವು
ಮುಗಿದುದು.



|| ಶ್ರೀಃ ||

---

# ಅಥ ವಿಷ್ಣುಧರ್ಮೋತ್ತರ ಮಹಾಪುರಾಣೇ ಪ್ರಥಮಖಂಡೇ

## || ಏಕೋನಸಪ್ತತ್ಯುತ್ತರದ್ವಿಶತತಮೋಽಧ್ಯಾಯಃ ||

---

|| ಮಾರ್ಕಂಡೇಯ ಉವಾಚ ||

ಅಥಾಷಾಢಸ್ಯ ಮಾಸಸ್ಯ ಶುಕ್ಲಪಕ್ಷಾವಸಾನಿಕಂ ।
ಉತ್ಸವಂ ತ್ರಿದಶೇಂದ್ರಾಣಾಂ ಸಮಾಪ್ತಂ ದಿನಪಂಚಕಂ || ೧ ||

ಕ್ಷೀರೋದಶೇಷಶಯನೇ ಭಗವಾನ್ಮಧುಸೂದನಃ ।
ಯೋಗನಿದ್ರಾಂ ತದಾ ಭೇಜೇ ಲೋಕಾನಾಂ ಹಿತಕಾಮ್ಯಯಾ || ೨ ||

---

### ಇನ್ನೂರಅರವತ್ತೊಂಭತ್ತನೆಯ ಅಧ್ಯಾಯವು.

೧. ಮಾರ್ಕಂಡೇಯ ಮಹಾಮುನಿಯು ಹೇಳುತ್ತಾನೆ :—ಅನಂತರ ಆಷಾಢ ಮಾಸದ ಶುಕ್ಲಪಕ್ಷದ ಕೊನೆಯ ಐದು ದಿನಗಳು (ಪ್ರಥಮೈಕಾದಶಿ, ದ್ವಾದಶಿ, ತ್ರಯೋದಶಿ, ಚತುರ್ದಶಿ, ಪೂರ್ಣಿಮೆ) ದೇವತೆಗಳಿಗೆ ಮಹತ್ತರವಾದ ಉತ್ಸವದಿನಗಳಾಗಿದ್ದುವು. ಅದರ ಕಾರಣವೇನೆಂದರೆ :—

೨. ಭಗವಾನ್ ಮಧುಸೂದನನು ಆಷಾಢ ಶುಕ್ಲೈಕಾದಶಿ (ಶಯನೈಕಾದಶಿ) ದಿವಸ ಕ್ಷೀರಸಮುದ್ರದಲ್ಲಿ ಆದಿಶೇಷನ ಮೇಲೆ ಲೋಕಹಿತಾರ್ಥವಾಗಿ ಮಲಗಿ ಯೋಗನಿದ್ರಾಪರವಶನಾದನು.

ಭರತೋಽಪ್ಯುತ್ಸವಂ ಕೃತ್ವಾ ಪೂಜಯಿತ್ವಾ ಜನಾರ್ದನಂ ।
ಮಹೀದಾನಂ ತಥಾ ಕೃತ್ವಾ ನಕ್ತಾಶೀ ದಿನಪಂಚಕಂ ॥ ೩ ॥

ಚಾತುರ್ಮಾಸ್ಯೇ ನಿವೃತ್ತೇ ಚ ಮಧುಮಾಂಸಸ್ಯ ಭಕ್ಷಣಾತ್ ।
ವಿಸರ್ಜಯಾಮಾಸ ಗೃಹಾತ್ಪೂಜಯಿತ್ವಾ ಮಹೀಪತೀನ್ ॥ ೪ ॥

ಉಕ್ತ್ವಾ ಬಹುವಿಧೈಃ ಸಾಂತ್ವೈಃ ಪರಿಷ್ವಜ್ಯ ಸುಪೀಡಿತಂ ।
ಗಂಧರ್ವನಗರಪ್ರಾಪ್ತೈರ್ವಿಭಜ್ಯ ಧನಸಂಚಯೈಃ ॥ ೫ ॥

ಸಂಪೂಜ್ಯ ವರ್ಷಾರಾತ್ರೌ ತು ಸ್ವಕೀಯಂ ಸೈನಿಕಂ ಜನಂ ।
ಸಮ್ಮಂತ್ರ್ಯ ಪ್ರೇಷಯಾಮಾಸ ಸೋತ್ಕಂಠಂ ದಯಿತಾಜನೇ ॥ ೬ ॥

---

೩. ಭರತನೂ ಕೂಡ ದೇವತೆಗಳ ಮಾರ್ಗವನ್ನನುಸರಿಸಿ ತಾನೂ ಕೂಡ ಆ ಐದು ದಿವಸಗಳವರೆವಿಗೂ ಪರಮಪುರುಷನಾದ ಜನಾರ್ದನನನ್ನು ಪೂಜಿಸಿ ಭೂದಾನಾದಿಗಳನ್ನು ಮಾಡಿ, ಆ ಐದು ದಿವಸಗಳಲ್ಲೂ ಹಗಲು ಉಪೋಷ್ಯವಿದ್ದು ರಾತ್ರಿಕಾಲದಲ್ಲಿ ಭೋಜನಮಾಡುತ್ತಿದ್ದನು.

೪. ಶೈಲೂಷನ ಸಂಗಡ ಯುದ್ಧಮಾಡುವುದಕ್ಕಾಗಿ ತನ್ನೊಡನೆ ಬಂದಿದ್ದ ಮಹಾರಾಜರನ್ನೆಲ್ಲಾ ಚಾತುರ್ಮಾಸ್ಯ (ಆಷಾಢ, ಶ್ರಾವಣ, ಭಾದ್ರಪದ, ಆಶ್ವೀಜ) ಕಳೆಯುವವರಿಗೆ ತನ್ನ ಮನೆಯಲ್ಲಿಯೇ ಇಟ್ಟುಕೊಂಡು ಉಪಚಾರಮಾಡಿ, ಮಧುಮಾಂಸವರ್ಜ್ಯವಾದ ನಿಯಮಾಹಾರಗಳನ್ನು ಮಾಡುತ್ತಿದ್ದು, ಆ ಬಳಿಕ ಭರತನು ಸಮಸ್ತ ರಾಜರನ್ನೂ ಯಥೋಚಿತವಾಗಿ ಸನ್ಮಾನಮಾಡಿ, ಅವರವರ ಊರಿಗೆ ಕಳುಹಿಸಿಕೊಟ್ಟನು.

೫. ಅವರು ಪ್ರಯಾಣಹೊರಟಾಗ ಅವರಿಗೆ ನಾನಾವಿಧವಾದ ಸಮಾಧಾನದ ಮಾತುಗಳನ್ನು ಹೇಳಿ, ಅವರನ್ನು ಬಹು ಭದ್ರವಾಗಿ ಆಲಂಗಿಸಿಕೊಂಡು ಗಂಧರ್ವನಗರದಲ್ಲಿ ದೊರೆತ ಅಪಾರವಾದ ಧನಸಂಪತ್ತಿಯನ್ನು ಅವರೆಲ್ಲರಿಗೂ ಸಮನಾಗಿ ಹಂಚಿಕೊಟ್ಟನು.

೬-೭. ವರ್ಷಾಕಾಲವು ಸಂಪ್ರಾಪ್ತವಾಗಲು ಭರತನ ಸೈನಿಕರಲ್ಲಿ ಕೆಲವರು ತಮ್ಮ ತಮ್ಮ ಹೆಂಡತಿಯರನ್ನು ನೆನೆಸಿಕೊಂಡು ಊರಿಗೆ ಹೋಗಲು ತ್ವರೆಮಾಡಿದರು. ಅವರ ಅಭಿಪ್ರಾಯವನ್ನು ತಿಳಿದೊಡನೆಯೇ ಭರತನು ಅಂತಹವರೆಲ್ಲರನ್ನೂ ಊರಿಗೆ

ಪ್ರೇಷಯಿತ್ವಾ ಜನಂ ಪ್ರಾಯಾತ್ಕಿಂಚಿಚ್ಛೇಷಸ್ವಸೈನಿಕೈಃ ।
ಉವಾಸ ಮಾತುಲಗೃಹೇ ಭರತೋ ದೇವರಾಜವತ್ ॥ ೭ ॥

ಅವಸಚ್ಚತುರೋ ಮಾಸಾನ್ಪ್ರೀತ್ಯಾ ರಾಘವಸತ್ತಮಃ ।
ತತಃ ಕಾರ್ತಿಕಮಾಸಾದ್ಯ ಶುಕ್ಲಪಕ್ಷಾವಸಾನಿಕಂ ॥ ೮ ॥

ಉತ್ಸವಂ ವಿಪುಲಂ ಚಕ್ರೇ ಸಂಪ್ರಾಪ್ಯ ದಿನಪಂಚಕಂ ।
ಪ್ರಬೋಧಂ ದೇವದೇವಸ್ಯ ತ್ರಿದಶಾನಾಂ ಮಹೋತ್ಸವೇ ॥ ೯ ॥

ತೇಷು ದತ್ವಾ ಮಹಾದಾನಂ ಕಾರ್ತಿಕ್ಯಾಂ ಚ ವಿಶೇಷತಃ ।
ಪೂಜಯಿತ್ವಾ ಜಗನ್ನಾಥಂ ಶಂಖಚಕ್ರಗದಾಧರಂ ॥ ೧೦ ॥

---

ಕಳುಹಿಸಿ, ತನ್ನ ಜತೆಯಲ್ಲಿರಲು ಒಪ್ಪಿಕೊಂಡ ಸೈನಿಕರನ್ನು ಮಾತ್ರ ಉಳಿಸಿಕೊಂಡು ಅವರನ್ನೆಲ್ಲಾ ತನ್ನ ಸೋದರಮಾವನಾದ ಯುಧಾಜಿತನ ನಗರಕ್ಕೆ ಕರೆದುಕೊಂಡು ಹೋಗಿ, ಸ್ವರ್ಗಲೋಕದಲ್ಲಿ ದೇವೇಂದ್ರನು ಸುಖವಾಗಿರುವಂತೆ ತನ್ನ ಮಾತುಲನಾದ ಯುಧಾಜಿತನ ಕೇಕಯನಗರದಲ್ಲಿ ಸುಖವಾಗಿದ್ದನು.

೮. ಚಾತುರ್ಮಾಸ್ಯವು ಪೂರೈಸುವವರೆವಿಗೂ ಭರತನು ಅಲ್ಲಿಯೇ ಸುಖವಾಗಿದ್ದು, ಕಾರ್ತಿಕ ಶುದ್ಧ ಪೂರ್ಣಿಮೆಯು ಕಳೆಯುವವರಿಗೂ ನಿರಾತಂಕನಾಗಿ ಕಾಲ ಗಳೆದನು.

೯. ಪ್ರಬೋಧ(ಉತ್ಥಾನ) ದ್ವಾದಶಿಯು (ಕಾರ್ತಿಕ ಶುದ್ಧ ೧೨) ದಿನದಿಂದಾರಂಭಿಸಿ ಐದು ದಿವಸದವರೆವಿಗೆ ಸ್ವರ್ಗದಲ್ಲಿ ಕೋಲಾಹಲದಿಂದಲೂ, ಅಟ್ಟಹಾಸದಿಂದಲೂ ಪ್ರಬೋಧಮಹೋತ್ಸವವು ಬೆಳೆಯಿತು.

೧೦. ಭರತನು ತಾನೂ ಸಹ ಪ್ರಬೋಧೋತ್ಸವವನ್ನು ಬಹಳ ವಿಜೃಂಭಣೆಯಿಂದ ನೆರವೇರಿಸಿ, ಆ ಕಾರ್ತಿಕಮಾಸದ ಐದು ದಿವಸಗಳಲ್ಲಿಯೂ ಅನೇಕ ಮಹಾದಾನಗಳನ್ನು ಶಂಖಚಕ್ರಗದಾಪದ್ಮಧಾರಿಯಾದ ಜಗನ್ನಾಥನ ಪ್ರೀತಿಯಾಗುವಂತೆ ಮಾಡಿ ಸ್ವಾಮಿಯನ್ನು ಬಹು ವೈಭವದಿಂದ ಪೂಜಿಸಿದನು.

ಶುಭೇ ದಿನೇ ಸುನಕ್ಷತ್ರೇ ಪೂಜಯಿತ್ವಾ ದ್ವಿಜೋತ್ತಮಾನ್ ।
ಸಾಂವತ್ಸರಂ ಪುರಸ್ಕೃತ್ಯ ಸ್ಥಪತೀಂಶ್ಚ ಸ ರಾಘವಃ ॥ ೧೧ ॥

ಸಿಂಧೋರುಭಯಪಾರ್ಶ್ವೇ ತು ಸ ಚಕಾರ ಪುರದ್ವಯಂ ।
ಪುಷ್ಕರಂ ಪುಷ್ಕರಾವತ್ಯಾಂ ತಕ್ಷಂ ತಕ್ಷಶಿಲಾಂ ಪ್ರತಿ ॥ ೧೨ ॥

ಆರಂಭಂ ಪುರಯೋಃ ಕೃತ್ವಾ ಸೋಽಭಿಷಿಚ್ಯ ಸುತಾವುಭೌ ।
ಪುರದ್ವಯೋ ಮಹಾರಾಜ ವಿಧಿವದ್ಭೂರಿದಕ್ಷಿಣಃ ॥ ೧೩ ॥

ಪುಷ್ಕರೇ ಪುಷ್ಕರಂ ಪುತ್ರಂ ತದಾ ತಕ್ಷಂ ಚ ಯಾದವ ।
ಪುರದ್ವಯೋ ಸಮಾಕೀರ್ಣೇ ವಣಿಗ್ಭಿರ್ಬ್ರಾಹ್ಮಣೈಸ್ತಥಾ ॥ ೧೪ ॥

---

೧೧. ಈರೀತಿ ಪೂಜಾಕಾರ್ಯಗಳನ್ನು ನೆರವೇರಿಸಿದ ಬಳಿಕ ಶುಭದಿನ ಶುಭ ನಕ್ಷತ್ರ ಶುಭಮುಹೂರ್ತದಲ್ಲಿ ಬ್ರಾಹ್ಮಣರನ್ನು ಗುಂಪುಕೂಡಿಸಿ, ಅವರಿಗೆ ನಮಸ್ಕಾರ ಮಾಡಿ ಜೋಯಿಸರನ್ನೂ, ಬಡಗಿಗಳನ್ನು (ಶಿಲ್ಪಚತುರ) ಮುಂದೆ ಬಿಟ್ಟುಕೊಂಡು ಹೊರಟನು.

೧೨. ಈರೀತಿ ಎಲ್ಲರನ್ನೂ ಪ್ರಯಾಣಮಾಡಿಸಿ, ಅನೇಕ ಮಂದಿ ಕೆಲಸಗಾರರನ್ನಿಟ್ಟುಕೊಂಡು ಸಿಂಧೂನದಿಯ ಎರಡು ದಡಗಳಲ್ಲಿಯೂ ಎರಡು ನಗರಗಳನ್ನು ನಿರ್ಮಾಣಮಾಡಿಸಿದನು. ಅದರಲ್ಲೊಂದರ ಹೆಸರು ಪುಷ್ಕರಾವತಿ. ಪುಷ್ಕರನಿಗೆ ಆ ಪುಷ್ಕರಾವತಿಯನ್ನು ಕೊಟ್ಟು ಆ ಪಟ್ಟಣದಲ್ಲಿ ಅವನಿಗೆ ರಾಜ್ಯಾಭಿಷೇಕಮಾಡಿದನು. ಮತ್ತೊಂದು ನಗರದ ಹೆಸರು ತಕ್ಷಶಿಲಾನಗರ. ತಕ್ಷನೇ ಅದಕ್ಕಧಿಪತಿಯಾಗಿ ಪಟ್ಟಾಭಿಷಿಕ್ತನಾದನು.

೧೩. ಈರೀತಿ ತನ್ನ ಮಕ್ಕಳುಗಳಿಬ್ಬರನ್ನೂ ಆ ಊರಿನ ರಾಜರನ್ನಾಗಿ ನಿಯಮಿಸಿ ನಗರಾರಂಭಮಹೋತ್ಸವವನ್ನು ಭರತನೇ ಯಥಾವಿಧಿಯಾಗಿ ನೆರವೇರಿಸಿ ಊರ ಜನರಿಗೆಲ್ಲಾ ಭೂರಿದಕ್ಷಿಣೆಗಳನ್ನು ಕೊಟ್ಟನು.

೧೪. ಈರೀತಿ ನಿರ್ಮಿತವಾದ ಆ ಎರಡು ಊರುಗಳಲ್ಲಿಯೂ ಎರಡು ಮಕ್ಕಳನ್ನಿಟ್ಟು ಆ ಎರಡೂರುಗಳಲ್ಲಿಯೂ ಯಥೇಚ್ಛವಾಗಿ ಅಂಗಡೀಬೀದಿಗಳನ್ನೂ ಬ್ರಾಹ್ಮಣಾಗ್ರಹಾರಗಳನ್ನೂ ಕಟ್ಟಿಸಿದನು.

ಶಿಲ್ಪಿಭಿಶ್ಚ ಮಹಾರಾಜ ನಾನಾಶಿಲ್ಪೋಪಜೀವಿಭಿಃ ।
ಗೃಹಪುಂಜಸಮಾಕೀರ್ಣೇ ದೇವಾಯತನಭೂಷಣೇ ॥ ೧೫ ॥

ಪ್ರತಿಷ್ಠಿತೇ ತಥಾ ರಾಜ್ಯೇ ಪುತ್ರಯೋರ್ಭರತಸ್ತದಾ ।
ಧನರತ್ನಾಶ್ವನಾಗೈಶ್ಚ ವಿಭಜ್ಯ ತನಯಾವುಭೌ ॥ ೧೬ ॥

ಯುಧಾಜಿತಿ ಪರೀದಾಯ ಗತೇ ಸಂವತ್ಸರೇ ತದಾ ।
ಅತೀತೇ ಕಾರ್ತಿಕೇ ಮಾಸೇ ನಕ್ಷತ್ರೇ ತು ಗುಣಾನ್ವಿತೇ ॥ ೧೭ ॥

ಜಗಾಮ ಭರತಃ ಶ್ರೀಮಾನ್ರಾಮಂ ದ್ರಷ್ಟುಂ ನರಾಧಿಪ ।
ಸೋಽನುಯಾತಃ ಸುತೈರ್ವೀರೋ ಮಾತುಲೇನ ಯುಧಾಜಿತಾ ॥ ೧೮ ॥

---

೧೫. ದೇಶದೇಶಾಂತರಗಳಿಂದ ಅನೇಕಮಂದಿ ಶಿಲ್ಪಿ (ಇಂಜಿನಿಯರು) ಗಳನ್ನು ಕರೆಯಿಸಿಕೊಂಡು ಅವರಿಗೆಲ್ಲಾ ವೃತ್ತಿಗಳನ್ನು ಕಲ್ಪಿಸಿ ದೊಡ್ಡದೊಡ್ಡ ಬಂಗಲಿಗಳನ್ನೂ ಕಚೇರಿ, ಛತ್ರ, ಮಠ, ದೇವಸ್ಥಾನಗಳನ್ನೂ ಅಗಣಿತವಾಗಿ ನಿರ್ಮಾಣಮಾಡಿಸಿದನು.

೧೬. ದೇವಾಲಯಗಳಲ್ಲಿ ದೇವರುಗಳನ್ನು ಪ್ರತಿಷ್ಠಿಸಿದಂತೆ ತನ್ನ ಮಕ್ಕಳಿಬ್ಬರನ್ನೂ ಆ ರಾಜ್ಯದ್ವಯದಲ್ಲಿ ಪ್ರತಿಷ್ಠಿಸಿ ಅವರಿಬ್ಬರಿಗೂ ತಾನು ಗಂಧರ್ವರಾಜ್ಯದಲ್ಲಿ ಸಂಪಾದಿಸಿದ್ದ ಧನರತ್ನಾಶ್ವಗಜಗಳನ್ನು ಎರಡು ಸಮವಾಗಿ ಪಾಲುಮಾಡಿ ಹಂಚಿಕೊಟ್ಟನು.

೧೭. ಕಳೆದವರ್ಷ ಕಾರ್ತಿಕಮಾಸದಲ್ಲಿ ಯುಧಾಜಿತನು ರಾಮನಿಗೆ ಹೇಳಿ ಭರತನನ್ನು ಶೈಲೂಷನ ವಧೆಗಾಗಿ ಕರೆಸಿಕೊಂಡಿದ್ದ ಕೆಲಸ ಮುಗಿದಮೇಲೆ ಈವರ್ಷದ ಕಾರ್ತಿಕಮಾಸ ಕಳೆಯುವುದರೊಳಗಾಗಿ ಒಳ್ಳೇ ದಿವಸದಲ್ಲಿ ನಕ್ಷತ್ರಮುಹೂರ್ತಶುದ್ಧಿಗಳನ್ನು ನೋಡಿಸಿ ಅವನ ಪ್ರಯಾಣವನ್ನು ಗೊತ್ತುಮಾಡಿದನು.

೧೮. ಭರತನು ತನ್ನ ಸೋದರಮಾವನ ಅಪ್ಪಣೆಯಂತೆ ರಾಮನನ್ನು ನೋಡಲು ಅಯೋಧ್ಯಾಪಟ್ಟಣಕ್ಕೆ ಪ್ರಯಾಣಬೆಳಸಿದನು. ಭರತನು ಪ್ರಯಾಣ ಮಾಡುವಾಗ ಸಾಗಕಳುಹಿಸಿಕೊಡುವುದಕ್ಕಾಗಿ ಅವನ ಇಬ್ಬರು ಮಕ್ಕಳೂ ಯಧಾಜಿತನ ಜತೆಯಲ್ಲಿ ಬಂದರು.

ತೀರೇ ಸ್ವಧಾಮ್ನಸ್ತೌ ಪುತ್ರೌ ಮಾತುಲಂ ತು ಯುಧಾಜಿತಂ ।
ವಿಸರ್ಜಯಾಮಾಸ ಗೃಹಾತ್ಪರಿಷ್ವಜ್ಯ ಚ ಪೀಡಿತಂ ॥ ೧೯ ॥

ಭರತಃ ಸಾಶ್ರುನಯನೋ ಬಲೇನ ಚತುರಂಗಿಣಾ ।
ಸ್ತ್ರೋಕೇನ ಕಾಂಚನಾಂಗೇನ ರಥೇನ ಚ ತಥಾ ಯಯೌ ॥ ೨೦ ॥

ಸಂರುಧ್ಯ ಚ ರಥಾಂಸ್ತೇ ತು ಗಚ್ಛಂತಂ ಭರತಂ ತದಾ ।
ದದೃಶುರ್ದೀನಮನಸಃ ಕಿಂಚಿದಾಗತವಿಭ್ರಮಾಃ ॥ ೨೧ ॥

ಮುಹುರ್ಮುಹುಃ ಪರಾವೃತ್ಯ ಭರತಃ ಕಥಮಪ್ಯಗಾತ್ ।
ಪರಸ್ಪರಮಪಶ್ಯಂತೋ ತ್ವರಾವಂತಸ್ತಥಾ ಗತಾಃ ॥ ೨೨ ॥

---

೧೯. ತನ್ನ ಊರಿನ ಎಲ್ಲೆ ಕಟ್ಟು ಕಳೆಯುವವರಿವಿಗೂ ಯುಧಾಜಿತನು ಬಂದು ಭರತನನ್ನು ಹೋಗಿಬಾರೆಂದನು. ಆಗ ಸೋದರಮಾವನನ್ನು ಬಿಟ್ಟಿರಲಾರದೆ ಭರತನು ಸೋದರಮಾವನ ಕತ್ತನ್ನು ಬಲವಾಗಿ ಕಟ್ಟಿಕೊಂಡು ಮಕ್ಕಳಂತೆ ಅಳತೊಡಗಿದನು.

೨೦. ಯುಧಾಜಿತನೂ ಅಳಿಯನನ್ನು ಅಗಲಿರಲಾರದೆ ಬಹಳ ಕಷ್ಟದಿಂದ ಕಾಂಚನಮಯವಾದ ರಥದಮೇಲೆ ಕುಳ್ಳಿರಿಸಿ ಚತುರಂಗಬಲದೊಡನೆ ಅವನನ್ನು ಬೀಳ್ಕೊಟ್ಟನು. ಭರತನು ಕುಳಿತಿದ್ದ ರಥವು ಮುಂದಕ್ಕೆ ಚಲಿಸಿತು.

೨೧. ಊರಿನ ಜನರೆಲ್ಲರೂ ಭರತನು ಪ್ರಯಾಣಮಾಡಿದುವನ್ನು ನೋಡಿ ಅವನನ್ನು ಬಿಟ್ಟಿರಲಾರದೆ ರಥದ ಹಿಂದೆ ಓಡಿಯೋಡಿ ಬರುತ್ತಾ ಭರತನನ್ನು ಪುನಃ ಪುನಃ ನೋಡುತ್ತಾ ಕತ್ತುಬಿಗಿದುಕೊಂಡು ಬರುತ್ತಿರಲು ಅಳುವನ್ನು ಕಷ್ಟದಿಂದ ತಡೆದುಕೊಳ್ಳುತ್ತಿದ್ದರು. ಮತ್ತೆಮತ್ತೆ ಅವನನ್ನು ದೈನ್ಯದಿಂದ ನೋಡುತ್ತಾ ಹಿಂದಕ್ಕೆ ಹೋಗುತ್ತಾ ಮುಂದಕ್ಕೆ ಬರುತ್ತಾ ಬಹಳಹೊತ್ತು ಹೀಗೆಯೇ ಮಾಡುತ್ತಿದ್ದರು.

೨೨. ಭರತನೂ ಸಹ ಆ ಜನರನ್ನು ಬಿಟ್ಟು ಹೋಗಲಾರದೆ ಅವರ ದೈನ್ಯವನ್ನು ನೋಡುತ್ತಾ ಹಿಂತಿರುಗಿ ತಿರುಗಿ ಮತ್ತೆಮತ್ತೆ ನೋಡುತ್ತಾ ಬಹಳ ಕಷ್ಟದಿಂದ ಅವರನ್ನಗಲಿದನು. ಒಬ್ಬರಿಗೊಬ್ಬರು ಕಾಣುವವರೆವಿಗೂ ಹೀಗೇ ನೋಡುತ್ತಿದ್ದು ಕಣ್ಣುಮರೆಯಾದಮೇಲೆ ರಥವು ವೇಗದಿಂದ ಮುಂದಕ್ಕೋಡಿತು. ಬಹುದೂರ ರಥವು ಹೊರಟುಹೋದಮೇಲೆ ಜತೆಯಲ್ಲಿ ಬಂದಿದ್ದ ಜನರೆಲ್ಲರೂ ಯತ್ನವಿಲ್ಲದೆ ಊರಿಗೆ ಹಿಂತಿರುಗಿದರು.

ಭರತೋಽಪಿ ತಥಾ ದೇಶಾನ್ಸರಾಂಸಿ ಸರಿತಸ್ತಥಾ ।
ಗ್ರಾಮಪತ್ತನಸಂಗಾದ್ಯಾನ್ವ್ಯತಿಕ್ರಮ್ಯ ಪುರೀಂ ಯಯೌ ॥ ೨೩ ॥

ಅಥಾಸಸಾದ ಚಾಯೋಧ್ಯಾಂ ದೀರ್ಘಕಾಲಪ್ರವಾಸಕಃ ।
ಪ್ರವಿಶ್ಯ ನಗರಂ ತತ್ರ ಪತಾಕಾಧ್ವಜಸಂಕುಲಂ ॥ ೨೪ ॥

ಸುಧಾವದಾತಭವನಂ ಸಿಕ್ತಂ ಚಂದನವಾರಿಣಾ ।
ಕೃತಂ ರಾಮಾಜ್ಞಯಾ ಸರ್ವಂ ಪೂಜಿತಾಮರಬಾಲಕಂ ॥ ೨೫ ॥

ನಿರ್ಯಯೌ ಪುರತಸ್ತಸ್ಯ ಚತುರಂಗಬಲಾನ್ವಿತಃ ।
ರಾಮಾಜ್ಞಯಾ ಮಹಾತೇಜಾ ನಾಗರೈಃ ಸಹ ಲಕ್ಷ್ಮಣಃ ॥ ೨೬ ॥

---

೨೩. ಭರತನು ಅಯೋಧ್ಯಾಪಟ್ಟಣಕ್ಕೆ ಹೋಗುವಾಗ ದಾರಿಯಲ್ಲಿ ಅನೇಕ ದೇಶಗಳನ್ನೂ, ಮಾರ್ಗಮಧ್ಯದಲ್ಲಿ ಸಿಕ್ಕಿದ ಅನೇಕ ಸರೋವರಗಳನ್ನೂ, ಅನೇಕ ನದಿಗಳನ್ನೂ, ಹಳ್ಳಿಊರುನಗರಗಳನೇಕಗಳನ್ನೂ ನೋಡುತ್ತಾ ಅಯೋಧ್ಯಾನಗರದ ಸಮೀಪಕ್ಕೆ ಬಂದನು.

೨೪. ಬಹಳ ದಿವಸಗಳಿಂದ ಊರಲ್ಲಿಲ್ಲದೆ ಹೊರಟುಹೋಗಿದ್ದ ದೀರ್ಘಕಾಲ ಪ್ರವಾಸಿಯಾದ ಭರತನು ಅಯೋಧ್ಯಾಪಟ್ಟಣವನ್ನು ಪ್ರವೇಶಿಸಿದಾಗ ಊರಿನ ಎಲ್ಲಾ ಕಡೆಗಳಲ್ಲಿಯೂ ಬಣ್ಣಬಣ್ಣದ ಬಾವುಟಗಳು ಹಾರಾಡುತ್ತಿದ್ದುವು.

೨೫. ಎಲ್ಲರ ಮನೆಗಳಿಗೂ ಬೆಳ್ಳಗೆ ಸುಣ್ಣವನ್ನು ತೊಡೆದಿದ್ದರು. ಮನೆಗಳ ಮುಂದೆಲ್ಲಾ ಪನ್ನೀರುಗಳನ್ನು ಚಿಮುಕಿಸಿ ರಂಗವಲ್ಲಿಯ ಹಸೆಗಳನ್ನು ಬರೆದಿದ್ದರು. ಅಮರರಿಂದ ಸಂಪೂಜಿತನಾದ ಭರತನು ಬರುವುದಕ್ಕಿಂತ ಮುಂಚೆ ಈರೀತಿ ಊರನ್ನು ಶೃಂಗರಿಸುವಂತೆ ರಾಮನ ಅಪ್ಪಣೆಯಾಗಿತ್ತು.

೨೬. ಭರತನು ಊರಬಾಗಿಲಿಗೆ ಬಂದ ವರ್ತಮಾನವು ತಲಪಿದೊಡನೆಯೇ ಲಕ್ಷ್ಮಣನು ಚತುರಂಗಬಲಸಹಿತನಾಗಿಯೂ, ಪೌರಸದಸ್ಯರೊಡನೆಯೂ ಹೊರಟು ಭರತನಿದ್ದಲ್ಲಿಗೆ ಬಂದನು.

ಭರತಂ ಲಕ್ಷ್ಮಣೋ ದೃಷ್ಟ್ವಾ ಚಿರಕಾಲಪ್ರವಾಸಕಂ ।
ಅಭ್ಯವಾದಯತ ಪ್ರೀತ್ಯಾ ಶಿರಃ ಕೃತ್ವಾ ಮಹೀತಲೇ ॥ ೨೭ ॥

ಭರತೋ ಮೂರ್ಧ್ನ್ಯಪಾಘ್ರಾಯ ಸಂಪರಿಷ್ವಜ್ಯ ಪೀಡಿತಂ ।
ಸರ್ವತ್ರಕುಶಲಪ್ರಶ್ನಂ ತತ್ರ ಕೃತ್ವಾ ಯಥಾವಿಧಿ ॥ ೨೮ ॥

ಯಥಾರ್ಹಂ ಪೂಜಯಾಮಾಸ ಜನಂ ನಗರವಾಸಿನಂ ।
ಕುಶಲಪ್ರಶ್ನಯೋಗೇನ ಸ್ಮಿತಪೂರ್ವಾಭಿಭಾಷಿತಾ ॥ ೨೯ ॥

ಸ ತೇನ ಜನವೃಂದೇನ ಪೂಜ್ಯಮಾನೋ ಮುಹುರ್ಮುಹುಃ ।
ವಿವೇಶ ನಗರಂ ಶ್ರೀಮಾನ್ಭರತೋ ನಾಗಧೂರ್ಗತಃ ॥ ೩೦ ॥

---

೨೭. ಬಹುಕಾಲದಿಂದ ತನ್ನನ್ನಗಲಿಹೋಗಿದ್ದ ಭರತನ ಮುಖವನ್ನು ನೋಡಿದ ಕ್ಷಣದಲ್ಲಿಯೇ ಲಕ್ಷ್ಮಣನು ಬಹುಪ್ರೀತಿಭಕ್ತಿಗಳಿಂದ ಕೂಡಿದವನಾಗಿ ನೆಲದಮೇಲೆ ತಲೆಯನ್ನಿಟ್ಟು ಉದ್ದಕ್ಕೆ ಅಡ್ಡಬಿದ್ದನು.

೨೮. ಇಂತು ದೀರ್ಘದಂಡ ಪ್ರಣಾಮಮಾಡಿದ ಲಕ್ಷ್ಮಣನನ್ನು ಮೇಲಕ್ಕೆಬ್ಬಿಸಿ ಭರತನು ಭದ್ರವಾಗಿ ಅವನನ್ನಪ್ಪಿಕೊಂಡು ತಲೆಯನ್ನು ಮೂಸಿನೋಡಿ ಯಥಾವಿಧಿಯಾಗಿ ಸರ್ವತ್ರಕುಶಲಪ್ರಶ್ನೆಯನ್ನು ಮಾಡಿದನು.

೨೯. ತನ್ನನ್ನು ನೋಡಲು ಬಂದು ಅಲ್ಲಿ ನೆರದಿದ್ದ ಜನರನ್ನು ಭರತನು ಯಥೋಚಿತವಾಗಿ ಗೌರವಿಸಿ, ನಗುನಗುತ್ತಾ ತಾನೇ ಮೊದಲು ಅವರನ್ನು ಕುರಿತು ಕುಶಲಪ್ರಶ್ನೆಮಾಡಿ ಅವರ ಮನಸ್ಸನ್ನು ಆಹ್ಲಾದಗೊಳಿಸಿದನು.

೩೦. ಆಗ ಆ ಜನರು ಭರತನ ಸುಗುಣವನ್ನು ನೋಡಿ ನಾನಾವಿಧವಾಗಿ ಅವನನ್ನು ಹೊಗಳಿ ಪೂಜಿಸಿದರು. ಆ ಬಳಿಕ ಭರತನು ಆನೆಯಮೇಲೆ ಶೃಂಗರಿಸಿದ್ದ ಅಂಬಾರಿಯಮೇಲೆ ಕುಳಿತು ಪುರವನ್ನು ಪ್ರವೇಶಿಸಿದನು.

ವಿಮಾನಹರ್ಮ್ಯಪ್ರಾಸಾದಗವಾಕ್ಷಕೆಗತೇನ ತು ।
ಸ್ತ್ರೀಜನೇನ ಮಹಾತೇಜಾ ವೀಕ್ಷ್ಯಮಾಣಸ್ತು ಸಸ್ಪೃಹಂ ॥ ೩೧ ॥

ಆಸಸಾದ ಮಹಾತೇಜಾ ನರೇಂದ್ರದ್ವಾರಮಾಯತಂ ।
ತತ್ರ ವಾದಿತ್ರನಾದೋऽಭೂನ್ಮಹಾಕಲಕಸ್ತಥಾ ॥ ೩೨ ॥

ರಾಜದ್ವಾರಮಥಾಸಾದ್ಯ ಸೋऽವರುಹ್ಯ ಗಜೋತ್ತಮಾತ್ ।
ಆದಾಯ ಲಕ್ಷ್ಮಣಂ ಪಾಣೌ ಪ್ರವಿವೇಶ ತದಾ ಸಭಾಂ ॥ ೩೩ ॥

ತತ್ರ ಸಿಂಹಾಸನೇ ರಾಮಂ ಸ ದದರ್ಶ ಮಹಾಭುಜಂ ।
ಚಂದನೇನಾನುಲಿಪ್ತಾಂಗಂ ಸರ್ವಾಭರಣಭೂಷಿತಂ ॥ ೩೪ ॥

ಸಂಪೂರ್ಣಚಂದ್ರವದನಂ ನೀಲೋತ್ಪಲದಲೇಕ್ಷಣಂ ।
ದೃಷ್ಟ್ವೈವ ರಾಮಂ ಭರತಃ ಕೃತ್ವಾ ಭೂಮಿಗತಂ ಶಿರಃ ॥ ೩೫ ॥

---

೩೧. ಊರಿನಲ್ಲಿ ಮೆರವಣಿಗೆಯಾಗಿ ಬರುವಾಗ ಆನೆಯಮೇಲೆ ಕುಳಿತಿದ್ದ ಭರತನನ್ನು ತಮ್ಮತಮ್ಮ ಮನೆಗಳ ಮಹಡಿಯಮೇಲಿನ ಕಿಟಕಿಗಳ ಸಂದಿಯಿಂದ ಸಸ್ಪೃಹರಾಗಿ ನೋಡುತ್ತಿದ್ದ ನಾರೀಜನರನ್ನು ಭರತನು ಅಂಬಾರಿಯಮೇಲೆ ಕುಳಿತಿದ್ದಂತೆಯೇ ನೋಡುತ್ತಲಿದ್ದನು.

೩೨. ಸಾವಕಾಶವಾಗಿ ಮೆರವಣಿಗೆ ಬೆಳೆದ ಬಳಿಕ ಭರತನ ಸವಾರಿಯು ಅರಮನೆಯ ಆನೆಬಾಗಿಲಿನ ಬಳಿಗೆ ಬಂದಿತು. ಆಗ ಭರತನು ಅಂಬಾರಿಯಿಂದ ಕೆಳಕ್ಕಿಳಿದನು. ಕೂಡಲೆ ನಾನಾ ಮಂಗಳವಾದ್ಯಗಳು ಘೋರ್ಗರೆದುವು. ಭರತನ ದರ್ಶನಕ್ಕಾಗಿ ಜನರು ಕೋಲಾಹಲವನ್ನೆಬ್ಬಿಸಿದರು.

೩೩. ಆನೆಯಮೇಲಿನಿಂದ ಕೆಳಗಿಳಿದ ಭರತನ ಕೈಯ್ಯನ್ನು ಲಕ್ಷ್ಮಣನು ತನ್ನ ಕೈಗಳಿಂದ ಹಿಡಿದುಕೊಂಡವನಾಗಿ ರಾಜ (ರಾಮ) ನ ಸಭೆಯನ್ನು ಪ್ರವೇಶಿಸಿದನು.

೩೪-೩೫. ಆಗ ಭರತನು ಸಂಪೂರ್ಣಚಂದ್ರನಂತೆ ಮುಖಕಮಲವುಳ್ಳ ನೀಲೋತ್ಪಲದಳದಂತೆ ನಯನಗಳುಳ್ಳ ಶ್ರೀರಾಮನು, ಸಿಂಹಾಸನದಮೇಲೆ ಕುಳಿತಿದ್ದುದನ್ನು ನೋಡಿ ನೆಲದಮೇಲೆ ಹಣೆಸೋಕುವಂತೆ ಶ್ರೀರಾಮನಿಗೆ ನಮಸ್ಕರಿಸಿದನು.

ನಿಪಪಾತ ಮಹಾತೇಜಾ ಲಕ್ಷ್ಮಣೇನ ವಿಶೇಷತಃ ।
ರಾಮೋಽಪಿ ಭರತಂ ದೃಷ್ಟ್ವಾ ಸಮುತ್ಥಾಪ್ಯ ಮಹಾಭುಜಂ ॥ ೩೬ ॥

ಜಗ್ರಾಹ ಪೀಡಿತಂ ಕಂಠೇ ಮೂರ್ಧ್ನ್ಯುಪಾಘ್ರಾಯ ಚಾಸಕೃತ್ ।
ಆದಿದೇಶಾಸನಂ ತಸ್ಯ ಪೃಷ್ಟ್ವಾ ಕುಶಲಮವ್ಯಯಂ ॥ ೩೭ ॥

ನಿವೇದ್ಯ ರತ್ನಮುಖ್ಯಾನಿ ಗಂಧರ್ವಾಣಾಂ ಸ ರಾಘವಃ ।
ರಾಮಾಯ ಧರ್ಮನಿತ್ಯಾಯ ಯಥಾ ಭೇಜೇ ವರಾಸನಂ ॥ ೩೮ ॥

ಪೃಷ್ಟಸ್ಸ ರಾಮೇಣ ನಿವೇದಯಿತ್ವಾ
ವೃತ್ತಂ ಯಥಾವತ್ಪುರುಷಪ್ರವೀರಃ ।
ವಿಸರ್ಜಿತಸ್ತೇನ ಗೃಹಾಯ ಗತ್ವಾ
ಸಂಪೂಜಯಾಮಾಸ ತದಾ ಸ ವಿಷ್ಣುಂ ॥ ೩೯ ॥

---

೩೬. ಭರತನು ನಮಸ್ಕಾರಮಾಡಿದೊಡನೆಯೇ ಲಕ್ಷ್ಮಣನೂ ಸಹ ಶ್ರೀರಾಮನಿಗೆ ಅವನೊಡನೆ ತಾನೂ ನಮಸ್ಕರಿಸಿದನು. ಭರತನನ್ನು ನೋಡಿದ ಕೂಡಲೆ ಪರಬ್ರಹ್ಮಮೂರ್ತಿಯಾದ ಶ್ರೀರಾಮಚಂದ್ರ ಪರಮಾತ್ಮನು ಸಿಂಹಾಸನದಿಂದ ಕೆಳಗಿಳಿದು ಬಂದು ಮಹಾಭುಜನಾದ ಭರತನನ್ನು ಮೇಲಕ್ಕೆಬ್ಬಿಸಿದನು.

೩೭. ಮೇಲಕ್ಕೆದ್ದ ಭರತನ ಕಂಠವನ್ನು ಬಲವಾಗಿ ಅಪ್ಪಿಕೊಂಡು ರಾಮನು ಬಾರಿಬಾರಿಗೂ ಅವನ ಶಿರಸ್ಸನ್ನಾಘ್ರಾಣಿಸಿದನು. ಕೂಡಲೆ ಭರತನನ್ನು ಬೇರೊಂದು ದಿವ್ಯಾಸನದಲ್ಲಿ ಕುಳ್ಳಿರಿಸಿ ಅವ್ಯಯನಾದ ಭರತನನ್ನು ಕುಶಲಪ್ರಶ್ನೆಗಳಿಂದ ಸಂತೋಷ ಪಡಿಸಿದನು.

೩೮. ಭರತನು ಆಸನದಲ್ಲಿ ಕುಳಿತುಕೊಳ್ಳುವುದಕ್ಕಿಂತ ಮುಂಚೆಯೇ ಗಂಧರ್ವ ನಗರದಿಂದ ಆರಿಸಿಆರಿಸಿ ತಂದಿದ್ದ ಅನರ್ಘ್ಯವಾದ ಅನೇಕ ರತ್ನಗಳನ್ನು ಧರ್ಮನಿತ್ಯ ನಾದ ಶ್ರೀರಾಮಚಂದ್ರಮನ ಪಾದಾರವಿಂದಗಳಲ್ಲಿ ಸಮರ್ಪಿಸಿದನು.

೩೯. ರಾಮನು ಭರತನನ್ನು ಕುರಿತು ಅವನು ಮಾಡಿದ ಗಂಧರ್ವವಿಜಯ ವಿಚಾರವಾದ ಅನೇಕ ಪ್ರಶ್ನೆಗಳಿಗೆ ಮಾಡಿ ಅವನಿಂದ ಸರಿಯಾದ ಉತ್ತರವನ್ನು ಪಡೆದು ಸಂತೋಷಭರಿತನಾಗಿ ಅವನನ್ನು ಮನೆಗೆ ಕಳುಹಿಸಿಕೊಟ್ಟನು. ಆಗ ಆ

ಸ್ವಪ್ನೇ ತಥೋವಾಸ ಸ ರಾಮಪಾದೌ
ಚಾಸಾದ್ಯ ವೀರಃ ಸಮರೇಷ್ವಜೇಯಃ ।
ರಾಮೋಪಿ ರಾಜ್ಯಂ ಸಹಿತಸ್ತು ತೇನ
ಚಕಾರ ಸಮ್ಯಙ್ನಿಹತಾರಿಪಕ್ಷಃ ॥ ೪೦ ॥

ತತಶ್ಚತುರ್ಥೇ ಪರಿವತ್ಸರೇ ತು
ಶುಶ್ರಾವ ರಾಮಃ ಪುರಯೋಃ ಪ್ರತಾಪಂ ।
ಕೃತ್ವಾ ಸುತಾಭ್ಯಾಂ ಭರತಸ್ಯ ವಿಷ್ಣೋ-
ರ್ಮುದಂಚ ಲೇಭೇ ಪರಮಾಂ ಪ್ರವಿಷ್ಟಃ ॥ ೪೧ ॥

ವಿಷೋಽದ್ಯ ಪ್ರೋಕ್ತೋ ವಿಜಯೋ ಮಯಾ ತೇ
ರಣಾಜಿರೇ ರಾಘವನಂದನಸ್ಯ ।

---

ಭರತನು ವಿಷ್ಣುವಿನ ಅವತಾರವಾದ ಶ್ರೀರಾಮಚಂದ್ರ ಪರಬ್ರಹ್ಮನನ್ನು ತನ್ನ ಮನೆಗೆ ಕರೆಯಿಸಿಕೊಂಡು ವೈಭವದಿಂದ ಪೂಜೆಮಾಡಿ ಕೃತಾರ್ಥನಾದನು.

೪೦. ಭರತನು ಸ್ವಪ್ನದಲ್ಲಿಯೂ ಸಹ ರಾಮ ರಾಮ ರಾಮ ಎಂದು ರಾಮನ ಪಾದಗಳನ್ನೇ ಅವಸ್ಥಾತ್ರಯಗಳಲ್ಲಿಯೂ ಧ್ಯಾನಿಸುತ್ತ ರಾಮಧ್ಯಾನೈಕನಿರತನಾಗಿದ್ದನು. ರಾಮನೂ ಸಹ ಭರತನ ಸಹಾಯದಿಂದ ರಾಜ್ಯಭಾರವನ್ನು ನಡೆಯಿಸುತ್ತಾ ಸಮಸ್ತ ಶತ್ರುಗಳನ್ನೂ ನಿಗ್ರಹಿಸಿ ಪ್ರಜಾಹಿತನಿರತನಾಗಿ ವಿರಾಜಿಸಿದನು.

೪೧. ಈ ಮೇರೆ ನಾಲ್ಕು ಪರಿವತ್ಸರಗಳು ಕಳೆದಮೇಲೆ ಭರತನ ಮಕ್ಕಳಾದ ತಕ್ಷಪುಷ್ಕರರು ಮಾಡಿರುವ ರಾಜ್ಯಾಭಿವೃದ್ಧಿಕ್ರಮಗಳನ್ನೂ ಅವರ ಶೌರ್ಯವನ್ನೂ ಕೇಳಿ ಶ್ರೀರಾಮಚಂದ್ರಪರಮಾತ್ಮನು ಪರಮಾನಂದವನ್ನು ಹೊಂದಿದನು.

೪೨. ಮಾರ್ಕಂಡೇಯ ಮಹರ್ಷಿಗಳು ವಜ್ರರಾಜನನ್ನು ಕುರಿತು ಈ ಪ್ರಕಾರವಾಗಿ ಹೇಳಿದರು :—ಅಯ್ಯಾ ವಜ್ರನರಪತಿಯೇ ! ರಣರಂಗದಲ್ಲಿ ಭರತನು ಪೂರ್ಣಶೌರ್ಯದಿಂದ ನಡೆಯಿಸಿದ ಈ ವಿಜಯವೃತ್ತಾಂತವನ್ನು ನಿನ್ನೊಡನೆ ಯಥಾಕ್ರಮವಾಗಿ

ಶ್ರೋತವ್ಯಮೇತನ್ನಿಯಮೇನ ಪುಂಸಾ
ವಿಜ್ಞಾನಧರ್ಮಾರ್ಥಯಶೋಭಿರಾಮಂ　　॥ ೪೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶ್ರೀರಾಮಚಂದ್ರಭರತಸಮಾಗಮೋ
ನಾಮ್ಯೈಕೋನ ಸಪ್ತತ್ಯುತ್ತರ
ದ್ವಿಶತತಮೋಽಧ್ಯಾಯಃ.

॥ ಸಮಾಪ್ತಶ್ಚಾಯಂ ಪ್ರಥಮಖಂಡಃ ॥



---

ಹೇಳಿದೇನೆ. ಧರ್ಮಾರ್ಥಕೀರ್ತಿಗಳಿಂದ ಮನೋಹರವಾದೀ ಭರತವಿಜಯವೃತ್ತಾಂತ ವನ್ನು ಯಾರು ನಿಯಮದಿಂದ ಕೇಳುತ್ತಾರೆಯೋ ಅಂತಹವರಿಗೆ ಶ್ರೀರಾಮನು ಪ್ರಸನ್ನನಾಗಿ ಸರ್ವಾಭೀಷ್ಟಗಳನ್ನೂ ಕೊಟ್ಟು ಕಾಪಾಡುವನು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಶ್ರೀರಾಮಚಂದ್ರಭರತಸಮಾಗಮವೆಂಬ ಹೆಸರಿನ
ಇನ್ನೂರರವತ್ತೊಂಭತ್ತನೆಯ ಅಧ್ಯಾಯವು
ಮುಗಿಯಿತು.

॥ ಮಂಗಳಂ ॥



